

# ಶ್ರೀ ಗುರು ಚರಿತ್ರೆ ಗ್ರಂಥ

—:ಸುಲಭ ವಚನದಲ್ಲಿ:—


—:ಲೇಖಕರು:—

**ಕಾಶೀನಾಥ ರಾಮಚಂದ್ರ ಕುರಡಿಕೇರಿ**



—:ಪ್ರಕಾಶಕರು:—

**ಎ. ಎಂ. ಕರಡಿ.**

**ಬುಕ್-ಸೇಲ್ಲರ ಸ್ಟೇಶನ್ ರೋಡ, ಹುಬ್ಬಳ್ಳಿ.**

೧೯೬೦ ) ( ಬೆಲೆ: ೩-೦-೦

# ಶ್ರೀ ಗುರು ಚರಿತ್ರೆಯ

## ಅನುಕ್ರಮಣಿಕೆ



# ಶ್ರೀ ಗುರು ಚರಿತ್ರೆ ಗ್ರಂಥ ಪ್ರಾರಂಭ.

॥ ಓಂ ॥

# ಶ್ರೀ ಗುರು ಚರಿತ್ರೆ

***

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ! ಶ್ರೀ ಕುಲದೇವತಾಯೈನಮಃ! ಶ್ರೀಪಾದವಲ್ಲಭಾಯ ನಮಃ! ಶ್ರೀ ನರಸಿಂಹ ಸರಸ್ವತ್ಯೈನಮಃ!! ಶ್ರೀ ಗಜಾನನನೇ ! ವಿಘ್ನಹರನೆ ! ಗಿರಿಜಾತ್ಮನೆ ! ಲಂಬೋದರನೆ ! ಶೂರ್ಪಕರ್ಣನೆ ! ನಿನಗೆ ಜಯಜಯವು ! ಸುಂದರ ಮುಖನೆ ! ಬಾಲರವಿ ತೇಜನೆ ! ಪರಶುಧರನೆ ! ಚತುರ್ಭುಜನೆ ! ಉರಗಭೂಷಣನೆ ! ವಿಶಾಲಾಕ್ಷ ವಿನಾಯಕನೆ ! ವಿಶ್ವವೆಲ್ಲವನ್ನು ನಿರ್ವಿಘ್ನಮಾಡಿ ರಕ್ಷಿಸುವಿ ! ದೇವಾ ! ನಿನ್ನ ಸ್ಮರಣೆಯಿಂದ ಸಕಲ ಮನೋರಥಗಳು ಈಡೇರುವವು. ಚತುರ್ದಶ ವಿದ್ಯಾಧಿಪತಿಯಾದ ನೀನು ಮಂಗಲಕಾರ್ಯಗಳಿಗೆಲ್ಲ ಆದ್ಯಪೂಜ್ಯನು. ಬ್ರಹ್ಮಾದ್ಯ ದೇವತೆಗಳೆಲ್ಲ ನಿನ್ನನ್ನು ಸ್ತುತಿಸುವರು, ವೇದಾದಿಗಳು ಹೊಗಳುವವು. ಕೈಲಾಸಪತಿ ಶಂಕರನು ತ್ರಿಪುರ ಸಂಹರಿಸುವ ಮೊದಲು ನಿನ್ನನ್ನು ಪೂಜಿಸಿದನು. ಇಂಥ ಮಹತ್ತ್ವದ ದೇವನೇ ! ನನ್ನಲ್ಲಿ ಒಳ್ಳೆ ಮತಿಯನ್ನು ಪ್ರಕಾಶಗೊಳಿಸು. ಶ್ರೀ ಗುರು ಚರಿತ್ರವನ್ನು ಕಥನಮಾಡುವದಕ್ಕೆ ನನ್ನನ್ನು ಪೂರ್ಣದೃಷ್ಟಿಯಿಂದ ನೋಡು. ವಿದ್ಯೆ-ಬುದ್ಧಿ ದಾತಾರನಾದ ದೇವನೆ ! ನನ್ನಿಂದ ಈ ಗ್ರಂಥವು ಸಿದ್ಧ ಹೊಂದುವಂತೆ ಕೃಪೆಮಾಡು.

ಶ್ರೀವಾಗ್ದೇವತೆ ! ಬ್ರಹ್ಮಪುತ್ರಿಯೆ ! ಹಂಸವಾಹಿನಿದೇವಿಯೆ ! ನಿನ್ನ ಚರಣಗಳಿಗೆ ವಂದಿಸುವೆನು' ನನಗೆ ಪ್ರಸನ್ನಳಾಗು, ದೇವಿ ! ನೀನು ನನ್ನ ವಾಣಿಯಲ್ಲಿ ನೆಲಿಸಿ ಈ ಗ್ರಂಥದ ಲೇಖನದಲ್ಲಿ ನನ್ನನ್ನು ಪ್ರವೇಶ ಗೊಳಿಸು. ನನ್ನ ಮತಿಯನ್ನು ವಿಸ್ತೃತಗೊಳಿಸು, ಜಗನ್ಮಾತೆ ! ವೇದಶಾಸ್ತ್ರಗಳೆಲ್ಲ ನಿನ್ನ ಬರೆಹಗಳು. ನನ್ನ ಗುರುವಿನ ನಾಮದಲ್ಲಿ ನೀನು ·ಸ್ಥಿತಿಗೊಂಡು 'ನೃಸಿಂಹ–ಸರಸ್ವತಿ' ಎಂಬ ಅಭಿಧಾನವನ್ನು ಪ್ರಸಿದ್ಧಗೊಳಿಸಿದಿ, ಕೃಪಾನಿಧಿ ದೇವಿಯೆ ! ನಿನ್ನ ಚರಣ ಶರಣಾಗತನಾದ ನನಗೆ ನೀನು ಪ್ರಸನ್ನಳಾಗು.

ಸೃಷ್ಟಿಕರ್ತಾರನೆನ್ನಿಸಿದ ಚತುರ್ಮುಖನೆ ! ನಿನ್ನ ಮುಖೋದ್ಗಳಿತ ವಾಣಿಗಳೇ ಚತುರ್ವೇದಗಳಾಗಿರುವವು. ಇಂಥ ವೇದಜನಕನಾದ ನಿನ್ನ ಚರಣಗಳಿಗೆ ನನ್ನ ನಮಸ್ಕಾರವು. ದಯೆಮಾಡು.

ಶ್ರೀ ಹೃಷೀಕೇಶಾ ! ವಿಶ್ವನಾಯಕನೆ ! ಶ್ರೀ ಲಕ್ಷ್ಮಿಯಿಂದ ಯುಕ್ತನಾಗಿ ನೀನು ಯಾವಾಗಲೂ ಕ್ಷೀರಸಾಗರದಲ್ಲಿ ಇರುವಿ ! ಶಂಖ–ಚಕ್ರ–ಗದಾಧಾರಿಯೆ ! ಪದ್ಮಹಸ್ತ ಮುರಾರಿಯೆ ! ಪೀತಾಂಬರ ಧರಿಸಿದವನೆ! ದಯಾಳುವಾದ ನೀನು ಶರಣಾಗತರ ಬಯಕೆಗಳನ್ನು ಪೂರೈಸುವಿ ! ಸಕಲ ಸುರವರರಿಂದ ವಂದಿಸಿಕೊಳ್ಳಲ್ಪಡುತ್ತಿರುವ ನಿನಗೆ ನನ್ನ ನಮಸ್ಕಾರವು.

ಇನ್ನು ಇವರ ಹೊರತು ಸಮಸ್ತದೇವತೆಗಳು, ಸಿದ್ಧ-ಸಾಧ್ಯರು, ಯಕ್ಷ-ಗಂಧರ್ವರು ಇವರೆಲ್ಲರನ್ನು ವಂದಿಸಿ ಪರಾಶರಾದಿ ಕವಿಸಂಕುಲಕ್ಕೆ ನಮ್ರತೆಯಿಂದ ನಮಸ್ಕರಿಸುವೆನು. ಅವರ ದಾಸಾನುದಾಸನಾಗಿ ಕವಿತ್ವ ರಚಿಸುವ ಜ್ಞಾನವನ್ನೀಯಬೇಕೆಂದು ಪ್ರಾರ್ಥಿಸುವೆನು. ಮಹಾರಾಷ್ಟ್ರ ಭಾಷೆಯರಿಯದ ನಾನು ಅವರಿಗೆ

ವಂದಿಸಿ ನನ್ನ ವಚನಗಳಿಗೆ ಕೃಪೆಯಿಂದ ಸಹಾಯಮಾಡಬೇಕೆಂದೂ ವ್ಯಕ್ತನ್ನಮತಿಯನ್ನೀಯಬೇಕೆಂದೂ ಮತ್ತೆಮತ್ತೆ ಬೇಡಿಕೊಳ್ಳುವೆ.

ಈ ಪ್ರಕಾರ ಇವರೆಲ್ಲರನ್ನು ವಿನಯ ಪ್ರಾರ್ಥನೆಯಿಂದ ಸ್ಮರಿಸಿ ನನ್ನ ಪೂರ್ವಜರ ಪುಣ್ಯಸ್ಮರಣೆ ಮಾಡುವೆನು. ನನ್ನ ತಾಯಿಯ ಹಾಗು ತಂದೆಯ ಈ ಎರಡೂ ನಿಟ್ಟಿನ ಪೂರ್ವಜರು ಪುಣ್ಯಾತ್ಮರು. ನನ್ನದು ಆಪಸ್ತಂಭಶಾಖೆ, ಕಾಂಡಿಣ್ಯಗೋತ್ರ, ನಮ್ಮ ಮನೆತನವು 'ಸಾಖರೇ' ಎಂಬ ಉಪನಾಮದಿಂದ ಪ್ರಸಿದ್ಧಿ ಪಡೆದುದು 'ಸಾಯಂದೇವ' ಎಂಬ ಮೂಲಪುರುಷನಿಂದ. ಅವನಿಂದಲೇ ನಮ್ಮ ವಂಶವು ವಿಸ್ತೃತವಾದುದು. 'ನಾಗನಾಥ' ನೆಂಬವನು ಸಾಯಂದೇವನ ಜ್ಯೇಷ್ಠ ಪುತ್ರನು. ಈ ನಾಗನಾಥನ ಮಗ ದೇವರಾವನು, ನನ್ನ ತಂದೆ ಗಂಗಾಧರನು ಈ ದೇವರಾವನ ಮಗನು, ಇಂತು ಗಂಗಾಧರನು ನನ್ನ ಜನಕನು.

ಇನ್ನು ನನ್ನ ತಾಯಿಯ ನಿಟ್ಟಿನ ಪೂರ್ವಜರಿಗೆ ನಮಸ್ಕಾರ ಮಾಡುವೆನು. ಆ ತಾಯಿಯು ಕೌಂಡಿನ್ಯನೆಂಬುವರು ಆಶ್ವಲಾಯನ ಶಾಖೆಯವರು, ಕಾಶ್ಯಪ ಗೋತ್ರಜರು. ಈ ಗೋತ್ರದಲ್ಲಿ ಜನಿಸಿದ 'ಚೌಂಡೇಶ್ವರ' ರೆಂಬವರೇ ನನ್ನ ತಾಯಿಗೆ ಜನ್ಮವಿತ್ತವರು. 'ಚಂಪಾದೇವಿ' ಎಂಬ ನಾಮದಿಂದ ಆ ನನ್ನ ತಾಯಿಯು ತನ್ನ ಪತಿವ್ರತಾ ಧರ್ಮದಿಂದ ಎರಡೂ ನಿಟ್ಟಿನ ಮನೆತನದವರಿಂದ ಹೊಗಳಿಸಿಕೊಳ್ಳಲ್ಪಟ್ಟವಳು.

ಈ ಪ್ರಕಾರ ನನ್ನ ತಂದೆ ಗಂಗಾಧರನಿಗೂ ತಾಯಿ ಚಂಪಾದೇವಿಗೂ ನಮಸ್ಕಾರಮಾಡಿ ನನ್ನ ಗುರುವಿನ ಸ್ಮರಣೆ ಮಾಡುವೆನು. ಗಂಗಾಧರನಿಂದ ಜನ್ಮಿಸಿದ ನಾನು ಸತತವೂ ತಂದೆಯಂತೆ ಶ್ರೀ ನೃಸಿಂಹ ಸರಸ್ವತಿ ಗುರುವರರ ಧ್ಯಾನಮಾಡುವೆನು. ಆ ನನ್ನ ಗುರುವು ವೇದಾಭ್ಯಾಸಿಯೂ, ಸನ್ಯಾಸಿಯೂ, ಯತಿಯೂ,

ಯೋಗೀಶ್ವರನೂ ಹಾಗು ತಪಸ್ವಿಯೂ ಆಗಿರುವನು. ನಮ್ಮ ವಂಶದವರಿಗೆ ಪೂರ್ವಾಪರದಿಂದಲೂ ಶ್ರೀ ಗುರುವಿನ ಪ್ರಸನ್ನತೆ ಪ್ರಾಪ್ತವಾಗುತ್ತಲೇ ಬಂದಿದೆ. ಈ ಗ್ರಂಥ ಬರೆಯಲು ಆ ನನ್ನ ಗುರುವಿನ ಪ್ರೇರಣೆಯೇ. ನನ್ನ ಗುರು ಶ್ರೀ ನೃಸಿಂಹ ಸರಸ್ವತಿಯವರು ತ್ರೈಮೂರ್ತಿಯ ಪ್ರತ್ಯಕ್ಷ ಅವತಾರಿಕರು. ಅವರ ಚರಿತ್ರೆಯನ್ನು ವರ್ಣಿಸುವದು ಯಾವ ಮಾನವನಿಗೂ ಅಸಾಧ್ಯವು. ಶ್ರೀ ಗುರುವಿನ ಕೃಪಾಜ್ಞೆಯು ನನಗುಂಟಾಗಿದೆ ಎಂದು ನಾನು ಹೇಳುವೆನೇ ಹೊರತು ಆ ಗುರುದೇವನನ್ನು ಬಣ್ಣಿಸುವದಕ್ಕೆ ಅಸಮರ್ಥನಾಗಿರುವೆನು. ಪುತ್ರ–ಪೌತ್ರರನ್ನು ಅಪೇಕ್ಷಿಸುವವನು ಶ್ರೀಗುರುವಿನ ಚರಿತ್ರೆಯಿಂದ ತನ್ನ ಬಯಕೆಯನ್ನು ಪೂರ್ಣಮಾಡಿಕೊಳ್ಳುವೆನು. ಲಕ್ಷ್ಮಿಯು ಅವನ ಮನೆಯಲ್ಲಿ ಸತತವೂ ವಾಸವಾಗಿಡುವಳು. ಸಪ್ತಾಹ ಪಾರಾಯಣದಿಂದ ಗುರುಕೃಪೆಯುಂಟಾಗಿ ಭವಬಂಧನ ವಿಮೋಚನೆಯಾಗುವದು, ನಿತ್ಯವಾಚನದಿಂದ ಅಷ್ಟೈಶ್ವರ್ಯ ಲಭಿಸುವದಲ್ಲದೆ ರೋಗ–ರುಜಿಗಳ ಬಾಧೆಯಾಗಲಾರದು, ಶ್ರೋತೃಗಳೇ ! ಇಂಥ ಪುಣ್ಯ ಪವಿತ್ರವಾದ ಗುರುಚರಿತ್ರೆಯ ಕಥೆಯನ್ನು ಹೇಳುವೆನು. ಏನೊಂದು ಆಯಾಸವಿಲ್ಲದೆ ಫಲಪ್ರಾಪ್ತಿಯಾಗುವದು. ಈ ನನ್ನ ಹೇಳಿಕೆಯನ್ನು ವಿಶ್ವಾಸದಿಂದ ಗ್ರಹಿಸಿರಿ. ನನಗೆ ಶ್ರೀಗುರುಸ್ಮರಣೆಯು ಅನುಭವವುಂಟಾದುದರಿಂದಲೇ ನಿಮಗೆ ಹೇಳುವೆನು. ನಾನು ಸಾಮಾನ್ಯನೆಂದು ನಾನು ಹೇಳುವ ವಚನವನ್ನು ಧಿಕ್ಕರಿಸಬೇಡಿರಿ ಜೇನ್ನೊಣದ ಮುಖದಿಂದ ಹೊರಟ ಮಧುವು ಸರ್ವರಿಗೂ ಗ್ರಾಹ್ಯ ಹಾಗು ಪವಿತ್ರವಲ್ಲವೇ ? ಕಬ್ಬು ಡೊಂಕಾದರೆ ಅದರ ರಸವು ಡೊಂಕೇ ? ಅದೇ ಪ್ರಕಾರ ನನ್ನ ಮುಖದಿಂದ ಹೊರಟ ಗುರುವಚನಗಳು ಸರ್ವರಿಗೂ ಗ್ರಾಹ್ಯವು. ಗುರುಸ್ಮರಣೆಯ ರುಚಿಯುಳ್ಳ ಬುದ್ಧಿವಂತನು ಗುರುವಾಕ್ಯಗಳನ್ನು ದೃಢಚಿತ್ತದಿಂದ ಗ್ರಹಿಸಿ ನಿಜಾನಂದ ಸುಖವನ್ನು ಅನುಭವಿಸುವನು. ಕಾಮಧೇನುವಿನಂತಿದ್ದ ಶ್ರೀಗುರು ಚರಿತ್ರೆಯ ಶ್ರವಣವು ಜ್ಞಾನವನ್ನು ಒದಗಿಸಿಕೊಡುವದು.

ಶ್ರೀಗುರು ನೃಸಿಂಹ ಸರಸ್ವತಿ ಸ್ವಾಮಿಗಳು ಪ್ರಸಿದ್ಧವಾದ 'ಗಾಣಗಾಪುರ'ದಲ್ಲಿ ವಾಸವಾಗಿದ್ದರು. ಅವರ ಅದ್ಭುತ ಮಹಿಮೆಯನ್ನು ಹೇಳುವೆನು, ಶ್ರವಣಮಾಡಿರಿ.

ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ಅವರ ಮಹಿಮೆಯು ಸುತ್ತಲಿನ ನಾಡುಗಳಲ್ಲೆಲ್ಲ ಪಸರಿಸಿತು. ಗುರುದರ್ಶನಕ್ಕೆ ಬರುವವರಿಂದ ಆ ಗ್ರಾಮದಲ್ಲಿ ನಿತ್ಯವೂ ಯಾತ್ರೆಯ ಸ್ವರೂಪವೇ ತೋರ ಹತ್ತಿತು. ಅಲ್ಲಿಯೇ ಇದ್ದುಕೊಂಡು ಶ್ರೀಗುರುವಿನನ್ನು ಆರಾಧಿಸುವವರು ತ್ವರಿತವೇ ಇಷ್ಟಫಲವನ್ನು ಹೊಂದ ಹತ್ತಿದರು. ಅಲ್ಲಿಗೆ ಬಂದು ಅನೇಕರು ತಮ್ಮ ತಮ್ಮ ಅನೇಕ ಬಯಕೆಗಳನ್ನು ಪೂರೈಸಿಕೊಳ್ಳಹತ್ತಿದರು. ಇಂಥ ಭಕ್ತರಲ್ಲಿ 'ನಾಮಧಾರಕ' ಎಂಬ ಹೆಸರಿನ ಭಕ್ತನು ಶ್ರೀಗುರುದರ್ಶನ ಪಡೆಯುವ ನಿರ್ವಾಣಮನದಿಂದ ಅಲ್ಲಿಗೆ ಬಂದನು. ಶ್ರೀಗುರುಚರಣವನ್ನು ಕಾಣುವದಕ್ಕಾಗಿ ಹಾತೊರೆದನು. ಅವನು ತನ್ನ ಮನಸಿನಲ್ಲಿ 'ಶ್ರೀಗುರುಚರಣವನ್ನು ಕಂಡೇತೀರುವೆನು ಇಲ್ಲವಾದರೆ ಈ ಜಡದೇಹವನ್ನೇ ತೊರೆಯುವೆನು' ಎಂಬ ನಿರ್ಧಾರದಿಂದ ಹಸಿವು-ನೀರಡಿಕೆಗಳನ್ನು ತೊರೆದು ಗುರುಸ್ಮರಣೆ ಮಾಡಹತ್ತಿದನು. ಅವನು ಶ್ರೀಗುರುವನ್ನು ಉದ್ದೇಶಿಸಿ— 'ಗುರುದೇವ! ನಿನ್ನ ನಾಮಸ್ಮರಣೆಯಿಂದ ದೈನ್ಯದೂರಾಗುವದೆಂದ ಮೇಲೆ ನಿನ್ನ ಭಕ್ತನಾದ ನನ್ನನ್ನು ತಿರಸ್ಕರಿಸುವದೇಕೆ? ನಿನ್ನ ನಾಮವೆಂಬ ಸ್ಪರ್ಶಮಣಿಯು ನನ್ನ ಹೃದಯದಲ್ಲಿ ಸತತವೂ ಇರುವದು, ಅಂದಮೇಲೆ ನನಗೆ ಕಷ್ಟಪರಂಪರೆಗಳೇಕೆ? ಗುರುಮೂರ್ತಿಯೆ! ಸದಾಶಿವನೆ! ನೀನು ಸಕಲ ಭೂತಗಳಲ್ಲಿ ಆವಾಸನಾಗಿರುವಿ. ವೇದಗಳು ನಿನಗೆ ತ್ರಿಮೂರ್ತಿದೇವ ಎಂದೆನ್ನುವವು, ಕೃಪಾಸಿಂಧು ನೃಸಿಂಹ ಸರಸ್ವತಿಯೆ! ನೀನು ಭಕ್ತರಿಗೆ ಸಾರಥಿಯೆಂತಿರುವಿ' ಎಂದು ಈ ಕಲಿಯುಗದಲ್ಲಿ ಪ್ರಸಿದ್ಧವಿರುವದು, ದಯಾನಿಧಿಯೆ! ತ್ರಯಮೂರ್ತಿಯೆ

ಶ್ರೇಷ್ಠ ಗುಣವೆಂದರೆ ಭಕ್ತರಕ್ಷಣೆಯಲ್ಲವೇ ? ಕೃಪಾಸಾಗರನೆ! ತೀವ್ರದಲ್ಲಿಯೇ ಬಂದು ನನ್ನ ಅಂತಃಕರಣದಲ್ಲಿ ಪ್ರವೇಶಿಸು. ಗುರುದೇವಾ! ನನ್ನ ತಾಯ್ತಂದೆ-ಬಂಧು-ಸ್ನೇಹಿತರೆಂದರೆ ನೀನೇ! ನನ್ನ ಕುಲದೇವತೆಯೂ ನೀನೇ! ನರಹರಿ ಸರಸ್ವತಿಯೆ! ನನ್ನ ವಂಶ ಪಾರಂಪಾರ್ಯವಾಗಿ ನಿರ್ಧರಣೆಯಿಂದ ನಿನ್ನ ಸ್ಮರಣೆ ನಡೆಯುತ್ತ ಬಂದಿದೆ. ನಾನು ದಾರಿದ್ರ್ಯದಿಂದ ಸದಾ ಬಳಲುತ್ತಿರುವೆನು. ನನ್ನ ಕಷ್ಟ ನಿವಾರಣೆಗಾಗಿ ಬಂದಿರುವೆನು. ಸಕಲ ದೇವತೆಗಳಿಗೂ ಕೂಡ ನೀನೇ ದಾತಾರ ನಾಗಿರುವಿ. ಸರ್ವಜ್ಞನಾದ ನೀನು ನಿನ್ನ ದಾಧೃತ್ವದಿಂದ ವಿಶ್ವವನ್ನೇ ಪೋಷಿಸುವಿ, ನೀನು ಸರ್ವಜ್ಞನೆಂಬದು ಸರ್ವಶ್ರುತವಿದ್ದರೂ ನನ್ನ ಅಂತಃಕರಣಕ್ಕೆ ಆ ಸರ್ವಜ್ಞತ್ವದ ಪ್ರತೀತಿಯು ಉಂಟಾಗಿಲ್ಲವಲ್ಲ! ಮಗುವು ಹಸಿದಿರುವದೆಂಬದನ್ನು ನೋಡಿ ತಾಯಿ-ತಂದೆಗಳಲ್ಲಿ ದಯೆಹುಟ್ಟದೆ ಇರುವದೇ ? ಗುರುದೇವ! ಕೊಡದಹೊರತು ಕೊಡಬಾರದೆಂಬದು ನಿನ್ನ ಮನಸ್ಸಿನಲ್ಲಿರುವದೇ ? ಬಲಿ ಚಕ್ರವರ್ತಿಯು ಸಕಲ ಪೃಥ್ವಿಯನ್ನು ನಿನಗೆ ಕೊಟ್ಟರೂ ನೀನು ಅವನನ್ನೊಯ್ದು ಪಾತಾಳದಲ್ಲಿಟ್ಟೆ! ಒಬ್ಬನು ಬಂಗಾರದ ಲಂಕೆಯನ್ನು ನಿನಗೆ ಕೊಟ್ಟನು. ಇದು ಸರಿ. ಆದರೆ ಅವನಿಗೆ ಆ ಲಂಕೆಯನ್ನು ಮೊದಲು ಅದಾರು ಕೊಟ್ಟಿದ್ದರು ? ಧ್ರುವನಿಗೆ ಅಚಲ ಪದಸ್ಥಾನವನ್ನು ನೀನು ದಯಪಾಲಿಸಿದಿ, ಆದರೆ ಆ ಬಾಲಕನು ನಿನಗೇನು ಕೊಟ್ಟನು ? ಪೃಥ್ವಿಯಲ್ಲಿ ಕ್ಷತ್ರಿಯರುಳಿಯದಂತೆಮಾಡಿ ಅದನ್ನು ನೀನು ಬ್ರಾಹ್ಮಣರಿಗೆ ಕೊಟ್ಟೆ. ಆದರೆ ನಿನಗೆ ಆ ಬಗೆಗೆ ಅದಾರು ಏನು ಕೊಟ್ಟರು ? ಅನರಂತೆ ಕ್ಷುದ್ರನಾದ ನಾನು ಸೃಷ್ಟಿಯ ಪೋಷಕನಾದ ನಿನಗೇನು ಕೊಡುವದು ಸಾಧ್ಯವಿದೆ ? ನಿನ್ನಂಥ ಸಿರಿವಂತನೆಂದರೆ ನೀನೇ ಆಗಿರುವಿ, ಲಕ್ಷ್ಮಿಯು ನಿನ್ನಲ್ಲಿ ಸತತವಿರುವಳು. ಇಂಥವನಿಗೆ ನಾನೇನು ಕೊಡುವದು ?

ತಾಯಿಯ ತೊಡೆಯ ಮೇಲೆ ಮಲಗಿದ ಕೂಸು ಮೊಲೆಯುಣ್ಣುವ ಆಸೆಯಿಂದ ತನ್ನ ಬಾಯಿ ತೆಗೆಯುವದು. ಅದಕ್ಕೆ ಮೊಲೆ ಕುಡಿಸುವದಕ್ಕೆ ತಾಯಿಯು ಆ ಕೂಸಿನಿಂದ ಏನನ್ನಾದರೂ ಬೇಡುವಳೇ ? ಈ ಉದಾಹರಣೆಗಳಂತೆ 'ತಕ್ಕೊಂಡು ಕೊಡುವ ರೀತಿ ನಿನ್ನದಲ್ಲ' ಆದ್ದರಿಂದಲೇ ನಿನಗೆ ದಯಾನಿಧಿ ಎಂಬ ಹೆಸರಿದೆ. ಒಂದು ವೇಳೆ 'ಏನನ್ನೂ ಕೊಡಲು ನಾನು ಸಮರ್ಥನಲ್ಲ' ಎಂದು ನೀನು ಹೇಳಿದರೆ ಗುರುದೇವಾ ! ಹದಿನಾಲ್ಕೂ ಲೋಕಗಳಿಗೆಲ್ಲ ನೀನೇ ದಾತಾರನಲ್ಲವೇ ? ಇನ್ನು ಸೇವೆಗೆ ಪ್ರತಿಫಲವೆಂದು ನೀನು ಕೊಡುವದಾದರೆ ಇದು ನಿನ್ನ ದಾತೃತ್ವ ಗುಣಕ್ಕೆ ಶೋಭಿಸಲಾರದು. ಒಂದು ವೇಳೆ ನೀನು ಸೇವೆಯನ್ನೇ ಅಪೇಕ್ಷಿಸಿದರೆ ನನ್ನ ಪೂರ್ವಜರು ವಂಶಪರಂಪರೆ ನಿನ್ನ ಸೇವೆ ಮಾಡಿ ಅದನ್ನು ನಿನ್ನಲ್ಲಿ ಸಂಗ್ರಹಿಸಿ ಇಟ್ಟಿರುವರು. ತಂದೆಯ ಸೇವೆಯು ಮಗನನ್ನು ರಕ್ಷಿಸುವಂತೆ ಗುರುದೇವಾ ! ನೀನು ನನ್ನನ್ನು ರಕ್ಷಿಸು. ನನ್ನ ಪೂರ್ವಜರ ಸೇವೆಯು ನನ್ನ ಪೂರ್ವ ಧನವು. ಆ ಋಣವನ್ನು ನೀನು ನನಗೆ ಸಲ್ಲಿಸು. 'ನನ್ನದನ್ನು ನಾನು ತೆಗೆದುಕೊಂಡರೆ ಅದೇಕೆ ನಿನ್ನ ಮನಸ್ಸಿಗೆ ಬರಬಾರದು ? ಅದನ್ನು ನಾನು ಕೇವಲ ಹಟದಿಂದಲೇ ಬೇಡುವೆನು, ಕೊಡದಿದ್ದರೆ ತೆಗೆದುಕೊಳ್ಳುವೆನು. ಗುರುದೇವಾ ! ಒಂದು ವೇಳೆ ನೀನು ಕೊಡದಿದ್ದರೆ ವ್ಯವಹಾರ ನೀತಿಯನುಸರಿಸಿ ತೆಗೆದುಕೊಳ್ಳುವೆನು. ಇದು ಕಠಿಣವೆನ್ನಿಸಿದರೂ ನಾನು ನಿನ್ನ ವಶವರ್ತಿ ದಾಸನಲ್ಲವೇ ? ನಿನಗೆ ಸರಿಸಮಾನರಾಗಿದ್ದವರಲ್ಲಿ ನಿನ್ನ ಕಾಠಿಣ್ಯತೆ ವ್ಯಕ್ತವಾಗಲಿ, ಪ್ರಹ್ಲಾದನ ರಕ್ಷಣೆಗಾಗಿ ನೀನು ಅವನ ತಂದೆ ದೈತ್ಯನ ಮೇಲೆ ನೀನು ಕಠಿಣತೆ ತೋರಲಿಲ್ಲವೇ ? ಹಾಗೆ ಮಾತ್ರ ನಿನ್ನ ಸೇವಕನಾದ ಬಾಲಕನೆನ್ನ ಮೇಲೆ ಕಠಿಣತೆ ತೋರಿಸುವದು ಸರಿಯಲ್ಲ. ಒಂದು ವೇಳೆ ನೀನು ನನ್ನ ತಪ್ಪೆಣಿಸಿ ಕೋಪಗೊಂಡದ್ದಾದರೆ ಆ ನಿನ್ನ ಸಿಟ್ಟು ಮಗುವಿನ ಮೇಲೆ ತಾಯಿಯ ಸಿಟ್ಟಿರುವಂತೆ ಇರಲಿ. ದೇವಾ ! ನನ್ನಲ್ಲಿಯಾದರೂ ಅಂಥ ಅಪರಾಧವೇನು ? ತಂದೆ ಸಿಟ್ಟು ಮಾಡಿದರೆ ಮಗುವು

ತಾಯಿಯ ಮುಂದೆಯೂ ತಾಯಿಯು ಸಿಟ್ಟುಮಾಡಿದರೆ ತಂದೆಯ ಮುಂದೆಯೂ ಹೇಳುವದು, ಹಾಗೆ ಮಾತ್ರ ನನ್ನ ಸ್ಥಿತಿಯಿಲ್ಲ. ನನಗೆ ತಾಯಿಯೂ ನೀನೆ! ತಂದೆಯೂ ನೀನೆ! ಅಂದಮೇಲೆ ನಾನು ಅದಾರ ಮುಂದೆ ಹೇಳಿಕೊಳ್ಳಲಿ? ದೇವಾ! ಎಲ್ಲಕ್ಕೂ ನೀನೇ ಸ್ವಾಮಿ ಎಂಬದು ಜಗತ್ತಿನಲ್ಲಿ ಮೂಡಿಬಿಟ್ಟಿದೆ. ನೀನೇ ಅನಾಥ ರಕ್ಷಕನೆಂದು ಜನರೆಲ್ಲರೂ ನುಡಿಯುವರು. ಮತ್ತು ದಯಾಳು ಎಂದು ಪುರಾಣಗಳು ಹೇಳುವವು. ಇಂಥ ನೀನು ನನ್ನ ಬೇಡಿಕೆಯನ್ನು ಕಿವಿಯ ಮೇಲೆ ಹಾಕಿಕೊಳ್ಳಬಾರದೇ ಕಲ್ಲುಗಳಿಂದ ಸಹ ನೀರು ಸುರಿಸುವ ನನ್ನ ದಯಾನ್ವಿತ ನುಡಿಗಳು ನಿನ್ನ ಕಿವಿಯಲ್ಲಿ ಅದೇಕೆ ಸೇರಲೊಲ್ಲವು? ಇನ್ನೂವರೆಗೂ ನನ್ನ ಸಂಬಂಧ ನಿನ್ನಲ್ಲಿ ದಯೆಯು ಅದೇಕೆ ಹುಟ್ಟಬಾರದು?" ಎಂದನು.

ನಾಮಧಾರಕನ ವಿನಯ ವಚನಗಳನ್ನು ಕೇಳಿ ದಯಾಳು ಶ್ರೀಗುರುನಾಥನು— ಕರುವಿನ ಹತ್ತಿರ ಓಡಿ ಬರುವ ಆಕಳಿನಂತೆ ಅವನ ಬಳಿಗೆ ಬಂದನು. ಗುರುವು ತನ್ನ ಸನಿಹಕ್ಕೆ ಬಂದಕೂಡಲೆ ನಾಮಧಾರಕನು ಅವನಿಗೆ ಮನಸ್ಸಿನಿಂದ ನಮಸ್ಕರಿಸಿದನು. ತನ್ನ ತಲೆಗೂದಲುಗಳಿಂದ ಗುರುಪಾದ ರಜವನ್ನು ಹಾರಿಸಿದನು, ಆನಂದಾಶ್ರುಗಳಿಂದ ಚರಣತೊಳೆದನು, ಹಾಗು ತನ್ನ ಹೃನ್ಮಂದಿರದಲ್ಲಿ ಆ ಗುರು ಪಾದಗಳನ್ನಿರಿಸಿಕೊಂಡು ಷೋಡಶೋಪಚಾರದಿಂದ ಪೂಜಿಸಿದನು. ಆನಂದಭರಿತನಾದನು. ಶ್ರೀಗುರುವು ಸಂತುಷ್ಟನಾಗಿ ಭಕ್ತನ ಹೃದಯದಲ್ಲಿ ವಾಸವಾದನು.

—o—

# ೨ನೆಯ ಅಧ್ಯಾಯ

[illegible]-ಗುರುಭ್ಯೋನಮಃ॥ ನಾಮಧಾರಕನು ಗುರುಧ್ಯಾನ ಧ್ಯಾನದೊಂದಿಗೆ ಗಾಣಗಾಪುರಕ್ಕೆ [illegible] [illegible]ಯಾಸದಿಂದ ಬಳಲಿದನು. ಬಳಲಿಕೆ ಹೆಚ್ಚಾಗಿ ದಾರಿಯಲ್ಲಿ ಅವನು ಮರದಡಿಯನ್ನು ಆಶ್ರಯಿಸಿ ಮಲಗಿದನು. ಕ್ಷಣಮಾತ್ರದಲ್ಲಿಯೇ ಗುರುಸ್ಮರಣೆಯ ಜೊತೆಗೆ ಅವನು ನಿದ್ರೆ ಹೋದನು. ಆ ನಿದ್ರೆಯಲ್ಲಿಯೇ ಅವನು ಸ್ವಪ್ನಕಂಡನು. ಕನಸಿನಲ್ಲಿ ಅವನಿಗೆ ಜಟಾಧಾರಿಯೂ, ಭಸ್ಮಾಂಕಿತನೂ, ಹುಲಿದೊಗಲನ್ನು ಉಟ್ಟವನೂ ಆದ ಒಬ್ಬ ಯೋಗೀಶ್ವರನ ದರ್ಶನವಾಯಿತು. ಮತ್ತು ಆ ಯತಿಯು ನಾಮಧಾರಕನ ಹತ್ತಿರ ಬಂದು ಅವನ ಹಣೆಗೆ ಭಸ್ಮ ಲೇಪಿಸಿದಂತೆಯೂ ಅಭಯಹಸ್ತನೀಡಿ ಆಶ್ವಾಸನ ಕೊಟ್ಟಂತೆಯೂ ಆಗಿದ್ದಿತು. ಇಷ್ಟೊಂದು ಕನಸನ್ನು ಕಂಡ ನಾಮಧಾರಕನು ಆ ಕೂಡಲೇ ಎಚ್ಚತ್ತು ಸುತ್ತುಮುತ್ತು ನೋಡಿದನು. ತಾನು ಧ್ಯಾನಿಸುತ್ತಿದ್ದ ಮೂರ್ತಿಯನ್ನು ಕನಸಿನಲ್ಲಿ ಕಂಡ ಅವನು ಈಗ ಎಚ್ಚರಾಗಿ ಪ್ರತ್ಯಕ್ಷ ನೋಡಿದನು. ವಿಸ್ಮಯಪಟ್ಟನು. ಹಾಗೇ ಮುಂದರಿದು ಆ ಯೋಗೀಶ್ವರನ ಸನ್ನಿಧಿಗೆ ಹೋದನು. ಅವನ ಪಾದಗಳಿಗೆ ದಂಡವತ್ತಾಗಿ ವಂದಿಸಿದನು, ಹಾಗು ತನ್ನ ಮುಖದಿಂದ— 'ಯೋಗಿವರ್ಯ! ಜಯಜಯಾಸಿದಳಿ! ಅಜ್ಞಾನ ತಿಮಿರ ವಿನಾಶನೇ ಕೃಪಾನಿಧಿ ಸಿದ್ಧಮುನಿಯೆ! ನಿನ್ನ ಸಂಪೂರ್ಣ ದರ್ಶನದಿಂದ ನನ್ನ ದುರಿತಗಳು ದೂರಾದವು! ನನ್ನನ್ನು ಉದ್ಧರಿಸುವದಕ್ಕಾಗಿಯೇ ನೀನು ಇಲ್ಲಿಗೆ ಬಂದಿರುವಿ. ಗುರುದೇವ! ನೀನು ಅದೆಲ್ಲಿಂದ ಇಲ್ಲಿಗೆ ಬಂದಿ! ನಿನ್ನ ಹೆಸರೇನು? ನೀನಿರುವ ಸ್ಥಾನವಾವುದು?' ಎಂದು ಕೇಳಲು ಸಿದ್ಧಮುನಿಯು— 'ಎಲೋ! ನಾನು ಯೋಗಿಯು, ತೀರ್ಥಸಂಚಾರಿಯು, ಭೂ-ಸ್ವರ್ಗಗಳಲ್ಲಿ ನನ್ನ ಓಡಾಟವಿದೆ, ಅಮರಜಾ

ಸಂಗಮ ತೀರದಲ್ಲಿ ಗಾಣಗಾಪುರ ಎಂಬ ಸ್ಥಾನವಿದೆ. ಅಲ್ಲಿ 'ನರಸಿಂಹ ಸರಸ್ವತಿ' ಎಂಬ ಅಭಿದಾನದ ವಿಖ್ಯಾತ ಸ್ವಾಮಿಗಳು ಇರುವರು, ಅವರೇ ನನ್ನ ಗುರುಗಳು. ಅವರು ಪ್ರತ್ಯಕ್ಷ ತ್ರಿಮೂರ್ತಿಯ ಅವತಾರರು. ಆ ದಯಾಸಾಗರ ಗುರುವು ಭಕ್ತರಿಗೂ ಶಿಷ್ಯವರ್ಗಕ್ಕೂ ಅಖಿಲ ಸೌಖ್ಯ ಸಂಪದವನ್ನು ನೀಡುವರು ಎಂದು ಸಿದ್ಧಮುನಿಯು ಹೇಳಿದುವನ್ನು ಕೇಳಿ ನಾಮಧಾರಕನು— (ತನ್ನಲ್ಲಿ) ನಾನು ಧ್ಯಾನಿಸುವ ಗುರುಮೂರ್ತಿಯೇ ಈ ಸಿದ್ಧಮುನಿಯ ಗುರುವು ಅಹುದು' ಎಂದು ನಿಶ್ಚಯಿಸಿ ಸಿದ್ಧಮುನಿಯನ್ನು ಕುರಿತು— 'ಸ್ವಾಮಿ! ನಮ್ಮ ವಂಶದವರು ಶ್ರೀಗುರುಭಕ್ತಿಯನ್ನು ಸತತ ಆಚರಿಸುತ್ತ ಬಂದಿರುವರು. ನಾನೂ ಗುರುಧ್ಯಾನದಲ್ಲಿಯೇ ಇರುವೆನು. ಹೀಗಿದ್ದರೂ ನಮಗೆ ಕಷ್ಟತಾಪತ್ರಯಗಳು ತಪ್ಪಲೊಲ್ಲವು. ಇದೊಂದು ಸಂಶಯವು ನನ್ನಲ್ಲಿದೆ. ನನ್ನನ್ನು ಉದ್ಧರಿಸಲು ಬಂದ ನೀವು ನನ್ನ ಸಂಶಯುವನ್ನು ದೂರೀಕರಿಸುವದಾಗಬೇಕು" ಎಂದು ಬೇಡಿಕೊಳ್ಳಲು ಸಿದ್ಧಮುನಿಯು— "ಶಿಷ್ಯನೇ! ಗುರುಕೃಪೆಯು ಸೂಕ್ಷ್ಮ-ಸ್ಥೂಲ ಸ್ವರೂಪದಲ್ಲಿ ಪರಿವರ್ತಿಸುವದು. ಗುರುಕೃಪೆಗೊಳಗಾದವನಿಗೆ ಕಷ್ಟ-ದೈನ್ಯಗಳೆಲ್ಲಿ? ಅವನು ಸಕಲ ದೇವತೆಗಳಿಗೆಲ್ಲ ಪ್ರೀತಿಯವನಾಗುವನು. ಕಲಿಕಾಲವನ್ನು ಜಯಿಸುವನು. ಶ್ರೇಷ್ಠ ಗುರುವನ್ನು ಧ್ಯಾನಿಸಿ ನೀನು ಹೀಗೆ ಹೇಳುವದನ್ನು ವಿಚಾರಮಾಡಿದರೆ ನಿನ್ನ ಮನವು ನಿಶ್ಚಿತ ಸ್ಥಿತಿಯಲ್ಲಿಲ್ಲ, ಆದ್ದರಿಂದಲೇ ನೀನು ಕಷ್ಟ-ದೈನ್ಯಗಳಿಗೆ ಒಳಗಾಗಿರುವಿ, ಶ್ರೀಗುರುವು ತ್ರಿಮೂರ್ತಿ ಎಂಬುದನ್ನು ದೃಢವಾಗಿ ತಿಳಿ" ಎಂದು ಹೇಳಲು ನಾಮಧಾರಕನು ಸಿದ್ಧಮುನಿಗೆ ಕೈಮುಗಿದು— "ಸ್ವಾಮಿ! ಗುರುವು ತ್ರಿಮೂರ್ತಿ ಎಂದು ಹೇಳಿದಿರಿ. ಅದು ಹೇಗೆ?" ಎಂದು ಕೇಳಿದನು.

ಆಗ ಸಿದ್ಧಮುನಿಯು— 'ಶಿಷ್ಯ! ನಿನ್ನ ಪ್ರಶ್ನೆಗೆ ನಾನು ವೇದವಾಹೇಳುಕ್ಯ ಸಾಕ್ಷಿಯಿಂದ ಉತ್ತರ

ವೆನು ಕೇಳು. ಎಂತೆಂದರೆ— ಬ್ರಹ್ಮನ ಮುಖಗಳಿಂದ ನಾಲ್ಕೂ ವೇದಗಳು ಹುಟ್ಟಿದವು. ಆ ವೇದಗಳಿಂದ ಹದಿನೆಂಟು ಪುರಾಣಗಳು ಬೆಳಕಿಗೆ ಬಂದವು. ಆ ಪುರಾಣಗಳಲ್ಲೆಲ್ಲ ಬ್ರಹ್ಮವಾಕ್ಯವು ಪ್ರಸಿದ್ಧವಾಗಿ ಇರುವ ಪುರಾಣವೇ 'ಬ್ರಹ್ಮವೈವರ್ತ' ವೆನ್ನಿಸುವದು. ದ್ವಾಪರಾಂತ್ಯದಲ್ಲಿ ನಾರಾಯಣ ವಿಷ್ಣು ಮೂರ್ತಿಯಾಗಿ ವ್ಯಾಸರು ಉದಿಸಿದರು. ಆ ವ್ಯಾಸರೇ ಈ ಭೂಮಿಯಲ್ಲಿ ಬ್ರಹ್ಮ ವಾಕ್ಯವನ್ನು ವಿಸ್ತೃತಗೊಳಿಸಿದರು. ಅದನ್ನೇ ಅವರು ಋಷಿಗಳಿಗೆಲ್ಲ ವಿವರಿಸಿ ಹೇಳಿದರು. ಹೀಗೆ ಅವರು ಹೇಳಿದ್ದನ್ನು ವಿಶದವಾಗಿ ಹೇಳುವೆನು ಕೇಳು. ಒಂದು ಬಾರಿ ಕಲಿಯುಗವು ಬ್ರಹ್ಮನನ್ನು ಗುರುಮಹಿಮೆಯನ್ನು ಕುರಿತು ಕೇಳಲು ಬ್ರಹ್ಮನು ಆ ಕಲಿಯುಗಕ್ಕೆ ವಿಸ್ತಾರವಾಗಿ ಗುರುಮಹಿಮೆಯನ್ನು ಹೇಳಿದನು' ಎಂದು ಹೇಳುವಾಗ ನಾಮಧಾರಕನು— ಸ್ವಾಮಿ! ಬ್ರಹ್ಮನು ಅದಾವ ಕಾರ್ಯನಿಮಿತ್ತ ಕಲಿಯುಗಕ್ಕೆ ಬೋಧಿಸಿದನು ?" ಎಂದು ಕೇಳಲು ಸಿದ್ಧಮುನಿಯು— "ಶಿಷ್ಯನೆ! ಮಹಾಪ್ರಳಯ ಕಾಲದಲ್ಲಿ ಆದಿಮೂರ್ತಿಯು ಒಂದು ಆಲದೆಲೆಯ ಮೇಲೆ ಮಲಗಿದ್ದನು. ಆ ಅವ್ಯಕ್ತ ಮೂರ್ತಿಯೇ ನಾರಾಯಣನು. ಅವನಲ್ಲಿ ಆಗ ಇನ್ನೊಮ್ಮೆ ಸೃಷ್ಟಿಯನ್ನು ರಚಿಸಬೇಕೆಂಬ ಬುದ್ಧಿಯು ಚೇತರಿಸಿತು. ಅದನ್ನನುಸರಿಸಿ ಅವನು ತನ್ನ ಹೊಕ್ಕಳಿನಿಂದ ಹೊರಟ ಕಮಲದಲ್ಲಿಂದ ಬ್ರಹ್ಮನನ್ನು ನಿರ್ಮಾಣ ಗೊಳಿಸಿದನು. ಹುಟ್ಟಿದ ಕೂಡಲೆ ಆ ಬ್ರಹ್ಮನು ನಾಲ್ಕೂ ದಿಕ್ಕುಗಳನ್ನು ನೋಡಹತ್ತಿದ್ದರಿಂದ ಅವನಿಗೆ ನಾಲ್ಕು ಮುಖಗಳುಂಟಾದವು. ತನಗೆ ಚತುರ್ಮುಖಗಳಾದವೆಂದು ಅವನಲ್ಲಿ ತನ್ನ ಬಲಿಷ್ಠತೆಯ ಬಗೆಗೆ ಹೆಮ್ಮೆಯುಂಟಾಯಿತು. ಅದರಂತೆ ಅವನು ತನ್ನ ಬಲವನ್ನು ನಾರಾಯಣನೆದುರು ಹೇಳಿಕೊಳ್ಳಲು ನಾರಾಯಣನು ನಕ್ಕು— 'ಬ್ರಹ್ಮನೆ! ನಾನು ಮಹಾವಿಷ್ಣುವು. ನನ್ನ ಮುಂದೆ ನಿನ್ನ ಬಲವೆಲ್ಲಿ?' ಎಂದನು.

ಬ್ರಹ್ಮನೆದುರಿಗೆ ನಿಂತು— 'ನನಗೆ ನಿನ್ನ ಅಪ್ಪಣೆಯೇನು?' ಎಂದು ಕೇಳಿತು. ಅದರ ಸ್ವರೂಪ ನೋಡಿ ಬ್ರಹ್ಮನು ನಗುತ್ತ— 'ಕಲಿಯುಗ! ನೀನು ಕೈಯಲ್ಲಿ ಶಿಶ್ನ-ಜಿಹ್ವೆಗಳನ್ನೇಕೆ ಹಿಡಿದಿರುವಿ?' ಎಂದು ಕೇಳಲು— 'ಬ್ರಹ್ಮನೆ! ಲಿಂಗ ಹಾಗು ಜಿಹ್ವೆ ಇವುಗಳ ರಕ್ಷಣೆಗಾಗಿ ಎಲ್ಲ ಲೋಕಗಳನ್ನು ಗೆಲ್ಲುವೆನು. ನನಗೆ ಯಾರ ಭಯವೂ ಇಲ್ಲ' ಎಂದಿತು. ಅದನ್ನು ಕೇಳಿ ಬ್ರಹ್ಮನು— 'ಕಲಿಯುಗವೇ! ನೀನು ಭೂಮಿಗೆ ಹೋಗಿ ನಿನ್ನ ಗುಣಗಳನ್ನು ಪ್ರಕಟಿಸು' ಎನ್ನಲು ಅದು ಬ್ರಹ್ಮನೆದುರಿಗೆ ತನ್ನ ಗುಣಗಳನ್ನು ವಿಸ್ತರಿಸಿ ಹೇಳಹತ್ತಿತು. ಎಂತೆಂದರೆ—

'ನಾನು ಧರ್ಮವನ್ನು ಕಿತ್ತಿಹಾಕುವೆನು, ನಾನು ನಿರಂಕುಶನು, ನಿರಾನಂದನು, ನಿದ್ದೆ ಹಾಗು ಕಲಹಗಳು ನನ್ನವೇ ಆಗಿರುವವು, ಪರದ್ರವ್ಯಹಾರಕ ಹಾಗು ಪರಸ್ತ್ರೀರತ ಇವೆರಡೂ ನನ್ನ ಬಂಧುಗಳು. ಪ್ರಚಂಡ, ಮತ್ಸರ, ದಂಭ, ಇವು ನನ್ನ ಸ್ನೇಹಿತರು, ಕಪಟ ಸನ್ಯಾಸಿಗಳು ನನ್ನ ಜೀವಗಳು. ಜನರನ್ನು ಪೀಡಿಸಿ ಉದರಪೋಷಣೆ ಮಾಡಿಕೊಳ್ಳುವವರು ನನ್ನವರು. ಪುಣ್ಯಾತ್ಮರು ನನ್ನ ಶತ್ರುಗಳು'' ಎಂದು ಹೇಳಿತು ಅದನ್ನು ಕೇಳಿ ಬ್ರಹ್ಮನು:— ಕಲಿಯುಗವೇ! ನಿನ್ನ ಯುಗದಲ್ಲಿ ಮಾನವನ ಆಯುಷ್ಯ ತೀರ ಸ್ವಲ್ಪ ಅಂದರೆ ಒಂದು ನೂರುವರ್ಷ. ಮೊದಲಿನ ಯುಗಗಳಲ್ಲಿಯಂತೆ ಹೆಚ್ಚು ಆಯುಷ್ಯವಿಲ್ಲ. ಆಯುಷ್ಯ ಕಡಿಮೆಯಾದರೂ ತಪೋನುಷ್ಠಾನ ಮಾಡುವವರು ತೀವ್ರ ಪರಮಾರ್ಥ ಹೊಂದುವರು. ಬ್ರಹ್ಮಜ್ಞಾನಿಗಳು, ಪುಣ್ಯವಂತರು ಇವರಿಗೆಲ್ಲ ನೀನು ಸಹಾಯಕನಾಗಿ ವರ್ತಿಸು'' ಎಂದು ಹೇಳಿದನು. ಅದಕ್ಕೆ ಕಲಿಯು— 'ಬ್ರಹ್ಮನೆ! ನೀನು ಹೇಳಿದ ಇವರೆಲ್ಲರು ನನ್ನ ವೈರಿಗಳು ಆದಮೇಲೆ ಅವರಿರುವ ಭೂಮಿಗೆ ಹೋಗುವ

ದಕ್ಕೆ ನನಗೆ ಭೀತಿಯುಂಟಾಗಿದೆ. ಐವತ್ತು ಭೂಮಂಡಲಗಳಲ್ಲಿ ಭರತಖಂಡವು ಪುಣ್ಯ ಭೂಮಿ ಎನ್ನಿಸಿದೆ' ಅಲ್ಲಿ ಹೋದರೆ ನನಗೆ ಹೊಡೆತ ಬೀಳುವವು. ಅಂದಮೇಲೆ ಅಲ್ಲಿಗೆ ನಾನೆಂತು ಹೋಗಲಿ?" ಎಂದಿತು.

ಕಲಿಯಾಡಿದ ಮಾತುಕೇಳಿ ಬ್ರಹ್ಮನು ನಕ್ಕು:— "ಕಲಿ! ನೀನು ಕಾಲಾತ್ಮನನ್ನು ಸಂಗಡ ಕರಕೊಂಡು ಭೂಮಿಗೆ ಹೋಗು. ಅವನ ಗುಣದ ಸಹಾಯದಿಂದ ಜನರಲ್ಲಿಯ ಧರ್ಮ ವಾಸನೆಯನ್ನು ಕಳೆ, ಪುಣ್ಯವಂತರಲ್ಲಿ ಪಾಪ ಬುದ್ಧಿಯನ್ನುಂಟುಮಾಡು" ಎನ್ನಲು ಕಲಿಯು:— "ಬ್ರಹ್ಮನೆ! ಆ ಭೂಮಿಯಲ್ಲಿ ಶಿವಧ್ಯಾನಮಾಡುವವರು, ಧರ್ಮಿಷ್ಠರು ಮುಂತಾದವರೆಲ್ಲ ನನ್ನ ಶತ್ರುಗಳು, ಅವರನ್ನು ಕಂಡರೆ ನನಗೆ ಅಂಜಿಕೆಯೇ ಬರುವದು' ಎಂದಿತು. ಅದಕ್ಕೆ ಮತ್ತೆ ಬ್ರಹ್ಮನು;— "ಕಲಿ! ಪುಣ್ಯ ಪಾಪಗಳಿಗೆ ವಿರೋಧವಿರುವದಲ್ಲವೆ? ಅಧಿಕ ಪುಣ್ಯರಾಶಿ ಮಾನವನಿಗೆ ಮಾತ್ರ ನೀನು ಅಂಜುವಿ, ಅಂಥವರು ವಿರಳ, ವಿವೇಕಿಯು ನಿನ್ನ ಉಪದ್ರವ ಸಹಿಸುವನು. ನಿನ್ನ ಉಪದ್ರವ ಹೆಚ್ಚಾದರೆ ಅವನೂ ತಡೆಯನು. ಅಂದ ಮೇಲೆ ಸಹಜವೇ ಅವನು ನಿನಗೆ ವಶವಾಗುವನು. ಆ ಕಲಿಯುಗದಲ್ಲಿ ಜನ್ಮಿಸಿದವರು ನಿನ್ನಂತೆಯೇ ಇರುವರು ಅವರೆಲ್ಲರಿಗೆ ಈಶ್ವರ ಪ್ರಾಪ್ತಿಯಿಲ್ಲ" ಎನ್ನಲು ಕಲಿಯು— "ಬ್ರಹ್ಮನೆ! ಸಾಧುಗಳ ಹೃದಯ ಹೇಗಿರುವದು?" ಎಂದು, ಕೇಳಲು ಚತುರ್ಮುಖನು— "ಕಲಿ! ಅಂತಃ ಶುದ್ಧಿಯುಳ್ಳವನಿಗೆ ದೋಷಗಳು ಅಂಟುವದಿಲ್ಲ, ಹರಿಹರ ಸ್ಮರಣೆ ಮಾಡುವವ, ಕಾಶಿಯಲ್ಲಿ ವಾಸಿಸುವವ, ಗುರುಸೇವೆ ಮಾಡುವವ ಇವರಾರಿಗೂ ನಿನ್ನ ದೋಷ ಸ್ಪರ್ಶಿಸಲಾರದು, ಗೋ-ಬ್ರಾಹ್ಮಣರನ್ನು ಸೇವಿಸುವವ, ವೈಷ್ಣವ, ಶೈವ, ತುಲಸೀಸೇವಕ,

ಗುರುಸೇವಕ, ಪುರಾಣ ಶ್ರವಣಮಾಡುವವ, ಶಾಸ್ತ್ರಪರಾಯಣ, ಧರ್ಮಿಷ್ಠ ಇವರಾರನ್ನೂ ನೀನು ನಿರ್ಬಂಧಿಸಲಾಗದು" ಎನ್ನಲು ಕಲಿಯು— "ಬ್ರಹ್ಮನೆ! ಗುರುಮಹಿಮೆ ಎಂತಿರುವದು?" ಎಂದು ಕೇಳಿತು. ಅದಕ್ಕೆ ಬ್ರಹ್ಮನು— "ಕಲಿಯೆ! ಗುರುಶಬ್ದದಲ್ಲಿಯ 'ಗು' ಎಂದರೆ ಸಿದ್ಧ, 'ರ್' ಎಂದರೆ ಪಾಪಘ್ನ 'ಉ' ಎಂದರೆ ಅವ್ಯಕ್ತವಿಷ್ಣು. ಈ ಅರ್ಥವಲ್ಲದೆ ಗುರುವು ನಿಜವಾಗಿಯೂ ತ್ರಿಶ್ರೇಯಾತ್ಮನು, ಪರಬ್ರಹ್ಮನು ಆಗಿರುವನು. ಗಣೇಶ, ಅಗ್ನಿ, ಶಾರ್ಙ್ಗಧರ ಇವರೆಲ್ಲರಲ್ಲಿ ಗುರು ಶಬ್ದವು ಅಡಕವಾಗಿರುವದು" ಇತ್ಯಾದಿ ಗುರು ಮಹಿಮೆಯನ್ನು ಹೇಳಿ 'ವಿವೇಕ, ಧರ್ಮ, ಭಕ್ತಿ, ವೈರಾಗ್ಯ ಇವೆಲ್ಲಕ್ಕೂ ಗುರುವೇ ಮಾರ್ಗದರ್ಶಕನು. ಅವನು ಎಲ್ಲ ದೇವತೆಗಳಿಗಿಂತಲೂ ಹೆಚ್ಚಿನವನು. ಗುರುವನ್ನು ಸೇವಿಸುವದರಿಂದ ಸಕಲ ಸಿದ್ಧಿಗಳು ಲಭಿಸುವವು ಈ ಬಗ್ಗೆ ಅನಾದಿಕಾಲದಲ್ಲಿ ವರ್ತಿಸಿದ ಸಂಗತಿಯನ್ನು ಹೇಳುವೆನು ಕೇಳು" ಯೆಂದು ಬ್ರಹ್ಮನು ಕಲಿಗೆ ಆ ಕಥೆಯನ್ನು ಹೇಳಹತ್ತಿದನು. ಅದೆಂತೆಂದರೆ—

**"ಪೂರ್ವದಲ್ಲಿ ಗೋದಾವರಿ ತೀರದಲಿ** ಅಂಗಿರಸ ಋಷಿಯು ಆಶ್ರಮವಾಸಿಯಾಗಿದ್ದನು. ಆ ಆಶ್ರಮದ ಸನ್ನಿಧಿಯಲ್ಲಿಯೇ ಪೈಲಪುತ್ರ ಬ್ರಾಹ್ಮಣನ ಪುತ್ರ "ವೇದಧರ್ಮ" ನೆಂಬವನೂ ಆಶ್ರಮ ಕಟ್ಟಿಕೊಂಡು ಇದ್ದನು. ಆ ವೇದಧರ್ಮನಲ್ಲಿ ಹಲವು ಶಿಷ್ಯರು ಗುರುಸೇವೆಮಾಡಿಕೊಂಡಿದ್ದು ವಿದ್ಯಾಭ್ಯಾಸ ಮಾಡುತ್ತಿದ್ದರು. ಹೀಗಿರಲು ಒಂದು ದಿನ ವೇದಧರ್ಮನು ತನ್ನ ಶಿಷ್ಯರನ್ನು ಕರೆದು—

"ನನ್ನ ಪ್ರಿಯ ಶಿಷ್ಯರೆ! ನನ್ನ ಮೇಲೆ ನಿಮ್ಮ ಪ್ರೀತಿ ಯಿದ್ದುದಾದರೆ ನನ್ನ ವಚನವನ್ನು ಪಾಲಿ

ಸಂದೀಪಕ" ಎಂಬವನು ಇದಕ್ಕೆ ತಾವೊಪ್ಪಿದರು ಒಪ್ಪಿಕೊಂಡರು. ಶಿಷ್ಯರ ಉತ್ಸಾಹ ನೋಡಿ ವೇದಧರ್ಮನಿಗೆ ಸಂತೋಷವಾಯಿತು!

ಆ ಶಿಷ್ಯರಲ್ಲಿ "ಸಂದೀಪಕ" ಎಂಬವನೊಬ್ಬ ಶಿಷ್ಯನಿದ್ದನು. ಒಂದುದಿನ ಗುರುವು ಅವನನ್ನೂ ಉಳಿದ ಎಲ್ಲ ಶಿಷ್ಯರನ್ನೂ ತನ್ನ ಬಳಿಗೆ ಕರೆದು — ಶಿಷ್ಯರೆ! ನನಗೆ ಪೂರ್ವಾರ್ಜಿತ ಒಂದು ಪಾಪವೂ, ಜನ್ಮಾಂತರಿತ ಸಾವಿರಾರ ಪಾಪಗಳೂ ಅಂಟಿಕೊಂಡಿರುವವು. ಅವುಗಳ ನಿವಾರಣೆಗೆಂದು ಹಲವು ತಪ-ಅನುಷ್ಠಾನಗಳನ್ನು ಆಚರಿಸಿದೆನು. ತತ್ಪರಿಣಾಮವಾಗಿ ನನ್ನ ಪಾತಕಗಳ ಬಹ್ವಂಶವು ದೂರಾಯಿತು. ಇನ್ನೂ ಸ್ವಲ್ಪ ಪಾಪಾಂಶವು ಉಳಿದಿದೆ. ಉಳಿದದ್ದರ ಫಲವನ್ನು ಅನುಭೋಗಿಸದೆ ತಪ್ಪಿಸಲು ಬರುವಂತಿಲ್ಲ ಅದುನನಗೆ ಮೋಕ್ಷಕ್ಕೆ ಅಡ್ಡಾಗಿದೆ ಅದನ್ನು ನಾನು ಇದೇ ಜನ್ಮದಲ್ಲಿ ಘೋರ ರೀತಿಯಿಂದ ಅನುಭೋಗಿಸಬೇಕಾಗಿದೆ. ಅದರ ದೂರೀಕರಣಕ್ಕಾಗಿ ನಾನು ವಾರಾಣಸಿಗೆ ಹೋಗುವೆನು. ಅದ್ದರಿಂದ ನನ್ನನ್ನು ಆ ಕ್ಷೇತ್ರಕ್ಕೆ ಒಯ್ದು ಚಲ್ಲಿಬಿಡಿರಿ. ಸ್ವದೇಹದಿಂದಲೇ ನನ್ನ ಪಾಪವನ್ನು ಅನುಭೋಗಿಸುವೆನು. ನನ್ನನ್ನು ನೀವು ಅಲ್ಲಿ ಜೋಪಾಸನೆ ಮಾಡಬೇಕು. ಈ ಎಲ್ಲ ಶಿಷ್ಯರಲ್ಲಿ ನನ್ನ ಶುಶ್ರೂಷೆ ಮಾಡುವದಕ್ಕೆ ಸಮರ್ಥ ಶಿಷ್ಯನು ಯಾವನಾದರೂ ಇದ್ದರೆ ಅವನು ನನ್ನ ಆಜ್ಞೆಯನ್ನು ಶಿರಸಾ ವಹಿಸಬೇಕು." ಎಂದು ಕೇಳಿದನು.

ವೇದಧರ್ಮನ ಎಲ್ಲ ಶಿಷ್ಯರಲ್ಲಿಯ ಸಂದೀಪಕನು ಗುರುವಿನ ಮುಂದೆ ಬಂದು— " ಗುರುಗಳೇ !

ನೀವು ಶೇಷಪಾಪದ ಪ್ರತಿಕಾರವನ್ನು ಆದಷ್ಟು ತೀವ್ರ ಮಾಡಿಕೊಳ್ಳಿರಿ, ನಾನು ನನ್ನ ಶಕ್ತಿಮೀರಿ ನಿಮ್ಮ ಸೇವೆ ಮಾಡುವೆನು ಅಷ್ಟೇ ಇರಲಿ'' ಎಂದು ನಮಸ್ಕರಿಸಿದನು.

ದೀಪಕನ ವಚನವನ್ನು ಕೇಳಿ ಗುರುವು—'' ದೀಪಕಾ! ನಾನು ಕುಷ್ಠರೋಗಿಯೂ ಅಂಗಹೀನನೂ ಆಗುವೆನು. ಹಾಗು ಕುರುಡನೂ ಹೆಳವನೂ ಆಗುವೆನು. ಇದರಂತೆ ಇಪ್ಪತ್ತೊಂದು ವರುಷ ಪರಿಯಂತವೂ ಕಷ್ಟಪಡುವೆನು. ಅದು ವರೆಗೆ ನೀನು ನನ್ನನ್ನು ಸಂಗೋಪನ ಮಾಡಬೇಕು.'' ಎಂದೆನ್ನಲು ದೀಪಕನು—ಗುರುದೇವ ! ನಿಮ್ಮ ಪಾದದ ನಿಷ್ಕೃತಿಯನ್ನು ನಾನು ನಿಶ್ಚಿತವಾಗಿಯೂ ಮಾಡುವೆನು ಎಂದೆನ್ನಲು ವೇದಧರ್ಮನು ಸಂತುಷ್ಟನಾದನು. ಅವನು ದೀಪಕನಿಗೆ ಪಾಪದ ಲಕ್ಷಣಗಳನ್ನೆಲ್ಲ ವಿವರಿಸಿದನು. ಹಾಗು ತನ್ನನ್ನು ವಾರಾಣಸಿಗೆ ತೆಗೆದುಕೊಂಡು ಹೋಗುವದಕ್ಕೆ ಆ ಶಿಷ್ಯನಿಗೆ ಆಜ್ಞೆ ಮಾಡಿದನು. ದೀಪಕನು ಕೂಡಲೆ ಆ ಗುರುವನ್ನು ಕಾಶೀಪಟ್ಟಣಕ್ಕೆ ಕರೆದೊಯ್ದನು. ಅಲ್ಲಿ ಮಣಿಕರ್ಣಿಕೆಯ ಉತ್ತರದಲ್ಲಿದ್ದ ಕಂಬಳೇಶ್ವರನ ಸನ್ನಿಧಿಯಲ್ಲಿ ಆ ಗುರು ಶಿಷ್ಯರು ವಸತಿ ಮಾಡಿದರು.

ಗುರುವಿಗೆ ಕುಷ್ಠರೋಗವು ಅಂಟಿಕೊಂಡಿತು. ಕಣ್ಣುಗಳು ಕಾಣದಾದವು. ಸಂದೀಪಕನು ಬಹು ಭಕ್ತಿಯಿಂದ ಸೇವೆ ಮಾಡಹತ್ತಿದನು. ರೋಗ ಹೆಚ್ಚಾಯಿತು. ಸಂದೀಪಕನು ಭಿಕ್ಷೆಬೇಡಿ ತಂದು ನಿತ್ಯವೂ ಗುರುವಿಗೆ ಅರ್ಪಿಸುವನು. ವಿಶ್ವನಾಥನ ಸ್ವರೂಪವೇ ತನ್ನ ಗುರುವಿನ ಸ್ವರೂಪವೆಂದು ಬಗೆದು ನಿತ್ಯವೂ ಗುರು ಪೂಜೆ ಮಾಡುವನು. ಭಿಕ್ಷೆಯನ್ನೆತ್ತಿ ತಂದು ಉಣ್ಣಿಸುವನು. ಗುರುವು ಶಿಷ್ಯನು ಬೇಡಿತಂದ ಭಿಕ್ಷೆಯನ್ನು

ನಿರಾಕರಿಸುವನು, ತನಗೆ ಇಚ್ಛಿತ ಪದಾರ್ಥವನ್ನು ಯಾಚಿಸಿ ತರಬೇಕೆಂದು ಹೇಳುವನು, ತಾರದಿದ್ದರೆ ಸಿಟ್ಟಿಗೇಳು ವನು, ಬೈಯ್ಯುವನು, ಬಡಿಯುವನು, ಏನಾದರೂ ಅವನು ಗುರುವಿನ ಗುಣ-ದೋಷಗಳನ್ನೆಣಿಸದೆ ಅವನು ಈಶ್ವರ ಸ್ವರೂಪನೆಂದು ಭಾವಿಸಿ ಒಮ್ಮನಸ್ಸಿನಿಂದ ಸೇವೆ ಮಾಡುತ್ತಿದ್ದನು. ಗುರುವಾಡುವ ನಿಷ್ಠುರ ನುಡಿಗ ಳನ್ನು ಸಹಿಸುತ್ತ ಅವನ ಮನಸ್ಸನ್ನು ಸಂತೋಷಗೊಳ್ಳಿಸುವ ಬಗೆಯಿಂದ ಗುರು ಶುಶ್ರೂಷೆ ಮಾಡುತ್ತಲಿದ್ದನು.

ಸಂದೀಪಕನು ಗುರುಸೇವೆ ಮಾಡುವದನ್ನು ಕಂಡು ಕೈಲಾಸಪತಿಯು ಸಂತುಷ್ಟನಾದನು. ಒಂದು ದಿನ ಅವನು ತಾನಾಗಿಯೇ ಸಂದೀಪಕನ ಎದುರಿಗೆ ಬಂದು—"ದೀಪಕ ! ಗುರು ಭಕ್ತನಾದ ನಿನಗೆ ಮೆಚ್ಚಿದೆನು. ನಿನಗೆ ಇಚ್ಛಿತ ವರವನ್ನು ನನ್ನಿಂದ ಬೇಡಿಕೊಳ್ಳು" ಎಂದನು. ತನಗೆ ಸಂತುಷ್ಟನಾದ ಶಿವನ ಮಾತಿಗೆ ಪ್ರತ್ಯು ತ್ತರವಾಗಿ ದೀಪಕನು—"ದೇವಾ ನನ್ನ ಗುರುವಿನ ಆಜ್ಞೆಯಿಲ್ಲದೆ ನಿಮ್ಮಿಂದ ವರವನ್ನು ಸ್ವೀಕರಿಸಲಾರೆ ! "ಎಂದು ಸ್ಪಷ್ಟವಾಗಿ ಹೇಳಿದನು ಹಾಗು ಆಗಲೇ ಗುರುವಿನ ಹತ್ತಿರ ಹೋಗಿ ಇದೆಲ್ಲವನ್ನು ತಿಳಿಸಿದನು ಮತ್ತು–' ಗುರು ದೇವಾ ! ನಿಮ್ಮ ರೋಗ ಶಮನಾರ್ಥ ಶಿವನಿಂದ ವರವನ್ನು ಸ್ವೀಕರಿಸಬೇಕೆ ? ' ಎಂದು ಕೇಳಿದನು ಗುರುವು ಶಿಷ್ಯನ ಮೇಲೆ ಸಿಟ್ಟಾಗಿ— 'ನಾನು ನನ್ನ ಪಾಪವನ್ನು ಅನುಭೋಗಿಸುವೆ, ನೀನು ಶಿವನಿಂದ ವರ ಬೇಡತಕ್ಕದ್ದಲ್ಲ' ಎಂದು ಹೇಳಿದನು. ಆ ಮೇಲೆ ದೀಪಕನು ಶಿವನನ್ನು ಕಂಡು—' ನೀನು ಕೊಡುವ ವರವು ನನಗೆ ಆವಶ್ಯಕವಿಲ್ಲ ಎಂದು ಹೇಳಿಬಿಟ್ಟನು. ಶಿವನು ನಿರುಪಾಯನಾಗಿ ಹಿಂದಿರುಗಿ ಹೋದನು. ಸಂದೀಪಕನ ವೃತ್ತಾಂತವನ್ನು ವಿಷ್ಣುಗೆ ವಿವರಿಸಿದನು. ವಿಷ್ಣುವು ದೀಪಕನ ಗುರುಭಕ್ತಿಯನ್ನು ಕೇಳಿ ಚಕಿತಗೊಂಡನು.

ಶ್ರೀ ವಿಷ್ಣುವು ಶಿವನಿಂದ ಕೇಳಿದ ದೀಪಕನ ಗುರುಭಕ್ತಿಯನ್ನು ತಾನೂ ಪರೀಕ್ಷಿಸುವದಕ್ಕಾಗಿ ಆ ಶಿಷ್ಯ-ಗುರುಗಳಿರುವಲ್ಲಿಗೆ ಹೋದನು. ದೀಪಕನು ಗುರುಸೇವೆ ಮಾಡುವದನ್ನು ಕಂಡನು, ಅವನಲ್ಲಿಯ ಗುರು ಭಕ್ತಿಗೆ ಮೆಚ್ಚಿದನು. ತಾನೇ ಸಂದೀಪಕನನ್ನು ತನ್ನ ಹತ್ತಿರ ಕರೆದು ಅವನಿಗೆ ಇಚ್ಛಿತ ವರ ಕೊಡುವ ತನ್ನ ಹವ ಣಿಕೆ ತೋರಿಸಿದನು. ಅದಕ್ಕೆ ದೀಪಕನು—"ಹೃಷೀಕೇಶಾ ! ನಾನು ಯಾರಿಂದಲೂ ಏನನ್ನೂ ಅಪೇಕ್ಷಿಸುವದಿಲ್ಲ ಶ್ರೀ ಗುರುವಿನಿಂದಲೆ ನನಗೆ ಎಲ್ಲವೂ ತಾನೇ ಪ್ರಾಪ್ತವಾಗುವವು" ಎಂದೆನ್ನಲು ದೀಪಕನ ನುಡಿಗೆ ನಾರಾಯಣನು ಸಂತುಷ್ಟತೆ ಹೊಂದಿದನು. ಮತ್ತೂ ಆತನು—" ದೀಪಕಾ ! ನನ್ನಿಂದ ನೀನು ವರವನ್ನು ಸ್ವೀಕರಿಸಲಿಕ್ಕೇ ಬೇಕು." ಎಂದೆನ್ನಲು ದೀಪಕನು—"ದೇವಾ ! ವರ ಕೊಡುವದೇ ನಿನ್ನ ಆಗ್ರಹ ವಾಗಿದ್ದರೆ ನನ್ನಲ್ಲಿ ಎಂದೂ ಅಳಿಯದ ಗುರುಭಕ್ತಿಯ ವರ್ಧನೆಯಾಗುವಂತೆ ವರವನ್ನು ದಯಪಾಲಿಸಬೇಕು" ಎಂದನು. ಶಾರ್ಙಪಾಣಿಯು ದೀಪಕನ ಬೇಡಿಕೆಗೆ ಮೆಚ್ಚಿ ಅವನು ಬೇಡಿದ ವರ ನೀಡಿದನು. ಮತ್ತು ಅವನು ದೀಪಕನನ್ನು ಕುರಿತು— "ದೀಪಕನೆ ! ನೀನು ನನ್ನ ಪ್ರಾಣ ಸಖನಾಗುವಿ, ನೀನು ಗುರುವನ್ನು ಚನ್ನಾಗಿ ಅರಿತುಕೊಂಡಿರುವಿ ! ಪರಬ್ರಹ್ಮ ನನ್ನು ನೀನು ಪೂರ್ಣ ದೃಷ್ಟಿಯಿಂದ ನೋಡಿದಿ'' ಎಂದು ದೀಪಕನನ್ನು ಕೊಂಡಾಡಿ ಹೃಷೀಕೇಶನು ಹಿಂದಿ ರುಗಿ ಹೋದನು.

ದೀಪಕನು ವಿಷ್ಣುವಿನಿಂದ ವರ ಪಡೆದು ತನ್ನ ಗುರುವಿನ ಬಳಿಗೆ ಹೋದನು ಗುರುವು—' ದೀಪಕಾ, ವೈಕುಂಠನಾಯಕನು ನಿನಗೇನು ಕೊಟ್ಟನೆಂಬದನ್ನು ವಿಸ್ತರಿಸಿ ಹೇಳು' ಎಂದೆನ್ನಲು ದೀಪಕನು 'ತನ್ನಲ್ಲಿ ಗುರು

ಭಕ್ತಿಯು ಪ್ರಧಾನವಾಗಬೇಕೆಂದು ಅಪೇಕ್ಷಿಸಿ ವರವನ್ನು ಕೊಟ್ಟನು' ಎಂದು ಹೇಳಿದನು. ಶ್ರೀಗುರುವು ದೀಪಕನಿಗೆ ಮೆಚ್ಚಿ—'ದೀಪಕಾ! ಚಿರಂಜೀವಿಯಾಗು, ಸತತವೂ ಕಾಶೀಪಟ್ಟಣದಲ್ಲಿ ವಾಸವಾಗಿರು, ನಿನ್ನ ವಾಕ್ಯಗಳು ಸಿದ್ಧಿ ಹೊಂದಲಿ, ಎಂದು ಆಶೀರ್ವದಿಸಿ ಆ ವೇದಧರ್ಮನು ತಾನು ಆಗಲೇ ದಿವ್ಯದೇಹಿಯಾದನು. ಅವನು ಇಷ್ಟೆಲ್ಲವನ್ನು ಶಿಷ್ಯಭಾವ ಪರೀಕ್ಷೆಗಾಗಿ ಮಾಡಿದನು.

ಈ ಪ್ರಕಾರ ಬ್ರಹ್ಮನು ಕಲಿಯುಗಕ್ಕೆ ದೀಪಕನ ಕಥೆಯನ್ನು ಹೇಳಿದನು.

ಸಿದ್ಧನು—ನಾಮಧಾರಕನೆ! ದೃಢಮನಸಿನಿಂದ ಇರುವವನು ಭವಸಾಗರ ದಾಟುವನು. ದೃಢಭಕ್ತಿಯುಳ್ಳವನೇ ಈಶ್ವರನನ್ನು ಪ್ರಾಪ್ತಮಾಡಿಕೊಳ್ಳುವನು. ಎಂದು ಹೇಳಿದನು.

—೦—

# ೩ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ-ಗುರುಭ್ಯೋನಮಃ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು— "ಸ್ವಾಮೀ! ನೀವು ನನಗೆ ಗುರುಮಹಿಮೆಯನ್ನು ನಿರೂಪಿಸಿದಿರಿ, ನನ್ನ ಮನವು ಆನಂದಮಯವಾಯಿತು. ನಿಮ್ಮ ವಾಸ್ತವ್ಯವೆಲ್ಲಿ? ನಿತ್ಯವೂ ನಿಮ್ಮ ಭೋಜನವೇನು? ನಾನು ನಿಮ್ಮ ಶಿಷ್ಯನಾಗಬಯಸುವೆ" ಎಂದು ಅವರ ಪಾದಕ್ಕೆ ಎರಗಿದನು. ಸಿದ್ಧಮುನಿಯು ಅವನನ್ನು ಆಲಂಗಿಸಿ— "ನಾಮಧಾರಕ! ಗುರುವಿನ ಸ್ಥಾನ ವಿರುವಲ್ಲೆಲ್ಲ ನಾನು ಇದ್ದೇ ಇರುವೆನು. ನಿತ್ಯವೂ ಗುರುಸ್ಮರಣೆಯೇ ನನ್ನ ಭೋಜನವು, ಶ್ರೀಗುರುಚರಿತ್ರ ಮಹಿಮೆಯೇ ನನಗೆ ಅಮೃತಪಾನವು, ಸತತವೂ ಈ ಗ್ರಂಥದ ಗುಣಗಳನ್ನು ಸೇವಿಸುತ್ತಿರುವೆನು" ಎಂದು ತನ್ನ ಬಳಿಯಲ್ಲಿರುವ ಗ್ರಂಥವನ್ನು ತೋರಿಸಿದನು. ಮತ್ತು ಅವನು— 'ಈ ಗುರುಚರಿತ್ರೆಯ ಶ್ರವಣದಿಂದ ಭುಕ್ತಿ-ಮುಕ್ತಿ-ಪರಮಾರ್ಥಗಳೂ ಇಚ್ಛಿತಫಲವೂ ಸಾಧ್ಯವಾಗುವವು. ಅಷ್ಟಸಿದ್ಧಿ, ಜ್ಞಾನಸಿದ್ಧಿಗಳು ಲಭಿಸುವವು. ಸಪ್ತಾಹಶ್ರವಣ-ಪಠಣಗಳಿಂದ ಅಭೀಷ್ಟಗಳು ಪೂರೈಸುವವು. ಇತ್ಯಾದಿ" ಹೇಳಲು ನಾಮಧಾರಕನು- "ಸ್ವಾಮಿ! ಗುರುಚರಿತ್ರೆಯನ್ನು ಶ್ರವಣ ಮಾಡುವ ಇಚ್ಛೆ ನನ್ನಲ್ಲಿ ಬಲವತ್ತರವಾಗಿದೆ. ವಿಸ್ತರಿಸಿ ಹೇಳುವದಾಗಬೇಕು" ಎಂದೆನ್ನಲು ಸಿದ್ಧಮುನಿಯು ಅವನ ಬಲಗೈಯನ್ನು ಹಿಡಿದು ತನ್ನ ಸ್ಥಾನಕ್ಕೆ ಕರೆದೊಯ್ದನು. ಕಲ್ಪವೃಕ್ಷವಾಗಿದ್ದ ಅಶ್ವತ್ಥ ಸನ್ನಿಧಿಯಲ್ಲಿ ಕುಳಿತು— "ನಾಮಧಾರಕನೆ! ಮೊದಲು ನಿನ್ನಲ್ಲಿ ಭಕ್ತಿಯು ದೃಢತೆಗೊಳ್ಳಲಿ, ನಂತರ ಶ್ರೀಗುರುವನ್ನು ಅರಿತುಕೊಳ್ಳು" ಎಂದೆನ್ನಲು ನಾಮಧಾರಕನು ಅವನಿಗೆ ಮತ್ತೆ ಮತ್ತೆ ನಮಸ್ಕರಿಸಿದನು, ಸ್ವಾಮೀ! ನನ್ನನ್ನು ಉದ್ಧರಿಸು ಎಂದು ಪ್ರಾರ್ಥಿಸಿದನು. ಆಗ ಸಿದ್ಧಮುನಿಯು—

ನಾಮಧಾರಕ! ಚಿಂತಿಸಬೇಡ, ನಿನ್ನ ಕಷ್ಟಗಳನ್ನು ನಾನು ದೂರಮಾಡುವೆನು. ದೃಢಭಕ್ತಿಯಿಲ್ಲದವರು ಯಾವಾಗಲೂ ದಾರಿದ್ರ್ಯದಿಂದ ಕಷ್ಟಪಡುವರು. ಅವರು ಅವಿದ್ಯೆ–ಮಾಯೆಗಳಿಂದ ಯುಕ್ತರಾಗಿ ಶ್ರೀಗುರುವನ್ನು ನಿರರ್ಥಕ ನಿಂದಿಸುವರು. ನೀನಾದರೂ ಸಂದೇಹವೃತ್ತಿ ತಾಳಿ ಗುರುವು ಏನನ್ನು ಕೊಡುವನು? ಎಂದೆನ್ನುವಿ. ಈಗ ನೀನು ಅನುಭವಿಸುವ ಕಷ್ಟ–ವ್ಯಾಕುಲತೆಗಳೇ ಆ ನಿನ್ನ ವೃತ್ತಿಯ ಪರಿಣಾಮವಾಗಿವೆ. ಇದನ್ನರಿತು ನೀನು ನಿನ್ನಲ್ಲಿಯ ಸಂಶಯವನ್ನು ಬಿಡು. ಅಂದರೆ ದಯಾಸಾಗರ ಗುರುದೇವನು ನಿನಗೆ ಅಪಾರ ಸಾದವನ್ನು ಕೊಟ್ಟು ನಿನ್ನ ತೊಂದರೆಯನ್ನು ದೂರೀಕರಿಸುವನು. ನಾಮಧಾರಕಾ! ಗುರುಮೂರ್ತಿಯು ವೇದಾಂತ ಬೋಧಿಸುವನು, ಆದರಿಂದ ನಿನ್ನ ಅಂತಃಕರಣವು ಶುದ್ಧವಾಗುವದು. ಅವನು ಮೋಡಗಳಂತೆ ದಾತಾರ ನಾಗಿರುವನು. ಅವನಿಗೆ ಇನ್ನಾವ ಉಪಮೆಗಳೂ ಹೋಲಿಕೆಯಾಗವು. ಶ್ರುತಿ–ಸ್ಮೃತಿಗಳು–'ಶ್ರೀಗುರುವು ಪರಬ್ರಹ್ಮಮೂರ್ತಿಯು' ಎಂದು ಹೇಳುವವು. ಆದ್ದರಿಂದ ನೀನು ನಿನ್ನಲ್ಲಿಯ ಸಂದೇಹವೃತ್ತಿಯನ್ನು ಬಿಟ್ಟು ಏಕಚಿತ್ತದಿಂದ ಶ್ರೀಗುರುವಿನ ಪದಧ್ಯಾನ ಮಾಡು" ಎಂದು ಸಿದ್ಧಮುನಿಯು ಹೇಳಲು ನಾಮಧಾರಕನು— ಸ್ವಾಮಿ! ಶ್ರೀಗುರುವು 'ತ್ರಯಮೂರ್ತಿ' ಎಂಬುವದನ್ನು ನಾನು ಕಿವಿಯಿಂದ ಕೇಳಿರುವೆನು. ಆದರೆ ಆ ದೇವನು ಮಾನವನಾಗಿ ಅವತರಿಸಿದುದರ ಕಾರಣವೇನು?" ಎಂದು ಪ್ರಶ್ನೆಮಾಡಿದನು. ಅದಕ್ಕೆ ಯೋಗೀಂದ್ರನಾದ ಸಿದ್ಧಮುನಿಯು— "ಎಲೈ ಶಿಷ್ಯನೆ! ನಿನ್ನ ಕೇಳಿಕೆಯಿಂದ ನನಗೂ ಸುಖವುಂಟಾಯಿತು. ಗುರುಸೇವಕತ್ವಲಭಿಸಿತು, ಪರಬ್ರಹ್ಮನನ್ನು ಅನುಭವಿಸಿದೆನು. ನಾನು ಈ ಜಗತ್ತನ್ನೆಲ್ಲ ಸುತ್ತಾಡಿದೆನು. ಗುರುಚರಿತ್ರೆಯನ್ನು ಶ್ರವಣಮಾಡುವ ಉತ್ಸಾಹಿಗಳನ್ನು ನಾನು ಯಾರನ್ನೂ ಕಾಣಲಿಲ್ಲ. ಈಗ

ಅಂಥ ಬುದ್ಧಿಯುಳ್ಳವನು ನೀನೊಬ್ಬನೇ ನನಗೆ ದೊರೆತಿ! ಇಹ-ಪರಗಳ ಅಭಿಲಾಷೆಯುಳ್ಳವರಿಗೆ ಈ ಚರಿತ್ರೆಯು ಬಲು ರುಚಿಕಟ್ಟಾಗಿರುವದು, ನೀನು ಕೇವಲ ಗುರುಭಕ್ತನಾದುದರಿಂದ ನಿನ್ನಲ್ಲಿ ಈ ಮೇಲ್ತರದ ಭಕ್ತಿಯುತ್ಪನ್ನವಾಗಿದೆ. ನಿಶ್ಚಿತ ಮನೋವಾಕ್ಕಾಯಗಳುಳ್ಳ ನೀನು ಚತುರ್ವಿಧ ಪುರುಷಾರ್ಥಗಳನ್ನು ಹೊಂದುವಿ! ಇಹ ಸಂಪದವೆಲ್ಲವೂ ನಶ್ವರವು. ಇವನ್ನು ಮಾತ್ರ ಬಯಸಬೇಡ, ಗುರುಚರಿತ್ರೆಯು ಕಾಮಧೇನು ಸದೃಶವೆಂದು ವೇದಶಾಸ್ತ್ರಗಳು ಸಮ್ಮತಿಸುವವು. ಇನ್ನು ತ್ರಯಮೂರ್ತಿಗಳು ಕಲಿಯುಗದಲ್ಲಿ ನರವೇಷಧಾರಿಯಾಗಿ ಅವತರಿಸಿದರು. ಅದರ ಕಾರ್ಯಕಾರಣವೆಂದರೆ— "ಹರಿಹರರು ಭೂಭಾರವನ್ನಿಳಿಸುವದಕ್ಕೆಂದೂ ಭಕ್ತಜನೋದ್ಧಾರಕ್ಕೆಂದೂ ತ್ರಯಮೂರ್ತಿಯಾಗಿ ಅವತರಿಸಿದರು" ಎಂದು ಹೇಳಿದನಲ್ಲದೆ ಸಿದ್ಧಮುನಿಯು— "ನಾಮಧಾರಕ! ತ್ರಯಮೂರ್ತಿಯ ಮೂರು ಗುಣಗಳನ್ನು ಕೇಳು. ಆದಿ ಮೂಲ ವಸ್ತುವು ಒಂದೇ, ಪ್ರಪಂಚ ವಸ್ತುವು ಮೂರು. ಇವೇ ಬ್ರಹ್ಮ-ವಿಷ್ಣು-ರುದ್ರರು. ಇವರಲ್ಲಿ ಕ್ರಮವಾಗಿ ರಜ-ಸತ್ವ-ತಮ ಗುಣಗಳು ಅಧಿಷ್ಠಿತವಾದವು. ಬ್ರಹ್ಮನು ಸೃಷ್ಟಿಕರ್ತನಾಗಿಯೂ, ವಿಷ್ಣುವು ಪೋಷಕನಾಗಿಯೂ ಹಾಗು ರುದ್ರನು ಪ್ರಲಯಕರ್ತಾರನಾಗಿಯೂ ಪರಬ್ರಹ್ಮನಿಂದ ಅಧಿಕೃತರಾದರು. ಈ ಮೂವರೂ ಅಭಿನ್ನತೆಯಿಂದ ಅವತಾರಹೊಂದಿ ಭೂಭಾರವನ್ನಿಳಿಹಿದರೆಂದು ಪುರಾಣಗಳಲ್ಲಿ ವರ್ಣಿಸಿವೆ. ನಾಮಧಾರಕ! ಇದಕ್ಕೆ ಸಾಕ್ಷಿಯಾಗಿ ನಿನಗೆ ಅಂಬರೀಷನ ಕಥೆ ಹೇಳುವೆನು ಕೇಳು. ಅದು ಎಂತಿರುವದೆಂದರೆ .

'ಅಂಬರೀಷ ಬ್ರಾಹ್ಮಣನು ಏಕಾದಶಿ ವ್ರತವನ್ನು ನಿಷ್ಠೆಯಿಂದ ಆಚರಿಸುತ್ತಿದ್ದನು. ಅವನ ಈ

ವ್ರತಭಂಗ ಮಾಡುವ ಕುರಿತು ದುರ್ವಾಸ ಋಷಿಯು ಅತಿಥಿ ಸ್ವರೂಪದಿಂದ ಅವನಲ್ಲಿಗೆ ಹೋದನು. ಮುನ್ನಾ ದಿನ ಏಕಾದಶಿಯಾದ್ದರಿಂದ ಆ ದಿನ ಸಾಧನೀಯ ದ್ವಾದಶಿಯು ವೇಳೆ ಪ್ರಾಪ್ತವಾಗಿತ್ತು. ಅತಿಥಿಯು ಅಂಥಿಂಥ ವಸಿಷ್ಠ, ಕಾರಣಿಕ ಅತಿಥಿಯು, ಇದನ್ನರಿತು ಅಂಬರೀಷನು ಬೆದರಿದನು. ಬಂದ ಅತಿಥಿಯನ್ನು ಸ್ವಾಗತಿಸಿ ಸತ್ಕರಿಸಿದನು. ಅವನು ಋಷಿಯನ್ನು ಕುರಿತು— "ಮಹಾನ್! ಶೀಘ್ರವೇ ಸ್ನಾನಮಾಡಿ ಬರಬೇಕು, ಇಂದು ಸಾಧನೀಯಃದ್ವಾದಶಿ, ಪಾರಣೆಯನ್ನು ಮುಗಿಸಿಕೊಳ್ಳಬೇಕು" ಎಂದು ಹೇಳಿಕೊಂಡನು, ಋಷಿಯು 'ತಥಾಸ್ತು' ಎಂದು ನದಿಗೆ ಸ್ನಾನಾನುಷ್ಠಾನಗಳಿಗಾಗಿ ಹೋದನು. ದ್ವಾದಶಿಯು ಸಾಧನದ ಗಳಿಗೆ ಮೀರಲು ಬಂದಿತು. ಋಷಿಯು ನದಿಯಿಂದ ಇನ್ನೂ ಬರಲಿಲ್ಲ. ವ್ರತ ಹಾನಿಯಾಗುವದೆಂದು ಅಂಬರೀಷನಿಗೆ ಚಿಂತೆ, ವಿಚಾರ ಮಾಡಿ ಅವನು ಋಷಿಯು ಬರುವ ಮಾರ್ಗ ಮತ್ತೊಮ್ಮೆ ನಿರೀಕ್ಷಿಸಿ ತೀರ್ಥ ಸ್ವೀಕರಿಸಿ ಪಾರಣೆ ಮುಗಿಸಿದನು, ಮುಂದೆ ಸ್ವಲ್ಪ ಹೊತ್ತಿನಲ್ಲಿ ಋಷಿಯು ಬಂದನು, ತೀರ್ಥ ಸ್ವೀಕರಿಸಿ ಪಾರಣೆ ಮುಗಿಸಿದ ಅಂಬರೀಷನನ್ನು ಕಂಡನು. ಅತ್ಯಂತ ರೋಷದಿಂದ ಅಂಬರೀಷನಿಗೆ ಶಾಪಕೊಡಲು ಸಿದ್ಧನಾದನು. ಅಂಬರೀಷನು ಬೆದರಿದನು. ಶ್ರೀಹರಿಯನ್ನು ಹೃದಯದಿಂದ ಸ್ಮರಿಸಿದನು. ಭಕ್ತವತ್ಸಲ ನಾರಾಯಣನು ಅಗಲೇ ಪ್ರಕಟನಾದನು. ಅವನು ದುರ್ವಾಸನು ಬ್ರಾಹ್ಮಣನಿಗೆ ಕೊಡತಕ್ಕ ಶಾಪವನ್ನು ತಾನು ಸ್ವೀಕರಿಸಲು ಸಿದ್ಧನಾದನು. ಅದನ್ನು ಕಂಡು ದುರ್ವಾಸನು ವಿಷ್ಣುವಿಗೆ— 'ನೀನು ಭೂಮಿಯ ಮೇಲೆ ಹಲವು ಸ್ಥಾನಗಳಲ್ಲಿ ಹಲವು ಅವತಾರಗಳಿಂದ ಜನ್ಮ ತಾಳು' ಎಂದು ಶಾಪ ಕೊಟ್ಟನು.

ವಿಷ್ಣುವು ತನ್ನ ಭಕ್ತ ಅಂಬರೀಷನ ನಿಮಿತ್ತ ಶಾಪಹೊಂದಿ ಹತ್ತು ಅವತಾರ ತಾಳಿದನಲ್ಲದೆ

ಕಾರ್ಯಾಕಾರಣದಿಂದ ಹಲವು ಸ್ಥೂಲ-ಸೂಕ್ಷ್ಮ ಉಪ ಅವತಾರ ತಾಳಿದನು. ತ್ರಯಮೂರ್ತಿ ಅವತಾರವೂ ಶ್ರೀವಿಷ್ಣುವಿನ ಉಪ ಅವತಾರಗಳಲ್ಲೊಂದಾಗಿದೆ" ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

# ೪ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಪುರುಷನು ನಾಮಧಾರಕನನ್ನು ಕುರಿತು— "ಶಿಷ್ಯಚೂಡಾಮಣಿಯೆ! ನಿನ್ನ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳುವೆನು ಕೇಳು. ಅತ್ರಿಋಷಿಯ ಮೊದಲು ಸೃಷ್ಟಿಯು ಉತ್ಪನ್ನವಾಯಿತೆಂಬುದನ್ನು ಹೇಳುವೆನು, ಚಿತ್ತಗೊಡು. ಮೊದಲು ಈ ಸೃಷ್ಟಿಯು ಇದ್ದಿರಲಿಲ್ಲ. ಎಲ್ಲ ಕಡೆಗೂ ಜಲಮಯವಿದ್ದಿತು. ಆದ್ದರಿಂದಲೇ ವೇದದಲ್ಲಿ 'ಆಪೋ ನಾರಾಯಣ' ಎಂದು ಹೇಳಿದೆ. ನಾರಾಯಣನು ತಾನೇ ಉದಕವು. ಅವನು ಎಲ್ಲೆಡೆಯಲ್ಲಿಯೂ ಪರಿಪೂರ್ಣವಾಸವಾಗಿರುವನು. ಹೀಗಿರುವ ಅವನಲ್ಲಿ ಪ್ರಪಂಚರಚನೆಯ ಬುದ್ಧಿಯು ಜನಿತವಾಯಿತು. ಆಗ ಆತನಿಂದ ಹಿರಣ್ಯ ವರ್ಣಾಂಡವು ನಿರ್ಮಾಣವಾಯಿತು. ಅದೇ 'ಬ್ರಹ್ಮಾಂಡ' ಎಂಬ ಹೆಸರು ಹೊಂದಿತು. ರಜೋಗುಣಯುಕ್ತವಾಗಿ ನಿರ್ಮಾಣವಾಯಿತು. ಆ ಬ್ರಹ್ಮಾಂಡವೇ ಹಿರಣ್ಯಗರ್ಭವು. ಈ ಪ್ರಕಾರ ನಿರ್ಮಿತ ಬ್ರಹ್ಮಾಂಡವು ದಿವ್ಯಮಾನದ ಒಂದು ವರ್ಷವಿದ್ದಿತು. ಬಳಿಕ ಆ ಬ್ರಹ್ಮಾಂಡವು ಸೀಳಿ ಇಬ್ಭಾಗವಾಯಿತು. ಅವುಗಳಲ್ಲಿ ಒಂದು ಆಕಾಶವಾಗಿಯೂ ಇನ್ನೊಂದು ಭೂಮಿಯಾಗಿಯೂ ಬೇರೆ ಬೇರೆ ಇರಿಸಲ್ಪಟ್ಟವು. ಈ ಬ್ರಹ್ಮಾಂಡದಿಂದಲೇ ಬ್ರಹ್ಮನು ಹುಟ್ಟಿ ಹದಿನಾಲ್ಕು ಲೋಕಗಳನ್ನೂ, ಹತ್ತು ದಿಕ್ಕುಗಳನ್ನೂ, ಕಾಲ-ಕಾಮ-ಕ್ರೋಧಾದಿಗಳನ್ನೂ ರಚಿಸಿದನು. ಮುಂದೆ ಸೃಷ್ಟಿಯನ್ನು ರಚಿಸುವದಕ್ಕೆಂದು ಮರೀಚಿ, ಅತ್ರಿ ಮುಂತಾದ ಏಳು ಜನ ಮಾನಸಪುತ್ರರನ್ನು ಹುಟ್ಟಿಸಿದನು. ಆ ಮಾನಸಪುತ್ರರಲ್ಲಿಯ ಅತ್ರಿಯಿಂದಲೇ ಗುರುಪೀಠ ಪೀಳಿಗೆಗೆ ಆರಂಭವಾಯಿತು. ಹೇಗೆಂದರೆ—

ಆ ಅತ್ರಿಋಷಿಯ ಹೆಂಡತಿ ಅನುಸೂಯೆಯು. ಪತಿವ್ರತಾ ಶಿರೋಮಣಿಯಾದ ಆಕೆ ಜಗನ್ಮಾತೆಯೆನ್ನಿಸಿದ್ದಳು. ಒಂದು ದಿನ ಇಂದ್ರಾದಿ ದೇವತೆಗಳು ತ್ರಿಮೂರ್ತಿಗಳಾದ ಹರಿಹರಬ್ರಹ್ಮರನ್ನು ಕಂಡು ಅನಸೂಯಾ ಮಾತೆಯ ಪಾತಿವ್ರತ್ಯ ಧರ್ಮವನ್ನೂ ಆಕೆಯ ಸದಾಚರಣೆಯನ್ನೂ ಅವರೆದುರಿನಲ್ಲಿ ಮನವಾರೆ ಹೊಗಳಿದರು. ಇಷ್ಟೇ ಅಲ್ಲ. ಆಕೆಯಲ್ಲಿ ವರ-ಶಾಪಗಳನ್ನು ಕೊಡುವ ಸಾಮರ್ಥ್ಯವು ಬಲವತ್ತರವಾದದ್ದಿರುವದು. ಅವಳಿಂದ ವರಪಡೆದ ಯಾವನಾದರೂ ಒಂದು ಸುರಲೋಕದಲ್ಲಿರುವ ನಮ್ಮೆಲ್ಲರನ್ನು ಸಹಜವಾಗಿ ಜಯಿಸುವನೆಂಬುವಕ್ಕೆ ಸಂದೇಹವಿಲ್ಲ" ಎಂದು ಹೇಳಿದರು.

ತ್ರಿಮೂರ್ತಿಗಳು ಅನಸೂಯೆಯ ಮಹತ್ತತೆಯನ್ನು ಕೇಳಿ ಹೃದಯದಿಂದ ಕುದಿಯಹತ್ತಿದರು. ಆ ಮೂವರೂ ಕ್ರೋಧಾನ್ವಿತರಾಗಿ ತಮ್ಮ ತಮ್ಮಲ್ಲಿ— 'ನಾವು ಅನಸೂಯೆಯ ಬಳಿಗೆ ಹೋಗಿ ಆಕೆಯ ಪತಿವ್ರತೆ ಧರ್ಮವನ್ನು ಒರೆಗ್ಹಚ್ಚಿ ನೋಡೋಣ. ಆಕೆಯ ವ್ರತಭಂಗ ಮಾಡೋಣ ಅಥವಾ ಆಕೆಯನ್ನು ಯಮಸದನಕ್ಕೆ ಸೂಕಿಬಿಡೋಣ ಇತ್ಯಾದಿಯಾಗಿ ನಿರ್ಧರಿಸಿಕೊಂಡರು. ತಮ್ಮ ನಿಶ್ಚಯದಂತೆ ಆ ಮೂವರೂ ಭಿಕ್ಷುಕರ ವೇಷದಿಂದ ಅಭ್ಯಾಗತರಾಗಿ ಅತ್ರಿಋಷಿಯ ಆಶ್ರಮಕ್ಕೆ ಬಂದಿಳಿದರು. ಆಗ ಋಷಿಯು ಆಶ್ರಮದಲ್ಲಿರಲಿಲ್ಲ. ಅನುಷ್ಠಾನಕ್ಕೆ ಹೋಗಿದ್ದನು. ಅವರು ಆಶ್ರಮದಲ್ಲಿ ಒಬ್ಬಳೇ ಇದ್ದ ಅನಸೂಯೆಯನ್ನು ಕರೆದು— 'ನಾವು ಹಸಿದಿರುವೆವು, ನಮಗೆ ಇಚ್ಛಾಭೋಜನ ನೀಡಬೇಕು' ಎಂದರು. ಕೂಡಲೆ ಅವಳು ಆ ಮೂವರನ್ನೂ ಕುಳ್ಳಿರಿಸಿ ಭೋಜನ ನೀಡಲು ಸಿದ್ಧಳಾದಳು. ಪ್ರತಿಯೊಬ್ಬರಿಗೂ ಬೇರೆ ಬೇರೆ ಭೋಜನ ಪಾತ್ರೆಗಳನ್ನಿಟ್ಟು

ಅನುಷ್ಠಾನಕ್ಕೆಂದು ಹೋಗಿದ್ದ ಅತ್ರಿಋಷಿಯು— 'ಮಧ್ಯಾಹ್ನ, ಅತಿಥಿಗಳು ಬರುವ ಕಾಲ' ಎಂದು ಬಲು ಅವಸರದಿಂದ ತನ್ನ ಆಶ್ರಮಕ್ಕೆ ಬಂದನು, ಆಶ್ರಮದಲ್ಲಿ ನೋಡುತ್ತಾನೆ! ಅನಸೂಯೆಯು ಜೋಗುಳಹಾಡುತ್ತಿರುವಳು, ತೊಟ್ಟಿಲವು ತೂಗುತ್ತಿರುವದು ಕಂಡನು, ಸೋಜಿಗಬಟ್ಟನು. ಅವನು ತನ್ನ ಪತ್ನಿಯನ್ನು ಕುರಿತು— 'ಅನಸೂಯೆ! ಇವಾರ ಕೂಸುಗಳು?' ಎಂದು ಕೇಳಲು ಆಕೆ ನಡೆದ ಸಂಗತಿಯನ್ನೆಲ್ಲ ಸಾಗ್ರವಾಗಿ ತಿಳಿಸಿದಳು. ಋಷಿಯು ಜ್ಞಾನದೃಷ್ಟಿಯಿಂದ ನೋಡಿ— 'ಈ ಕೂಸುಗಳು ತ್ರಯಮೂರ್ತಿಗಳು ಎಂದು ಒಳ್ಳೆ ಹರ್ಷದಿಂದ ಅವುಗಳಿಗೆ ನಮಸ್ಕಾರ ಮಾಡಿದನು. ಆ ತ್ರಯಮೂರ್ತಿಗಳೂ ಸಂತೋಷಹೊಂದಿದರು! ಹಾಗು ಕೂಸುಗಳ ಸ್ವರೂಪನಿಂದಲೇ ಆ ತೊಟ್ಟಿಲದಲ್ಲಿ ಉಳಿದರು.

ಅನಸೂಯೆಯ ನಿಸ್ಸೀಮ ಭಕ್ತಿಗೆ ಅತ್ರಿಋಷಿಯು ಮೆಚ್ಚಿ— 'ನಿನ್ನ ಇಚ್ಛೆ ಏನಿದೆ?' ಎಂದು ಕೇಳಲು ಅನಸೂಯೆಯು— "ಪ್ರಾಣೇಶ್ವರ! ಈ ಮೂವರೂ ದೇವತೆಗಳು ನಿನ್ನ ಭಕ್ತಿಗೆ ಮೆಚ್ಚಿ ಬಂದಿರುವರು. ನೀನೇ ಇವರಿಂದ ಪುತ್ರೇಚ್ಛೆಯ ವರವನ್ನು ಕೇಳಿಕೊಳ್ಳು ಮತ್ತು ಈ ಮೂರೂ ಕೂಸುಗಳು ನನ್ನ ಮಕ್ಕಳೋಪಾದಿ ನನ್ನ ಮನೆಯಲ್ಲಿ ಇರಬೇಕೆಂದೂ ವರವನ್ನು ಅಪೇಕ್ಷಿಸಬೇಕು" ಎಂದಳು.

ಅನಸೂಯೆ-ಅತ್ರಿ ಇವರ ಇಚ್ಛೆಯ ನುಡಿಗಳನ್ನು ಕೇಳಿ ಆ ಮೂವರೂ ದೇವತೆಗಳು ಏಕರೂಪ

ವಾಗಿ— 'ಋಷಿ ಪತ್ನಿಗಳೇ! ನಿಮ್ಮ ಇಚ್ಛೆಯಂತಾಗಲಿ' ಎಂದು ವರ ನೀಡಿ ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಆ ಏಕರೂಪದ ತ್ರಯಮೂರ್ತಿಯು ಋಷ್ಯಾಶ್ರಮದಲ್ಲಿಯೇ ಉಳಿಯಿತು. ಅನಸೂಯೆಯು ಒಳ್ಳೆ ಸಂತೋಷದಿಂದ ಸಲುಹ ಹತ್ತಿದಳು. ಆಕೆ ಪ್ರೀತಿಯಿಂದ ಅವಕ್ಕೆ ಹೆಸರನ್ನಿಟ್ಟಳು. ಬ್ರಹ್ಮಮೂರ್ತಿಯು ಚಂದ್ರನಾದನು, ವಿಷ್ಣುಮೂರ್ತಿಯು ದತ್ತನಾದನು, ಹಾಗು ಈಶ್ವರನೇ ದುರ್ವಾಸ ಎಂಬ ಹೆಸರಿನವನಾದನು. ಈ ಮೂವರೂ ಅನಸೂಯೆಯ ಮಕ್ಕಳಾದರು.

ಕೆಲ ದಿನಗಳ ಮೇಲೆ ದುರ್ವಾಸ–ಚಂದ್ರರು ತಾಯಿಯ ಅಪ್ಪಣೆಯಿಂದ ಹೊರಟರು. ದುರ್ವಾಸನು ತಪಸ್ಸಿಗೂ, ಚಂದ್ರನು ಚಂದ್ರಮಂಡಲಕ್ಕೂ ಹೋಗಿ ಬಿಟ್ಟರು. ಮೂರನೆಯವನಾದ ದತ್ತವಿಷ್ಣುಮೂರ್ತಿಯು ಆಶ್ರಮದಲ್ಲಿಯೇ ಉಳಿದನು. ಅವನೇ 'ತ್ರಯಮೂರ್ತಿದತ್ತ' ನೆಂದು ತಿಳಿಯಲ್ಪಡಹತ್ತಿದನು. 'ಸರ್ವಂ ವಿಷ್ಣುಮಯಂ ಜಗತ್' ಎಂದು ಪ್ರಸಿದ್ಧವಾಯಿತು. ಹೀಗೆ ವಿಷ್ಣುಮೂರ್ತಿಯೇ 'ದತ್ತಾತ್ರೇಯ' ನಾದನು.

ನಾಮಧಾರಕಾ! "ಅನಸೂಯೆಯ ಮನೆಯಲ್ಲಿ ತ್ರಯಮೂರ್ತಿಯೆಂದು ಒಂದೇ ಮೂರ್ತಿಯು ಇರಹತ್ತಿತು. ಆ ಮೂರ್ತಿಯ ಹೆಸರೇ 'ದತ್ತಾತ್ರೇಯ' ನು. ಈ ದತ್ತಾತ್ರೇಯನೇ ನಮ್ಮ ಶ್ರೀಗುರುವಿನ

ಮೂಲ ಪೀಠಕ್ಕೆ ಆದ್ಯನು" ಎಂದು ಸಿದ್ಧಮುನಿಯು ಹೇಳಿದನು, ನಾಮಧಾರಕನು— "ಸ್ವಾಮಿ! ನೀವು ದತ್ತಾತ್ರೇಯ ಅವತಾರದ ಪೂರ್ವಾಪರವೃತ್ತವನ್ನು ಹೇಳಿದಿರಿ. ಇನ್ನು ಮುಂದೆ ಶ್ರೀಗುರುಗಳ ಅವತಾರಗಳು ಎಂತಾದವೆಂಬದನ್ನು ನನಗೆ ವಿಸ್ತರಿಸಿ ಹೇಳುವದಾಗಬೇಕು" ಎಂದು ಬೇಡಿಕೊಂಡನು.

—o—

# ೫ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನ ಪ್ರಶ್ನೆಗೆ ಶ್ರೀಗುರುವಿನ ಅವತಾರಿಕ ಕಥೆಗಳನ್ನು ವಿಸ್ತರಿಸಿ ಹೇಳಹತ್ತಿದನು. ಎಂತೆಂದರೆ—

ನಾಮಧಾರಕನೆ! ಅಂಬರೀಷನ ನಿಮಿತ್ತ ಶ್ರೀವಿಷ್ಣುವು ಅವತಾರಿಕ ಶಾಪಕ್ಕೆ ಗುರಿಯಾದನು. ಅವನು ದಶಾವತಾರಗಳಲ್ಲದೆ ಮಾನವರೂಪಿನ ಅನೇಕ ಉಪ ಅವತಾರ ತಾಳಿದನು. ಕೇವಲ ಭಕ್ತಜನೋದ್ಧಾರಕ್ಕಾಗಿಯೇ ಅವನು ತಾಳಿದ ಅವತಾರಗಳ ಕಾರಣವಾಗಿರುವದು.

ದ್ವಾಪರದ ಅಂತ್ಯದೊಡನೆ ಕಲಿಯುಗವು ಬಂದೊದಗಿತು. ಬ್ರಾಹ್ಮಣರು ಅಜ್ಞಾನಿಗಳೂ, ಆಚಾರಹೀನರೂ ಆಗಿ ವರ್ತಿಸಹತ್ತಿದರು. ಕಲಿ ಪ್ರಾಬಲ್ಯವು ಹೆಚ್ಚಾಗಹತ್ತಿತು. ಸಗರರಿಗಾಗಿ ಭಗೀರಥನು ಗಂಗೆಯನ್ನು ಭೂಮಂಡಲಕ್ಕೆ ತಂದಂತೆ ಭಕ್ತಜನೋದ್ಧಾರಕ್ಕೆ ಶ್ರೀಗುರುವು ಅವತಾರ ಧರಿಸಿದನು. ಈ ಅವತಾರಗಳಲ್ಲಿ ಆಶ್ಚರ್ಯಕಾರಕ ಅವತಾರವೊಂದರ ಕತೆಯು ಎಂತಿರುವದೆಂದರೆ—

ಪೂರ್ವ ದೇಶದಲ್ಲಿ ಪೀಠಾಪುರ ಎಂಬ ಹೆಸರಿನ ಗ್ರಾಮವಿದೆ. ಅಲ್ಲಿ 'ಆಪಳರಾಜ' ನೆಂಬ ಆಪಸ್ತಂಭ ಶಾಖೆಯ ಬ್ರಾಹ್ಮಣನೊಬ್ಬನಿದ್ದನು. 'ಸುಮತಿ' ಎಂಬವಳು ಆತನ ಪತ್ನಿ. ಆಕೆ ಬಲು ಪತಿವ್ರತೆಯು. ದಂಪತಿಗಳು ಅತಿಥಿಸತ್ಕಾರ ಮಾಡುವಲ್ಲಿ ಮನಸ್ಸುಳ್ಳವರಾಗಿದ್ದರು.

ಒಂದು ದಿನ ಶ್ರೀದತ್ತನು ಅತಿಥಿ ವೇಷದಿಂದ ಆ ಬ್ರಾಹ್ಮಣನ ಮನೆಗೆ ಬಂದನು. ಆ ದಿನ ಅಮಾವಾಸ್ಯೆ. ಬ್ರಾಹ್ಮಣನ ಮನೆಯಲ್ಲಿ ಶ್ರಾದ್ಧವಿತ್ತು. ಶ್ರಾದ್ಧಕ್ಕಾಗಿ ಆಮಂತ್ರಿಸಿದ ಬ್ರಾಹ್ಮಣರು ಇನ್ನೂ ಬಂದಿರಲಿಲ್ಲ. ಹಾಗೂ ಅವರ ಊಟವಾಗಿರಲಿಲ್ಲ. ಅಡಿಗೆ ಸಿದ್ಧವಾಗಿತ್ತು. ಅತಿಥಿಯು ಬಾಗಿಲಿಗೆ ಬಂದ ಕೂಡಲೆ ಸುಮತಿಯು ಆ ಅತಿಥಿಗೆ ಭಿಕ್ಷೆಯನ್ನು ಹಾಕಿದಳು. ಅಷ್ಟರಿಂದಲೇ ದತ್ತಾತ್ರೇಯನು ಸಾಕ್ಷಾತ್ತಾಗಿ ಅವಳಿಗೆ ಪ್ರಸನ್ನನಾದನು. ತನ್ನ ತ್ರಯಮೂರ್ತಿಯ ರೂಪವನ್ನು ಆಕೆಗೆ ತೋರಿಸಿದನು. ಸುಮತಿಯು ಆ ದಿವ್ಯ ಸ್ವರೂಪ ನೋಡಿ ಓಡುತ್ತ ಬಂದು ನಮಸ್ಕರಿಸಿದಳು. ದತ್ತಾತ್ರೇಯನು ಆಕೆಗೆ— "ತಾಯಿ ! ನಿನಗೆ ಇಚ್ಛಿತವಾದ ವರವೇನು ? ಕೇಳಿಕೊಳ್ಳು" ಎಂದನು. ಹಾಗು 'ನೀನು ಅಪೇಕ್ಷಿಸಿದ ಫಲವನ್ನು ತೀವ್ರ ಹೊಂದುವಿ' ಎಂದನು.

ಶ್ರೀಸ್ವಾಮಿಯ ಪ್ರಸನ್ನ ನುಡಿಗಳನ್ನು ಕೇಳಿ ಸುಮತಿಯು ಕೈಮುಗಿದು— "ಜಗನ್ನಾಥನೆ ! ನೀನು ನನಗೆ ನಿಶ್ಚಿತ ವರವನ್ನೇ ಕೊಡುವದಾದರೆ ನನ್ನ ಮನಸ್ಸಿನಲ್ಲಿ ಒಂದು ಬಲವತ್ತರ ವಾಸನೆಯಿದೆ, ಆ ವಾಸನೆಯನ್ನು ಪೂರ್ಣಗೊಳಿಸುವದಾಗಬೇಕು. ಕೃಪಾನಿಧಿಯೇ ! ಅದು ಅಸತ್ಯವಾಗಬಾರದು" ಎಂದು ನುಡಿದು ಮತ್ತೆ ನಮಸ್ಕರಿಸಿದಳು. ಆಕೆಯ ದಯಾನ್ವಿತ ಬೇಡಿಕೆಯಿಂದ ದತ್ತನು ಸಂತುಷ್ಟನಾಗಿ— 'ತಾಯಿ ! ನಿನ್ನ ವಾಸನೆಯೇನಿರುವದೆಂಬದನ್ನು ಗುಪ್ತವಿರಿಸದೆ ಸ್ಪಷ್ಟವಾಗಿ ಹೇಳು" ಎಂದು ಆಕೆಯ ಕೈಹಿಡಿದು ಕೇಳಲು ಸುಮತಿಯು— "ದೇವಾ ! ನನ್ನ ವಾಸನೆಯಿನ್ನೊಂದಿಲ್ಲ. ನೀನು ನನ್ನನ್ನು 'ತಾಯಿ' ಎಂದು

ಸಂಬೋಧಿಸಿದಿಯಲ್ಲವೇ ? ಅದಕ್ಕನುಸರಿಸಿ ನಾನು ಮಾತೃತ್ವವನ್ನು ಪಡೆಯುವದಕ್ಕೆ ನನ್ನನ್ನು ಶಕ್ತವಳನ್ನಾಗಿ ಮಾಡು. ದೇವಾ ! ಇದುವರೆಗೆ ನನಗೆ ಹುಟ್ಟಿದ ಮಕ್ಕಳು ಜನಿಸಿದ ಕೂಡಲೇ ಸತ್ತುಸತ್ತು ಹೋದವು. ಅವುಗಳಲ್ಲೇ ಎರಡು ಕೂಸು ಮಾತ್ರ ಉಳಿದವು. ಅವೂ ಕೂಡ ಒಂದು ಕುರುಡ ಹಾಗು ಇನ್ನೊಂದು ಹೆಳವನಾಗಿ ಹೇಗೋ ದೊಡ್ಡವಾಗಿವೆ. ಆದರೆ ಆ ಊನ ಮಕ್ಕಳಿಂದ ನಮಗೇನು ಉಪಯೋಗ? ನನಗೆ ಜ್ಞಾನಿಯೂ, ಪುರಾಣ ಪುರುಷನೂ, ಜಗದ್ವಂದ್ಯನೂ, ದೇವಸದೃಶನೂ ಹಾಗು ನಿಮ್ಮಂತೆ ದಾತಾರನೂ ಆಗುವ ಮಗನೇ ಲಭಿಸಬೇಕೆಂಬ ಹಿರಿಯಾಸೆಯಿದೆ" ಎಂದು ಹೇಳಿದಳು. ಆಕೆಯ ಉತ್ಕಟೇಚ್ಛೆಯಿಂದ ಶ್ರೀದತ್ತನಿಗೆ ಬಲು ಸಂತೋಷವಾಯಿತು ! ಆ ದೇವನು ಸುಮತಿಯನ್ನು ಕುರಿತು— "ತಾಯಿ ! ನಿನ್ನ ಬೇಡಿಕೆಗನುಸರಿಸಿದ ಲಕ್ಷಣವುಳ್ಳ ಪುತ್ರನೇ ನಿನ್ನ ಉದರದಿಂದ ಜನ್ಮಿಸುವನು. ಅವನಿಂದ ನಿಮ್ಮ ವಂಶೋದ್ಧಾರವಾಗುವದು, ಈ ಕಲಿಯುಗದಲ್ಲಿ ಅವನು ಪ್ರಸಿದ್ಧನಾಗುವನು. ನೀವು ಯಾವಾಗಲೂ ಅವನ ಹೇಳಿಕೆಯಂತೆಯೇ ವರ್ತಿಸಬೇಕು. ಇದರಲ್ಲಿ ನೀವು ಅಂತರಿಸಿದರೆ ಮಾತ್ರ ಅವನು ನಿಮ್ಮನ್ನು ಬಿಟ್ಟು ಹೋಗುವನು. ತಾಯಿ ! ಆ ನಿನ್ನ ಮಗನು ಜ್ಞಾನಮಾರ್ಗದಲ್ಲಿ ಸಮರ್ಥನಾಗಿ ನಿಮ್ಮ ದೀನ-ದಾರಿದ್ರ್ಯಗಳನ್ನು ದೂರ ಮಾಡುವನು." ಎಂದು ಶ್ರೀಯಮೂರ್ತಿ ದತ್ತನು ಸುಮತಿಗೆ ಹೇಳಿದನು, ಮತ್ತು ಆಕೆ ಅಲ್ಲಿಯೇ ನಿಂತಾಗ ಆಕೆ ನೋಡನೋಡುತ್ತಿರಲು ಅದೃಶ್ಯನಾಗಿಬಿಟ್ಟನು. ಸುಮತಿಗೆ ಆಗ ಅತ್ಯಂತ ವಿಸ್ಮಯವಾಯಿತು. ತನ್ನ ಪತಿಯು ಮನೆಗೆ ಬಂದ ಕೂಡಲೆ ಆಕೆ ಇದುವರೆಗೆ ನಡೆದ ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಿದಳು. ಅವನಿಗೂ ಬಲು ಸಂತೋಷ ! ಅವನು ತನ್ನ ಹೆಂಡತಿ ಸುಮತಿಯನ್ನು ಕುರಿತು— "ಸತಿ ! ಮಧ್ಯಾಹ್ನ

ಸಮಯದ ಅತಿಥಿ ಕಾಲದಲ್ಲಿ ಶ್ರೀದತ್ತನು ಭಿಕ್ಷೆಗೆ ಬರುವದುಂಟು. ಭಿಕ್ಷೆ ನೀಡದೆ ಅವನನ್ನು ಎಂದೂ ಹಿಂದಿರುಗಿ ಕಳಿಸಬೇಡ. ಆ ದತ್ತನು ಸದಾ ಕರವೀರಮಾಹುರ ಕ್ಷೇತ್ರದ ಪಂಚಾಳೇಶ್ವರ ನಗರದಲ್ಲಿ ವಾಸ ಮಾಡಿಕೊಂಡು ಇರುವನು. ಅವನು ತನ್ನ ಮನಸಿಗೆ ಬಂದ ಅನೇಕ ವೇಷ-ಸೋಗು ಧರಿಸುವನು. ಅವನ ಬರುವಿಕೆಯು ಸಾಕ್ಷೇಪವೇ ಆಗಿರುವದು. ಅವನಿಗಿ ಭಿಕ್ಷೆ ನೀಡುವದಕ್ಕೆ ನನ್ನ ಅಪ್ಪಣೆ ಅವಶ್ಯಕತೆ ನಿನಗಿಲ್ಲ" ಎಂದನು. ಅದಕ್ಕೆ ಸುಮತಿಯು— "ಈ ದಿನ ನಾನು ನಿಮ್ಮನ್ನು ಧಿಕ್ಕರಿಸಿ, ಬ್ರಾಹ್ಮಣರಿಗೆ ಭೋಜನ ಮಾಡಿಸದೆ ಆ ಭಿಕ್ಷುಕನಿಗೆ ಭಿಕ್ಷೆ ನೀಡಿದೆ, ಇದು ನನ್ನ ಅಪರಾಧವಲ್ಲವೇ?" ಎಂದಳು. ಅದಕ್ಕೆ ಆಪಳರಾಜನು— "ಪತಿವ್ರತೆ! ಇದರಲ್ಲಿ ತಪ್ಪನ್ನೆಣಿಸಲಾರೆ, ನನ್ನ ಪಿತರುಗಳು ತೃಪ್ತರಾದರು. ಇದೊಂದು ನನಗೆ ದೊಡ್ಡ ಲಾಭವಾಯಿತು. ಪಿತರುಗಳವೆಸೆಯಿಂದ ಕರ್ಮಮಾಡಿ ವಿಷ್ಣುವಿಗೆ ಸಮರ್ಪಿಸುವೆವು. ಆ ವಿಷ್ಣುಸ್ವರೂಪಿನ ಸ್ವಾಮಿಯೇ ಬಂದು ನಮ್ಮ ಮನೆಯಲ್ಲಿ ಭಿಕ್ಷೆ ಸ್ವೀಕರಿಸಿದನೆಂದಮೇಲೆ ವಿಷ್ಣುವಿಗೆ ಅರ್ಪಿಸಿದೆವೆಂದೇ ತಿಳಿ, ಆ ತ್ರಿಮೂರ್ತಿಯಿಂದ ವರ ಪಡೆದ ನೀನು ಧನ್ಯಳು! ನಿಶ್ಚಯವಾಗಿಯೂ ನಿನಗೆ ನಿನ್ನ ಇಚ್ಛೆಗನುಸರಿಸಿದ ಪುತ್ರನೇ ಜನ್ಮಿಸುವನು. ಚಿಂತೆ ಬೇಡ" ಎಂದನು.

ಮುಂದೆ ಆ ದಂಪತಿಗಳು ನಿಶ್ಚಿಂತೆಯಲ್ಲಿ ಕೆಲ ದಿನ ಕಳೆದರು, ಅದರೊಳಗೇ ಸುಮತಿಯು ಗರ್ಭವತಿಯಾದಳು. ಕಾಲಕ್ರಮಿಸಿ ಒಂಭತ್ತು ತಿಂಗಳುಗಳು ತುಂಬಿದವು. ಒಂದು ಶುಭ ದಿನದಲ್ಲಿ ಆಕೆ ಗಂಡು ಮಗುವನ್ನೇ ಹೆತ್ತಳು! ದಂಪತಿಗಳಿಗೆ ಬಲು ಆನಂದ!

ಮುಗುಮ್ಮಿನ -ಪಾತ್ರೆಕರ್ಪೂರ-ನಾಮಕರಣಗಳಾದವು. 'ಶ್ರೀಪಾದ' ಎಂಬ ಹೆಸರನ್ನು ಆ ಕೂಸಿಗೆ ಇಟ್ಟರು. ಭಕ್ತಜನೋದ್ಧಾರಕ್ಕಾಗಿ ಅವತರಿಸಿದ ತ್ರಯಮೂರ್ತಿದತ್ತನ ಅವತಾರವೇ ಈ ಶ್ರೀಪಾದನು.

ಕೂಸು ಬೆಳೆಯಿತು ದೊಡ್ಡದಾಯಿತು. ಬಾಲಕನಾದನು, ಏಳು ವರುಷದ ವಯದವನಾದನು. ಬ್ರಾಹ್ಮಣನು ಶಾಸ್ತ್ರೋಕ್ತವಾಗಿ ಶ್ರೀಪಾದನ ಉಪನಯನಮಾಡಿದನು. ಆಗ ಬಾಲಕನು ಬ್ರಹ್ಮಚಾರಿಯ ಸ್ವರೂಪಹೊಂದಿದನು. ಆಗಲೇ ಅವನು ವೇದ, ಮೀಮಾಂಸೆ, ತರ್ಕ ಮೊದಲಾದವುಗಳನ್ನು ವಿಸ್ತೃತವಾಗಿಯೂ ಅಸ್ಖಲಿತವಾಗಿಯೂ ಉಚ್ಚರಿಸಹತ್ತಿದನು. ಎಲ್ಲರಿಗೂ ವಿಸ್ಮಯ!

ಏಳನೆಯ ವಯಸ್ಸಿಗೆ ಬ್ರಹ್ಮಚರ್ಯಾಶ್ರಮದಲ್ಲಿ ಕಾಲಿಟ್ಟ ಶ್ರೀಪಾದನು ವಿದ್ಯಾವ್ಯಾಸಂಗದಲ್ಲಿ ಕಾಲ ಕಳೆಯುತ್ತ ಹದಿನಾರನೆಯ ವರ್ಷದ ವಯಕ್ಕೆ ಮುಟ್ಟಿದನು. ತಾಯಿ—ತಂದೆಗಳು ಮಗನು ದೊಡ್ಡವನಾದನೆಂದು ಬಗೆದು ಅವನ ಲಗ್ನಮಾಡುವ ಆಲೋಚನೆ ನಡೆಯಿಸಿದರು. ಅವರು ತಮ್ಮ ಈ ವಿಚಾರವನ್ನು ಮಗನಿಗೆ ತಿಳಿಸಿದರು. ಅದಕ್ಕೆ ಶ್ರೀಪಾದನು ತಾಯಿ—ತಂದೆಗಳನ್ನು ಕುರಿತು— "ನೀವು ನನ್ನ ಮದುವೆ ಮಾಡುವದಕ್ಕೆ ಆತುರರಾಗಿರುವಿರಿ, ಆದರೆ ಈ ಮೊದಲೇ 'ವೈರಾಗ್ಯ ಸ್ತ್ರೀ' ಯಳೊಡನೆ ನನ್ನ ಲಗ್ನವಾಗಿದೆ. ಆ ನಾರಿಯ ಹೊರತು ಬೇರೆ ಸ್ತ್ರೀಯರೆಲ್ಲರೂ ನನಗೆ ಮಾತೃ ಸದೃಶರು. ಆ ಯೋಗ ಸ್ತ್ರೀಯೊಡನೆ ನನ್ನ ಲಗ್ನವಾದಂದಿನಿಂದ 'ಶ್ರೀವಲ್ಲಭ' ಎಂಬ ಹೆಸರು ನನ್ನದಾಗಿರುವದು" ಅದಕ್ಕೆಂತಲೇ ತ್ರಯಮೂರ್ತಿಗೆ

‘ಶ್ರೀಪಾದ ಶ್ರೀವಲ್ಲಭ’ ಹೆಸರಾಗಿದೆ. ‘‘ಇನ್ನು ನಾನು ಉತ್ತರ ಘಂಥಕ್ಕೆ ಕ್ರಮಿಸುವೆನು’’ ಎಂದು ಹೇಳಿದನು.

ಶ್ರೀಪಾದನ ಮಾತು ಕೇಳಿದ ಕೂಡಲೆ ಆ ದಂಪತಿಗಳಿಗೆ ಹಿಂದೆ ಹೇಳಿದ ಭಿಕ್ಷುಕನ ಮಾತು ಸತ್ಯವಾಯಿತೆಂದೆನ್ನಿಸಿತು. ಇನ್ನು ಇವನ ಮಾತನ್ನು ಒಪ್ಪದಿದ್ದರೆ ಈಗಲೇ ನಮಗೆ ವಿಘ್ನವೊದಗುವದು ನಿಶ್ಚಿತವು. ಎಂದು ವಿಚಾರಿಸಿ ಅವರು ಶ್ರೀಪಾದನನ್ನು ಕುರಿತು— ‘‘ಮಗನೇ! ನೀನು ನಮ್ಮನ್ನು ‘ರಕ್ಷಿಸುವಿ’ ಎಂಬ ಆಸೆ ತಾಳಿದ್ದೆವು” ಎಂದು ನುಡಿದು ಕಣ್ಣೀರು ಉದುರಿಸಹತ್ತಿದರು. ನೆಲಕ್ಕೊರಗಿದರು. ಶ್ರೀಪಾದನು ತನ್ನ ಕೈಯಿಂದ ಅವರನ್ನೆಬ್ಬಿಸಿದನು. ತಾಯಿಯನ್ನು ಕುರಿತು— “ತಾಯಿ! ಚಿಂತಿಸಬೇಡ, ನೀನು ಬೇಡಿದ್ದನ್ನು ನಾನು ಕೊಡುವೆನು. ದೃಢಚಿತ್ತದಿಂದ ಸುಖವಾಗಿ ಇರಬೇಕು” ಎಂದು ಹೇಳಿದನು. ಅದಕ್ಕೆ ತಾಯಿಯು— ‘ಮಗನೆ! ನಿನ್ನಿಂದ ನಾವು ನಮ್ಮ ಉದ್ಧಾರವೆಂದು ಬಗೆದಿದ್ದೆವು. ನಿನ್ನ ಅಣ್ಣಂದಿರಲ್ಲಿ ಒಬ್ಬನು ಕುರುಡನು, ಇನ್ನೊಬ್ಬನು ಹೆಳವನು. ಅವರಿಂದ ವೃದ್ಧಾಪ್ಯದಲ್ಲಿ ನಮ್ಮ ಸಂರಕ್ಷಣೆ ಎಂತು? ಇಷ್ಟೇ ಅಲ್ಲ. ಊನರಾದ ಅವರಿಬ್ಬರನ್ನು ಅವರ ಜೀವಮಾನದವರೆಗೆ ಅದಾರು ರಕ್ಷಿಸುವರು?’’ ಎಂದಳು. ತಾಯಿಯ ಮಾತನ್ನು ಕೇಳಿ ಶ್ರೀಪಾದನು ಆಗಲೇ ತನ್ನ ಅಣ್ಣಂದಿರಿಬ್ಬರನ್ನೂ ತನ್ನ ಅಮೃತ ದೃಷ್ಟಿಯಿಂದ ನೋಡಿದನು. ಕೂಡಲೆ ಅವರಿಬ್ಬರೂ ಸಗುಣರಾದರು. ಕುರುಡನಿಗೆ ಕಣ್ಣು ಕಾಣಹತ್ತಿದವು, ಹೆಳವನು ಓಡಾಡಹತ್ತಿದನು. ಹಾಗು ಅವರಿಬ್ಬರಲ್ಲಿ ವೇದ-ಶಾಸ್ತ್ರಾದಿಗಳ ಜ್ಞಾನವುಂಟಾಯಿತು. ಅವರು ತಮ್ಮ ಧನ್ಯತೆಯನ್ನೆಣಿಸಿಕೊಂಡು

ಶ್ರೀಪಾದನಿಗೆ ನಮಸ್ಕರಿಸಿದರು. ಶ್ರೀಪಾದನು ಅವರಿಗೆ ಶ್ರೇಷ್ಠ ವರ ಕೊಟ್ಟನು. ಆ ಮೇಲೆ ಶ್ರೀಪಾದನು ತಾಯಿಯನ್ನು ಕುರಿತು— “ತಾಯಿ! ನಿನ್ನ ಈ ಇಬ್ಬರು ಮಕ್ಕಳು ಸಗುಣರಾದರು. ಇವರಿಂದ ವಂಶೋದ್ಧಾರವು ನಿಶ್ಚಿತವು. ಇನ್ನು ಇವರೊಂದಿಗೆ ಸುಖವಾಗಿ ಬಾಳಿರಿ. ಇನ್ನು ನನ್ನನ್ನು ತಡೆಯಬೇಡಿರಿ, ನಾನು ಉತ್ತರ ಪಂಥಕ್ಕೆ ತೆರಳುವೆನು. ಅಲ್ಲಿ ಸಾಧು ಜನರಿಗೆ ದೀಕ್ಷೆಕೊಡುವ ನನ್ನ ಕೆಲಸವು ಮಹತ್ವವಾದದ್ದಿರುವದು” ಎಂದು ತಾಯಿ–ತಂದೆಗಳಿಗೆ ಹೇಳಿ ಶ್ರೀಪಾದನು ಅಲ್ಲಿಯೇ ಅದೃಶ್ಯನಾದನು. ಹಾಗು ಹಾಗೆಯೇ ಕಾಶೀಪುರಕ್ಕೆ ಹೋಗಿ ಅಲ್ಲಿ ಗೌಪ್ಯವಾಗಿ ಇರಹತ್ತಿದನು.

ಕೆಲ ದಿನ ಕಾಶಿಯಲ್ಲಿದ್ದು ನಂತರ್ಯ ಶ್ರೀಪಾದನು ಬದರೀವನಕ್ಕೆ ಹೋದನು ಅಲ್ಲಿ ನಾರಾಯಣನ ದರ್ಶನ ಪಡೆದನು. ಕಾರ್ಯಾಕಾರಣ ಮನುಷ್ಯ ದೇಹದಿಂದ ಅವತರಿಸಿದ ಶ್ರೀಪಾದನು ಭಕ್ತಜನರಿಗೆ ದೀಕ್ಷೆ ಕೊಡುವದಕ್ಕಾಗಿ ತೀರ್ಥಾಟಣ ಕೈಕೊಂಡನು. ಮನೋವೇಗದಿಂದ ಸಂಚರಿಸುತ್ತ ಗೋಕರ್ಣಕ್ಷೇತ್ರಕ್ಕೆ ಬಂದನು” ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

# ೭ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು— ಅವತಾರಿಕ ಶ್ರೀಪಾದನ ಕಥೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ—

"ಶ್ರೀಪಾದನು ಗೋಕರ್ಣಕ್ಕೆ ಬಂದನು. ಭಕ್ತಜನರನ್ನು ಉದ್ಧರಿಸುವ ಹಾಗು ಸಾಧುಗಳಿಗೆ ದೀಕ್ಷೆಕೊಡುವ ಉದ್ದೇಶವೇ ಆ ತ್ರಯಮೂರ್ತಿಯ ಅವತಾರಿಕನದಾಗಿತ್ತು. ಗೋಕರ್ಣ ಮಹಾತ್ಮ್ಯವು ವಿಶಿಷ್ಟತರವಾದದ್ದು. ಹಾಗು ಅಪೂರ್ವವಾದದ್ದು. ಅಲ್ಲಿ ಮಹಾಬಳೇಶ್ವರಲಿಂಗವು ಸ್ವಯಂಭೂಶಿವನೆಂದು ಪ್ರಸಿದ್ಧವಾದದ್ದಿರುವದು. ಆಲಿಂಗವು ಲಂಬೋದರನಿಂದ ಸ್ಥಾಪಿತವಾದ ಆಖ್ಯಾನವು ಬಲು ಮನೋಹರ ವಾಗಿದೆ.

ಪುಲಸ್ತ್ಯನೆಂಬ ಬ್ರಾಹ್ಮಣನಿಗೆ ಕೈಕಯಾ ಎಂಬ ಪತ್ನಿಯಿದ್ದಳು. ಆ ದಂಪತಿಗಳು ಈಶ್ವರ ಪೂಜೆಯನ್ನು ಅತಿ ಭಕ್ತಿಯಿಂದ ಮಾಡುತ್ತಿದರು. ನಿತ್ಯವೂ ಶಿವಪೂಜೆಯಿಲ್ಲದೆ ಅವರು ಅನ್ನಗ್ರಹಣ ಮಾಡುತ್ತಿರಲಿಲ್ಲ. ಕೈಕಯೆಯು ಶಿವಪೂಜೆಯನ್ನು ಮಾಡುತ್ತಿರಲು ಒಂದು ದಿನ ಆಕೆಗೆ ಲಿಂಗ ದೊರೆಯಲಿಲ್ಲ. ಇನ್ನು ವ್ರತಭಂಗವಾಗುವದೆಂದರಿತು ಆಕೆಯು ಮಣ್ಣಿನಿಂದ ಲಿಂಗವನ್ನು ಮಾಡಿ ಅದನ್ನೇ ಪೂಜಿಸಲು ಉದ್ಯುಕ್ತಳಾದಳು.

ಲಂಕಾಧಿಪ ರಾವಣನು ಆ ಕೈಕಸೆಯ ಮಗನು. ಅವನು ಅಕಸ್ಮಾತ ತನ್ನ ತಾಯಿಯು ಲಿಂಗ ಪೂಜೆಯನ್ನು ಮಾಡುವಲ್ಲಿಗೆ ಬಂದನು. ತಾಯಿಯ ದೇವಭಕ್ತಿಯನ್ನು ಕಂಡನು. ಆದರೆ ಆಕೆ ಮೃತ್ತಿಕೆ ಲಿಂಗವನ್ನು ಪೂಜಿಸುವದನ್ನು ನೋಡಿ— "ಅವ್ವಾ! ಇದೇನು ಮಣ್ಣಿನ ಮುದ್ದೆಯನ್ನು ಪೂಜಿಸುವಿ?" ಎಂದು ಕೇಳಲು ಆಕೆ 'ತನಗೆ ಈ ದಿನ ಲಿಂಗ ದೊರೆಯದ್ದರಿಂದ ಈ ಮೃತ್ತಿಕೆಯ ಲಿಂಗವನ್ನು ಅರ್ಚಿಸುವೆನು' ಎಂದು ಹೇಳಿದಳು. ಇದು ರಾವಣನಿಗೆ ಸರಿಬಾರಲಿಲ್ಲ. ಅವನು— 'ಅವ್ವಾ! ದರಿದ್ರ ಸ್ಥಿತಿಯವರು ಮಾಡುವಪೂಜೆ ಇದಾಗಿರುವದು. ಇದಿರಲಿ, ಅವ್ವಾ! ಲಿಂಗಪೂಜೆಯನ್ನೇಕೆ ಮಾಡುವಿ?' ಎಂದು ಕೇಳಲು ಆಕೆ— 'ಮಗನೆ! ಕೈಲಾಸಪ್ರಾಪ್ತಿಗಾಗಿ ಈ ಲಿಂಗಪೂಜೆಯ ವ್ರತವನ್ನು ಮಾಡುತ್ತಿರುವೆನು' ಎಂದು ಹೇಳಿದಳು. ಕೂಡಲೆ ರಾವಣನು— 'ನಿನಗೆ ಕೈಲಾಸಬೇಕೇ? ಆ ಕೈಲಾಸವನ್ನೇ ಇಲ್ಲಿ ತಂದಿಳಿಸುವೆನು. ಪ್ರತ್ಯಕ್ಷ ಶಿವ ಪೂಜೆಯನ್ನು ನಿತ್ಯವೂ ಮಾಡುತ್ತಹೋಗು, ತೆಗೆ ಆ ಮಣ್ಣಿನ ಮುದ್ದೆಯನ್ನು ತೆಗೆದೊಗೆ' ಎಂದು ಸಿಟ್ಟಿನಿಂದ ಆ ಲಿಂಗಪೂಜೆಯನ್ನು ಮುರಿದು ಹಾಗೇ ಕೈಲಾಸಕ್ಕೆ ಹೋದನು. ಅಲ್ಲಿಯ ಶಿವಪುರವನ್ನು ದಿಟ್ಟಿಸಿ ನೋಡಿದನು. ಶುಭ್ರವೂ ರಮ್ಯವೂ ಆಗಿರುವ ಕೈಲಾಸಪರ್ವತವನ್ನು ನಿರೀಕ್ಷಿಸಿದನು. ತನ್ನ ಇಪ್ಪತ್ತೂ ಕೈಗಳಿಂದ ಅದನ್ನು ಅಲುಗಾಡಿಸಹತ್ತಿದನು. ಅವನ ಈ ಕ್ರಿಯೆಯಿಂದ ಕೈಲಾಸಭುವನವು ಕಂಪಿಸಹತ್ತಿತು. ನಂತರ ಅದರಲ್ಲಿ ಸಿಡಿಲು ಹುಟ್ಟಿದುದ ನೋಡಿ ತನ್ನ ಹತ್ತೂ ತಲೆಗಳನ್ನು ಆ ಪರ್ವತಕ್ಕೆ ಹಚ್ಚಿದನು. ಬಲವಂತಿಕೆಯಿಂದ ಆ ಗಿರಿಯನ್ನೆತ್ತಲು ಯತ್ನಿಸಿದನು. ಮೊದಲು ತನ್ನ ಕೈಗಳಿಂದ ಅದನ್ನು ನೆಗವಿ ಮೊಳಕಾಲ ಮೇಲಿರಿಸಿಕೊಂಡನು. ಆಗ ಸಪ್ತ ಪಾತಾಳಗಳ ಸ್ಥಿತಿಯು ತಪ್ಪಿ ಅವು ಹೊಯ್ದಾಡಹತ್ತಿದವು. ಶೇಷನು ತನ್ನ ಹೆಡೆ

ಯನ್ನು ಓರೆ ಮಾಡಿ ಪೃಥ್ವಿಯನ್ನು ಒತ್ತಟ್ಟಿಗೆ ಸರಿಸಿದನು, ಭೂಧರ ಕೂರ್ಮವು ನಡುಗಹತ್ತಿತು. ದೇವತೆಗಳು ಬೆದರಿದರು. ಅಮರಪುರದ ನೆಲೆದಪ್ಪುವಂತಾಯಿತು. ಸ್ವರ್ಗ–ಸತ್ಯ–ವಿಷ್ಣು ಲೋಕಗಳಲ್ಲಿಯವರು ಪ್ರಲಯ ಒದಗಿತೆಂದು ಹೌಹಾರಿ ಕುಳಿತರು, ಕೈಲಾಸಪುರಿಯವರಂತೂ ದಿಕ್ಕುಗಾಣದಾದರು. ಅಷ್ಟೇ ಏಕೆ! ಕೈಲಾಸಪತಿಯ ಪತ್ನಿ ಗಿರಿಜೆಯೂ ಭಯಭೀತಳಾಗಿ ಶಿವನ ಬದಿಯನ್ನು ಆಶ್ರಯಿಸಿದಳು. ಆಕೆ ಶಿವನನ್ನು ಕುರಿತು— "ಇದೇನು? ನಮ್ಮ ಈ ಕೈಲಾಸಕ್ಕೆ ದುರವಸ್ಥೆ? ನೀವು ಇದಕ್ಕೆ ಏನೊಂದು ಪ್ರತೀಕಾರ ಮಾಡದೆ ಸುಮ್ಮನೆ ಕುಳಿತಿರುವಿರಲ್ಲ!' ಎಂದು ಬಾಯ್ದೆರೆದು ಹೇಳಿದಳು. ಅದಕ್ಕೆ ಈಶ್ವರನು— "ಗಿರಿಜೆ! ಏನೊಂದು ಚಿಂತಿಬೇಡ. ಲಂಕಾಧಿಪ ರಾವಣನು ನನ್ನ ಭಕ್ತನು ಅವನ ಲೀಲೆಯಿದು" ಎನ್ನಲು ಗಿರಿಜೆಯು— 'ದೇವಾ! ಅದೇನೇ ಇರಲಿ, ರಕ್ಷಿಸು! ರಕ್ಷಿಸು!' ಎಂದಳು. ಶಿವನು ಆಕೆಯ ಬೇಡಿಕೆಯನ್ನು ಮನ್ನಿಸಿ ತನ್ನ ಎಡಗೈ ಹಸ್ತದಿಂದ ಮೇಲ್ಭಾಗವನ್ನು ಹತ್ತಿಕ್ಕಿದನು. ಅದರ ಪರಿಣಾಮವಾಗಿ ರಾವಣನ ಹತ್ತೂ ಶಿರಗಳ ಹಾಗು ಇಪ್ಪತ್ತೂ ಕೈಗಳ ಮೇಲೆ ಕೈಲಾಸಗಿರಿಯು ಭಾರಬಿದ್ದು ಒದ್ದಾಡಹತ್ತಿದನು. ಅವನು ಶಿವ, ಶಿವ ಎಂದು ಉಚ್ಚರಿಸಿ ಸ್ತೋತ್ರಗಳಿಂದ ಶಿವಧ್ಯಾನ ಮಾಡಹತ್ತಿದನು. ಭೋಲಾನಾಥ ಶಂಕರನು ತನ್ನ ಭಕ್ತನು ಮಾಡುವ ಸ್ತುತಿಗೆ ಮೆಚ್ಚಿ ತಾನು ಹತ್ತಿಕ್ಕಿದ್ದ ಎಡಗೈಯನ್ನು ಹಿಂದಕ್ಕೆ ಸರಿಸಿಕೊಂಡನು. ಆಗ ಆ ಲಂಕೇಶ್ವರನು ಬಿಡುಗಡೆ ಹೊಂದಿದನು. ಅಪಾರವಾದ ಶಿವಸ್ತೋತ್ರ ಮಾಡಹತ್ತಿದನು. ತನ್ನ ಶಿರಸ್ಸನ್ನು ಕೊಯ್ದುಕೊಂಡು ಅದಕ್ಕೆ ತನ್ನ ಕರುಳನ್ನು ತಂತಿಯನ್ನಾಗಿ ಹಚ್ಚಿ ವೀಣೆಯಂತೆ ನುಡಿಸಹತ್ತಿದನು. ಸಹಸ್ರ ವೇದಗಳನ್ನು ಒಟ್ಟಾಗಿಸಿಯೂ ವರ್ಣಕ್ರಮಾದಿಗಳನ್ನು ವಿಸ್ತರಿಸಿಯೂ ಸಾಮವೇದದ ಗಾಯನದಿಂದ ಹಾಡಹತ್ತಿದನು. ಗಣ–ರಸ–ಸ್ವರಯುಕ್ತ

ಎಲ್ಲ ರಾಗಗಳನ್ನು ಹಾಡಿದನು. ಎಂಟೂ ಗಣಗಳಾದ 'ಮಯರಸತಭಜನ' ಗಳನ್ನು ವಿಸ್ತರಿಸಿ ಹಾಡಿದನು, ನವರಸ, ಸಪ್ತಸ್ವರಗಳ ವ್ಯುತ್ಪತ್ತಿಯುಕ್ತ ಗೀತೆಗಳನ್ನು ಹಾಡಿದನು. ಶ್ರೀರಾಗಾದಿ ರಾಗಗಳನ್ನು ರಾಗಿಣಿಯೊಡನೆ ಬೆರಸಿ ಸಾಮಗಾನದ ಛಂದದಿಂದ ಗಾಯನಮಾಡಿದನು. ಮತ್ತೊಂದು, ಇನ್ನೊಂದು ಹೀಗೆ ತನ್ನ ಶಿರಗಳನ್ನು ಕೊಯ್ದುಕೊಂಡು ಅದಕ್ಕೆ ತನ್ನ ಶರೀರದಲ್ಲಿನ ಆಂತ್ರಗಳನ್ನು ಹಚ್ಚಿ ವಾದ್ಯಮಾಡಿಕೊಂಡನು. ಆ ವಾದ್ಯಗಳನ್ನು ಬಾರಿಸುತ್ತ ದಿನದ ಕಾಲಪ್ರಹರ ಸಮಯಗಳಿಗನುಸರಿಸಿ ಮೂವತ್ತಾರೂ ರಾಗಯುಕ್ತ ಗಾಯನಮಾಡಹತ್ತಿದನು.

ಈ ಪ್ರಕಾರ ರಾವಣನು ವ್ಯಕ್ತಪಡಿಸಿದ ನಿರ್ವಾಣಭಕ್ತಿಗೆ ಚಂದ್ರಶೇಖರ ಸಾಂಬನು ಒಳ್ಳೇ ಸಂತುಷ್ಟಿಹೊಂದಿದನು. ಶಿವನು— "ಭಕ್ತ ಶಿರೋಮಣಿ ರಾವಣ! ನಿನ್ನ ಇಚ್ಛೆಯೇನು? ನಿನ್ನ ಬೇಡಿಕೆಗಳೆಲ್ಲವನ್ನೂ ಪೂರೈಸುವೆನು" ಎಂದನು. ಅದಕ್ಕೆ ರಾವಣನು— "ದೇವಾ! ನಿನ್ನ ಬಳಿಯಲ್ಲಿ ನಾನೇನು ಬೇಡಲಿ? ಎಲ್ಲವೂ ನನ್ನಲ್ಲಿದೆ. ಲಕ್ಷ್ಮಿಯೂ ಸಿದ್ಧಿಗಳೂ ನನ್ನ ಮನೆಯ ದಾಸಿಯರು. ಬ್ರಹ್ಮನು ನನ್ನ ಮನೆಯ ಜೋಯಿಸನು, ದೇವತೆಗಳೆಲ್ಲ ನಿರಂತರ ನನ್ನ ಸೇವೆ ಮಾಡುವ ಸೇವಕರು. ರವಿ-ಶಶಿ-ವರುಣ-ವಾಯುಗಳು ನನ್ನಲ್ಲಿ ತಮತಮಗುಚಿತ ಕೆಲಸಗಳನ್ನೇ ಕೈಕೊಂಡು ದುಡಿಯುತ್ತಿರುವರು. ಅಗ್ನಿಯು ಒಂದೇ ಸವನೆ ಸೇವೆ ಮಾಡುವನು. ಯಮನಂತೂ ಯಾವಾಗಲೂ ನನ್ನ ಕಟ್ಟಾಳು. ನನ್ನ ಅಪ್ಪಣೆಯಿಲ್ಲದೆ ಅವನು ಯಾರನ್ನೂ ಶಿಕ್ಷಿಸುವದಿಲ್ಲ. ದೇವಾ! ಇಂದ್ರಜಿತ್ತುವಿನಂಥ ಮಗನೂ ಕುಂಭಕರ್ಣನಂಥ ಬಂಧುವೂ ಸಮುದ್ರ

ದಲ್ಲಿರುವ ಪವಿತ್ರಸ್ಥಾನವೂ ಮನೆಯಲ್ಲಿ ಬೇಡಿದ್ದನ್ನು ಕೊಡುವ ಕಾಮಧೇನುವೂ ಇವೆಲ್ಲವುಗಳ ಮೇಲನವು ನನಗಿದೆ, ಇಷ್ಟಾಗಿ ನಾನು ಸಹಸ್ರಕೋಟಿ ವರುಷಗಳ ಆಯುಷ್ಯಂತನು. ಅಂದಮೇಲೆ ಇವೆಲ್ಲಕ್ಕೆ ಸಂಬಂಧಿಸಿದ ವರ ಬೇಡುವ ಆಸೆಯು ನನಗಿಲ್ಲ ಹಾಗು ಆಚೂ ಇರುವದಿಲ್ಲ. ಕೇವಲ ನನ್ನ ತಾಯಿಯ ವ್ರತವನ್ನು ಸಾಫಲ್ಯ ಗೊಳಿಸುವ ಇಚ್ಛೆ ನನಗಿದೆ, ಆಕೆಯ ವ್ರತಕ್ಕಾಗಿ ಈ ಕೈಲಾಸವು ಬೇಕಾಗಿದೆ, ಆದ್ದರಿಂದ ಈ ನಿನ್ನ ಕೈಲಾಸ ವನ್ನು ಹೊತ್ತೊಯ್ಯುವೆನು. ಇದಕ್ಕೇನು ನೀನು ಅಡ್ಡಬರುವಿಯೋ? ಹಾಗಿದ್ದರೆ ಹೇಳು" ಎಂದನು.

ಈಶ್ವರನು ರಾವಣನ ಉರಮುಟ್ಟತನವನ್ನು ತಿಳಿದರೂ ತನ್ನ ಭಕ್ತನೆಂಬ ಅಭಿಮಾನದಿಂದ ಪ್ರೀತನಾಗಿ— "ಲಂಕೇಶಾ! ನಿನ್ನ ತಾಯಿಗೆ ನನ್ನ ಪೂಜೆಯ ಇಚ್ಛೆಯಿದ್ದುದಾದರೆ ನನ್ನ ಆತ್ಮಲಿಂಗವನ್ನೇ ಕೊಡುತ್ತೇನೆ, ಕೈಲಾಸವನ್ನೊಯ್ದು ಕಷ್ಟಪಡುವದೇಕೆ? ಈ ಲಿಂಗದಿಂದ ಅಭೀಷ್ಟಗಳೆಲ್ಲವೂ ಪೂರೈಸುವವು ನನ್ನ ಪ್ರಾಣದಿಂದ ಇದು ಅಧಿಕವು. ಇದನ್ನೊಯ್ದು ತ್ರಿಕಾಲ ಪೂಜೆಮಾಡು, ತ್ರೈವಾರ್ಷಿಕ ಪೂಜೆಯಿಂದ ನೀನು ನನ್ನ ಸ್ವರೂಪವೇ ಆಗುವಿ! ಅಷ್ಟೋತ್ತರ ಜಪ, ರುದ್ರಾಭಿಷೇಕಗಳಿಂದ ಈ ಲಿಂಗಕ್ಕೆ ಅಭಿಷೇಕಮಾಡು ಅಂದರೆ ಎಲ್ಲ ಸಾಧ್ಯವಾಗುವದು. ರಾವಣ! ಸತತ ಮೂರು ವರುಷಗಳವರೆಗೂ ಈ ಲಿಂಗವನ್ನು ಅರ್ಚಿಸು ವವನು ನನ್ನ ಸ್ವರೂಪನೇ ಆಗುವನು ಮೈಮೇಲೆ ಈ ಲಿಂಗವನ್ನು ಧರಿಸುವವನಿಗೆ ಮೃತ್ಯುಭಯವೇ ಇಲ್ಲ. ಇದನ್ನು ಕಂಡಮಾತ್ರದಿಂದ ಮಾನವನ ಪಾಪಗಳೆಲ್ಲ ನಾಶವಾಗಿ ಅವನು ಉದ್ಧೃತಿಹೊಂದುವನು. ದಶಾನನ! ನೀನ್ನು ತೆಗೆದುಕೊಂಡು ಹೋಗುವಾಗ ಇದನ್ನು ಇನ್ನೆಲ್ಲಿಯೂ ಭೂಮಿಯ ಮೇಲೆ ಇಡಕೂಡದು. ಇದನ್ನು

ನಿನ್ನ ಲಂಕಾನಗರದಲ್ಲಿ ಸ್ಥಾಪಿಸಿ ಪ್ರತಿ ವರುಷ ಮೂರು ಸಾರಿ ಮಹಾಪೂಜೆ ಮಾಡು. ಅಂದರೆ ನೀನೇ ಈಶ್ವರ ನಾಗುವಿ" ಎಂದು ಹೇಳಿ ವರ ನೀಡಿ ಕಳಿಸಿದನು.

ಲಂಕೇಶ್ವರನು ಶಿವನು ತನಗೆ ಕೊಟ್ಟ ಆತ್ಮಲಿಂಗವನ್ನು ತಕ್ಕೊಂಡು ತನ್ನ ನಗರಕ್ಕೆ ಹೋಗುವದಕ್ಕಾಗಿ ಹೊರಟನು. ಆಗ ಶಿವಭುವನಕ್ಕೆ ಬಂದಿದ್ದ ನಾರದನು ಆತ್ಮಲಿಂಗ ಕೊಂಡೊಯ್ಯುದನ್ನು ನೋಡಿದನು. ಕೂಡಲೆ ಅವನು ಇಂದ್ರನ ಬಳಿಗೆ ಹೋಗಿ— "ಇಂದ್ರಾ! ಇದೇನು ಸ್ವಸ್ಥಚಿತ್ತದಿಂದ ಕುಳಿತಿ? ಶಿವನು ರಾವಣನಿಗೆ ಆತ್ಮಲಿಂಗ ನೀಡಿ ನಿಮ್ಮೆಲ್ಲರ ಸಿರಿಯನ್ನೇ ಕೆಳೆದನು. ಆ ಲಂಕೇಶ್ವರನು ಅಮರನಾದನು. 'ಈ ಲಿಂಗವನ್ನು ಮೂರು ವರ್ಷ ಪೂಜಿಸಿ ಈಶ್ವರನಾಗು' ಎಂದು ಶಂಕರನು ಅವನಿಗೆ ವರವನ್ನು ಕೊಟ್ಟನು. ವರ ಹೊಂದಿ ರಾವಣನು ಇದೀಗ ಲಂಕೆಗೆ ಹೋದನು. ಇನ್ನು ನಿಮ್ಮ ದೇವತೆಗಳೆಲ್ಲ ಆ ರಾಕ್ಷಸನ ಅಧೀನರಾದಂತಾಯಿತು. ಇಂದ್ರಾ! ತೀವ್ರ ಹೋಗು, ಆ ರಾವಣನ ಸೇವೆ ಕೈಕೊಳ್ಳು. ರಂಭೆ ಮೊದಲಾದ ಅಪ್ಸರೆಯರನ್ನು ಆ ರಾವಣನ ದರ್ಶನಕ್ಕೆ ಕರೆದುಕೊಂಡು ಹೋಗು" ಎಂದು ನಾರದನು ಇಂದ್ರನಿಗೆ ಹೇಳಿದನು. ಈ ಸುದ್ದಿಯನ್ನು ಕೇಳಿ ಇಂದ್ರನು ಅಂಜಿದನು. ಇದರ ಪ್ರತೀಕಾರ ಪ್ರಯತ್ನ ಮಾಡಬೇಕೆಂದು ಅವನು ನಾರದನೊಡನೆ ಬ್ರಹ್ಮನ ಬಳಿಗೆ ಹೋದನು. ಆ ಬ್ರಹ್ಮನನ್ನು ಜೊತೆಗೆ ಕರಕೊಂಡ ಮೂವರೂ ವೈಕುಂಠಭುವನಕ್ಕೆ ಹೋದರು, ವಿಷ್ಣುವನನ್ನು ಕಂಡು ಇದೆಲ್ಲ ವಾರ್ತೆಯನ್ನು ನಿವೇದಿಸಿದರು. ಬ್ರಹ್ಮನು— 'ನಾರಾಯಣಾ! ತೀವ್ರ ಉಪಾಯ ಯೋಜಿಸು, ಮುಂದೆ ನೀನು ರಾಮವತಾರ ತಾಳಿ ರಾಕ್ಷಸರನ್ನು ನಿರ್ಮೂಲ

ಗೊಳಿಸುವ ಧ್ಯೇಯವು ಇದರಿಂದ ಕುಸಿಬೀಳುವದು. ರಾಕ್ಷಸರೇ ಪ್ರಬಲರಾಗುವರು. ರಾವಣನಿಗೆ ಇನ್ನು ನಾಶವೇ ಇಲ್ಲ. ತೀವ್ರವೇ ಎದ್ದೇಳು" ಎಂದು ಹೇಳಲು ನಾರಾಯಣನು ಸಿಟ್ಟಿನಿಂದ— 'ಶಿವನು ಆತ್ಮಲಿಂಗ ಕೊಟ್ಟು ಕೆಲಸ ಕೆಡಿಸಿದನು' ಎಂದು ಉಚ್ಚರಿಸುತ್ತ ಆಗಲೇ ಈಶ್ವರನ ಬಳಿಗೆ ಹೋದನು, 'ಶಂಕರಾ ! ರಾವಣನಿಗೆ ನಿನ್ನ ಆತ್ಮಲಿಂಗ ಕೊಡುವ ಕಾರಣವೇನಿದ್ದಿತು? ಸದ್ಯ ದೇವತೆಗಳೆಲ್ಲ ಅವನ ಕಾರಾಗೃಹದಲ್ಲಿ ಕೊಳೆಯುತ್ತಿರುವರು. ಇನ್ನು ಅವರೆಲ್ಲ ಬಿಡುಗಡೆಯಾಗುವದೆಂತು? ನೀನು ಆ ಕ್ರೂರ ರಾಕ್ಷಸನಿಗೆ ವರ ನೀಡಿದುದರಿಂದ ನಮ್ಮ ದೇವತ್ವವೆಲ್ಲ ಅಳಿದುಂತಾಯಿತು, ಇನ್ನು ಆ ದುಷ್ಟನು ನಮ್ಮ ಸ್ವರ್ಗವನ್ನು ಸೆಳೆಯದೆ ಬಿಡಲಾರನು" ಎಂದು ಶಿವನಿಗೆ ನುಡಿಯಲು ಆತನು— "ನಾರಾಯಣಾ ! ನಾನು ಆ ರಾವಣನ ಭಕ್ತಿಗೆ ಮೋಹಗೊಂಡು ಎಲ್ಲವನ್ನೂ ಮರೆತು ಅವನಿಗೆ ಪ್ರಾಣಲಿಂಗ ಕೊಟ್ಟೆನು" ಎಂದೆನ್ನಲು ವಿಷ್ಣುವು— ಉಮಾಕಾಂತಾ ! ನೀನು ಹೀಗೆ ದುಷ್ಟರಿಗೆಲ್ಲ ವರ ನೀಡುತ್ತ ಹೋದರೆ ನಮಗೆಲ್ಲರಿಗೆ ಕಷ್ಟದಾಯಕವಾಗುವದು, ಅವರಿಂದ ದೇವ–ದ್ವಿಜರಿಗೆ ಪೀಡೆಯಾಗುವದು. ಅದರ ನಿವಾರಣೆಗಾಗಿಯೇ ನಾವು ಅವತಾರ ತಾಳಬೇಕಾಗ್ವ ವದು, ಇದಿರಲಿ ! ಆ ರಾವಣನು ಲಿಂಗ ಒಯ್ದು ಅದೆಷ್ಟು ಕಾಲವಾಯಿತು?' ಎಂದು ಕೇಳಲು ಶಿವನು 'ಐದು ಗಳಿಗೆಯಾಯಿತು' ಎಂದನು.,

ಶಿವನಿಂದ ಹೊರಟ ಉತ್ತರ ಕೇಳಿ ವಿಷ್ಣುವು ಆಗಲೇ ಸೂರ್ಯನಿಗೆ ಅಡ್ಡ ಬರುವದಕ್ಕೆಂದು ತನ್ನ ಸುದರ್ಶನವನ್ನು ದೂಡಿದನು. ಹಾಗು ನಾರದನನ್ನು ಕುರಿತು— "ನಾರದಾ ! ನೀನು ಈಗಲೇ ಹೋಗು,

ಲಂಕೆಗೆ : ಹೋಗುತ್ತಿರುವ ರಾವಣನನ್ನು ನಡು ದಾರಿಯಲ್ಲಿ ಕೂಡು, ಮುಂದೆ ಹೋಗುವದಕ್ಕೆ ಅವನಿಗೆ ಆಷ್ಟೊಂದು ಅವಸರ ಕೊಡದೆ ಅವಕಾಶ ಬೇಕಾಗುವಂತೆ ಅವನೊಡನೆ ಮಾತುಕತೆ ನಡೆಸು'' ಎಂದು ಹೇಳಲು ನಾರದನು ಆಗಲೇ ಭರಭರನೆ ರಾವಣನು ಹೋದ ಹಾದಿಯಿಂದ ಹೋದನು. ವಿಷ್ಣುವು ಇಷ್ಟಕ್ಕೇ ಬಿಡದೆ ಗಣೇಶನನ್ನು ಕರೆದು— 'ಗಜಾನನಾ ! ರಾವಣನು ಸಕಲರಿಂದ ಪೂಜ್ಯನಾದ ನಿನ್ನನ್ನು ಧಿಕ್ಕರಿಸುವ ನಲ್ಲವೇ? ಅದೇ ರಾವಣನು ಇದೀಗ ನಿನ್ನ ತಂದೆಯ ಪ್ರಾಣಲಿಂಗ ತಕ್ಕೊಂಡು ಹೋಗುತ್ತಿರುವನು, ಆದಷ್ಟು ತೀವ್ರ ನೀನು ಅವನನ್ನು ಬೆಂಬಳಿಸಿ ಹೋಗು. ಅವನನ್ನು ಸಾಧಿಸು, ನಿನ್ನ ಬುದ್ಧಿಯನ್ನು ವ್ಯಯ ಮಾಡಿ ಅವನ ಕೈಯೊಳಗಿನ ಪ್ರಾಣಲಿಂಗವು ನಿನ್ನ ಕೈಗೆ ಬರುವಂತೆ ಮಾಡು, ಆದರಂತೆ ಲಿಂಗ ಕೈಗೆ ಬಂದ ಕೂಡಲೆ ಅಲ್ಲಿಯೇ ಭೂಮಿಯ ಮೇಲೆ ಇಟ್ಟುಬಿಡು, ನೀನು ಇಷ್ಟೊಂದು ಕಾರ್ಯ ಮಾಡಿದರೆ ದೇವತೆಗಳಿಗೆ ಉಳಿವು ಇಲ್ಲವೆ ಹೋದರೆ ಅಳಿವು ಎಂದು ಹೇಳಿ ಅವನಿಗೆ ಗ್ರಾಸಕ್ಕಾಗಿ ಮೋದಕ ಮೊದಲಾದವುಗಳನ್ನು ತರಿಸಿಕೊಟ್ಟನು, ಗಣಪನು ಆಗಲೇ ಕುಳ್ಳಬಾಲಕ ವೇಷದಿಂದ ಹೊರಡಲು ವಿಷ್ಣುವು ಬಾಲಕಾ ! (ಆ ರಾಕ್ಷಸನಿಗೆ ನೀನು ಹೆದರಬೇಡ ನಿನ್ನ ಕಾರ್ಯ ಸಫಲಗೊಳ್ಳಬೇಕೆಂದೇ ನಿನಗೆ ಸಹಾಯವಾಗಲೆಂದು ನಾರದನನ್ನು ಮುಂದೆ ಕಳಿಸಿರುವೆ, ಜಾಗ್ರತೆಯಾಗಿ ಹೋಗು, ನನ್ನನ್ನು ಸ್ಮರಿಸಿಕೊಂಡು ಎಲ್ಲ ಕ್ರಿಯೆ ಮಾಡಿ ಕೀರ್ತಿಪಡೆ'' ಎಂದು ಹರಸಿ ನಾರಾಯಣನು ಗಣೇಶನನ್ನು ಕಳಿಸಿದನು.

ನಾರದನು ಲಂಕೆಗೆ ಹೋಗುತ್ತಿರುವ ರಾವಣನಿಗೆದುರಾಗಿ ಬಂದು ಕುಶಲ ಪ್ರಶ್ನೆ ಕೇಳಿದನು.

ಎಲ್ಲಿಗೆ? ಏತಕ್ಕೆ ಹೋಗಿದ್ದಿ? ಎಂದು ಕೇಳಹತ್ತಿದನು. ರಾವಣನು ಶಿವನು ತನಗೆ ಕೊಟ್ಟ ಪ್ರಾಣಲಿಂಗವನ್ನು ತೋರಿಸಿ ಅವನಿಗೆ ಶಿವಕಾರುಣ್ಯವನ್ನು ಉಬ್ಬುಬ್ಬಿ ಹೇಳಿದನು. ಇಬ್ಬರೂ ಕುಳಿತು ಕೆಲ ಹೊತ್ತು ಮಾತಾಡಿದ ನಂತರ ರಾವಣನು ತಾಯಿಯು ಮಾಡುವ ಪೂಜೆಗೆ ಹೊತ್ತಾಗುವದೆಂದು ಲಂಕೆಗೆ ಹೊರಟು ನಿಂತನು, ನಾರದನು ತನ್ನ ಜಾಣತನದಿಂದ ತಡೆದು ಆ ಪ್ರಾಣಲಿಂಗದ ಜಗಗಿರುವ ಪೂರ್ವ ಕಥೆಯನ್ನು ದೀರ್ಘವಾಗಿ ಬೆಳಿಸಿ ಅವನಿಗೆ ಹೇಳಹತ್ತಿದನು, ಕಥೆ ಮುಗಿಲೊಲ್ಲದು, ಮುಗಿಲಲ್ಲಿಯ ಸೂರ್ಯನು ತಾನು ಮರೆಯಾಗುವ ಸಮಯ ಕಾಯಹತ್ತಿರುವನು, ಗಣಪನು ಚಿಕ್ಕ ವಟುವಾಗಿ ಬಂದು ರಾವಣ–ನಾರದರಿರುವಲ್ಲಿಯೇ ಅಡ್ಡಾಡಿ ಸಮಿಧೆ ಗೂಡಿಸುತ್ತಿರುವನು, ಇನ್ನು ಸಂಧ್ಯಾ ಸಮಯ ಪ್ರಾಪ್ತವಾಗುವದೆಂದು ರಾವಣನು ನಾರದನು ಹೇಳುತ್ತಿರುವ ಕಥೆಯನ್ನು ಪೂರ್ಣ ಕೇಳದೆ ಹೊರಟು ನಿಂತನು, ಆದರೂ ನಾರದನು ಅವನನ್ನು ತಡೆಯುವ ಕುರಿತು— "ಪುಲಸ್ತ್ಯ ಪುತ್ರಾ! ಹೊರಡುವಿಯಾ? ಸಾಯಂ ಸಂಧ್ಯಾಸಮಯ ಪ್ರಾಪ್ತವಾಗುವದಕ್ಕೆ ಇನ್ನು ಅಲ್ಪಾವಕಾಶವಿದೆ, ಆ ಸಂಧ್ಯೋಪಾಸನೆಯನ್ನು ಇದೇ ಸಾಗರ ತೀರದಲ್ಲಿ ತೀರಿಸಿಕೊಂಡಿಯಾದರೆ ನಿನ್ನ ನಿತ್ಯ ಕ್ರಿಯಾಚರಣೆ ಸಾಧಿಸಿದಂತಾಗುವದು ಹಾಗೇ ಹೋದರೆ ಲಂಕೆಗೆ ನೀನು ರಾತ್ರಿಯಲ್ಲಿ ಹೋಗಿ ತಲುಪುವಿ! ಹೀಗಾಗಿ ನಿನ್ನ ಸಂಧ್ಯೋಪಾಸನೆ ಲುಪ್ತವಾಗುವದು. ನಾನಂತೂ ಸಾಗರ ತೀರಕ್ಕೆ ಹೋಗುವೆನು, ನೀನೂ ಬರುತ್ತಿದ್ದರೆ ನಡೆ, ನನ್ನ ಆಗ್ರಹವಿಲ್ಲ. ಸಂಧ್ಯೋಪಾಸನೆ ತೀರಿಸಿಕೊಂಡು ಹೋಗುವದೇ ಒಳಿತು" ಇತ್ಯಾದಿ ಹಲವು ಮಾತುಗಳಿಂದ ನಾರದನು ರಾವಣನಿಗೆ ಅವಕಾಶವನ್ನೊಡ್ಡಿ ತಾನು ಸಂಧ್ಯೆಗಾಗಿ ಹೋದನು.

ನಾರದನು ಹೊರಟಮೇಲೆ ಮಾರ್ಗಕ್ರಮಿಸಲು ಸಿದ್ಧನಾಗಿದ್ದ ರಾವಣನು ತನ್ನ ನಿತ್ಯ ಕ್ರಿಯಾಚರಣೆಯ ಬಗೆಗೆ ವಿಚಾರ ನಡೆಯಿಸಿದನು. 'ನಾರದನು ಹೇಳಿದಂತೆ ನಾನು ಇಲ್ಲಿಯೇ ಸಂಧ್ಯೋಪಾಸನೆ ಮುಗಿಸಿಕೊಂಡು ಹೋಗುವದು ಯುಕ್ತವು." ಎಂದು ನಿಶ್ಚಯಿಸಿದನು. ತನ್ನ ಕೈಯಲ್ಲಿಯ ಶಿವಲಿಂಗವನ್ನು ಎಲ್ಲಿಡಲಿ ? ನೆಲಕ್ಕಿಡಬಾರದೆಂದು ಆ ಶಿವನು ಹೇಳಿರುವನು ಇನ್ನೇನು ಮಾಡಲಿ ? ಎಂದು ನುಡಿಯುತ್ತ ಅತ್ತಿತ್ತ ನೋಡುವಷ್ಟರಲ್ಲಿ ಸಮೀಪದಲ್ಲಿಯೇ ಸಮಿಧೆಗಳನ್ನಾಯುತ್ತಿದ್ದ ಬಾಲಕನನ್ನು ಕಂಡನು ಅವನನ್ನು ತನ್ನೆಡೆಗೆ ಕರೆದನು. ಈ ಹುಡುಗನು ತನಗೆ ಅವಿಶ್ವಾಸ ಮಾಡಲಿಕ್ಕಿಲ್ಲವೆಂದು ಬಗೆದು ಅವನನ್ನು ಕುರಿತು ಕೆಲ ಪ್ರಶ್ನೆಗಳಿಂದ ಅವನ ಪರಿಚಯ ಮಾಡಿಕೊಂಡನು ಕಡೆಗೆ ಅವನು—'ಮಗು ! ನಾನು ಸಂಧ್ಯೆ ಮುಗಿಸಿ ಬರುವವರೆಗೆ ಈ ಲಿಂಗವು ನಿನ್ನ ಕೈಯಲ್ಲಿರಲಿ, ನೆಲಕ್ಕೆ ಮಾತ್ರ ಇಡಬೇಡ' ಎಂದು ಹೇಳಿದನು ಆ ಹುಡುಗನು ನಿರಾಕರಿಸಿದನು. ರಾವಣನು ಮತ್ತೆ ಅವನನ್ನು ಉತ್ತಮನುಡಿಗಳಿಂದ ಲಿಂಗಹಿಡಿದುಕೊಂಡು ನಿಲ್ಲುವದಕ್ಕೆ ಪ್ರೇರೇಪಿಸಿದನು. ಇಂತು ಗಣೇಶ-ರಾವಣರಲ್ಲಿ ನಡೆದ ಚಿಕ್ಕಾಜೀವ ಕೌತುಕ ನೋಡಲು ದೇವತೆಗಳು ಉತ್ಸುಕರಾಗಿ ಅಂತರಿಕ್ಷದಲ್ಲಿ ನಿಂತಿದ್ದರು. ಕಡೆಗೆ ರಾವಣನು—'ವಟುವೇ ! ತೀವ್ರ ಬರುವೆ ಹಿಡಿದುಕೋ !' ಎಂದು ಒತ್ತಾಯದಿಂದ ಆ ಲಿಂಗವನ್ನು ಗಣಪನ ಕೈಗೆ ಕೊಟ್ಟನು. ಅದನ್ನು ನೋಡಿ ದೇವತೆಗಳೆಲ್ಲ ಹೃದಯದಲ್ಲಿ ಹರ್ಷವನ್ನು ತುಂಬಿಕೊಂಡರು!

ಗಣಪನು ತನ್ನ ಕೈಗೆ ಲಿಂಗ ಬಿದ್ದಕೂಡಲೇ 'ನಾನು ತೀವ್ರ ಮನೆಗೆ ಹೋಗಬೇಕಾಗಿದೆ, ನೀನೂ ತೀವ್ರ ಬಂದು ನಿನ್ನ ಲಿಂಗ ತೆಗೆದುಕೋ, ತಡವಾದರೆ ನಾನು ಕೇಳುವವನಲ್ಲ. ಒಮ್ಮೆ ನಿನ್ನನ್ನು ಕರೆಯುವೆ

ಬಾರದಿದ್ದರೆ ಇನ್ನೊಮ್ಮೆ ಕರೆಯುವೆ ಅದಕ್ಕೂ ಬಾರದಿದ್ದರೆ ಮತ್ತೊಮ್ಮೆ ಒಂದು ಬಾರಿ ಕರೆಯುವೆ, ಅಷ್ಟರಲ್ಲಿ ನೀನು ಬಂದರೆ ಒಳಿತು, ಇಲ್ಲವಾದರೆ ಈ ನಿನ್ನ ಲಿಂಗವು ಇಲ್ಲಿಯೇ ಭೂಮಿಯ ಮೇಲೆ ಬಿತ್ತು ಎಂದು ತಿಳಿದುಕೋ ಎಂದನು, ರಾವಣನು 'ಹಾಗೇ ಆಗಲಿ ಲಗೂನೆ ಬರುವೆ' ಎಂದು ಹೇಳಿ ಸಂಧ್ಯೆಗಾಗಿ ಹೋದನು, ತುಸು ಹೊತ್ತಿನ ಮೇಲೆ ವಟುವು ಆತನನ್ನು ಕರೆದನು ಅವನು ಓಕೊಡಲಿಲ್ಲ. ಮತ್ತೆ ಕೆಲಹೊತ್ತಿನ ಮೇಲೆ ಎರಡನೇ ಬಾರಿ ಕರೆದನು. ಅದಕ್ಕೆ ರಾವಣನು ಕೆಮ್ಮಿ-ಕೇಕರಿಸಿ ತಾನು ಬರುವ ಸೂಚನೆ ಕೊಟ್ಟನು, ಮೂರನೆಯ ಬಾರಿ ಕರೆದನು, ಸಂಧ್ಯೋಪಾಸನೆಯಲ್ಲಿ ಮಗ್ನನಾಗಿದ್ದ ಅವನು ತೀವ್ರ ಏಳಲಿಕ್ಕೆ ಬಾರದಂತಾಯಿತು, ಸಂಧ್ಯಾ ಕ್ರಿಯಾ ಮುಗಿಯಿತು 'ಬಂದೆ ಬಂದೆ ತಡೆ ಹುಡುಗಾ' ಎಂದಾತನು ಒದರಿ ಹೇಳಿದನು, 'ಬಂದರೆ ಬಹಳ ಜಶೋ ಆಯಿತು, ಇನ್ನು ನಾನು ತಡೆಯಲಾರೆ, ನಿನ್ನ ಈ ಲಿಂಗವನ್ನು ಇಲ್ಲಿಯೇ ಇಡುತ್ತೇನೆ ಇದೇನೂ ನನಗೆ ಬೇಕಾಗಿಲ್ಲ ನೀನೇ ತಕ್ಕೋ ತಕ್ಕೋ' ಎಂದು ಗಣಪತನು ಎಲ್ಲ ದೇವತೆಗಳ ಸಾಕ್ಷಿಯೊಂದಿಗೆ ವಿಷ್ಣುವನ್ನು ಸ್ಮರಿಸಿ ಅದನ್ನು ಅಲ್ಲಿಯೇ ಭೂಮಿಯ ಮೇಲಿಟ್ಟನು, ಅದನ್ನು ನೋಡಿ ಆಕಾಶದಲ್ಲಿ ನಿಂತ ದೇವತೆಗಳು ತಮ್ಮ ಹರ್ಷ ತುಂಬಿದ ಹೃದಯದಿಂದ ಗಣಪನನ್ನು ಹೊಗಳಿ ಹೂಮಳೆ ಸುರಿಸಿದರು.

ವಟುವು ಲಿಂಗವನ್ನು ನೆಲಕ್ಕಿಟ್ಟು ಹಿಂದೆ ಸರಿಯುವಷ್ಟರಲ್ಲಿಯೇ ರಾವಣನು ಅಲ್ಲಿಗೆ ಬಂದನು ಲಿಂಗವನ್ನು ಕೈಗೆತ್ತಿಕೊಳ್ಳಲು ಯತ್ನಿಸಿದನು, ಆ ಲಿಂಗವು ಅಚಲವಾಗಿಬಿಟ್ಟಿತ್ತು ರಾವಣನ ಹೃದಯವು ಚಲವಿಚಲವಾಯಿತು, ಅವನಲ್ಲಿ ಆ ವಟುವಿನ ಬಗೆಗೆ ಬಲು ಸಿಟ್ಟು ಸಂಚರಿಸಿತು ಕೂಡಲೇ ಅವನು ಅಲ್ಲಿಯೇ ನಿಂತಿದ್ದ ಆ ಹುಡುಗನನ್ನು ತಿರಿತಿರುವಾಡಿ ತನ್ನ ಇಪ್ಪತ್ತು ಕೈಗಳಿಂದ ಹೊಡೆದು ಬೇಸತ್ತು ಮತ್ತೆ ಒಂದು

ಲಿಂಗಕ್ಕೆ ಕೈ ಹಾಕಿದನು, ಹುಡುಗನು ಹಸನ್ಮುಖದಿಂದ ಅಳುತ್ತ ರಾವಣನನ್ನು ನೋಡಿ—'ನಿಲ್ಲು ನನ್ನನ್ನು ಹೊಡೆದ ನಿನ್ನನ್ನು ಹೊಡೆಯುವದಕ್ಕಾಗಿ ನಮ್ಮ ಅಪ್ಪನನ್ನು ಕರೆದುಕೊಂಡು ಬರವೆನು' ಎಂದು ಅಲ್ಲಿಂದ ಹಿಂದಿರುಗಿದನು.

ರಾವಣನು ಆ ಹುಡುಗನನ್ನು ಬೈಯುತ್ತ ಆ ಲಿಂಗವನ್ನು ಕಿತ್ತುವದಕ್ಕೆ ಮತ್ತೆ ಪ್ರಯತ್ನಿಸಿದನು, ತನ್ನಲ್ಲಿಯ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಬಲದಿಂದ ಆ ಲಿಂಗವನ್ನು ಒಡಮುರಿದು ಕಿತ್ತಲು ನೋಡಿದನು ಸಾಧ್ಯವಾಗಲಿಲ್ಲ, ಅವನು ಹಿಸುಕಿ ಹಿಡಿದುದರಿಂದ ಕೈಬೆರಳುಗಳು ಮಾತ್ರ ಆ ಲಿಂಗದ ಮೇಲೆ ಮೂಡಿದವು.

ಲಿಂಗವನ್ನು ಉತ್ಪಾಟಿಸುವದಕ್ಕೆ ರಾವಣನನು ತನ್ನ ಮಹಾ ಬಲವನು ವ್ಯಯಗೊಳಿಸಿ ಶ್ರಮ ನಿರರ್ಥಕತೆ ಹೊಂದಿದನು. ಈ ಕಾರಣದಿಂದಲೇ ಆ ಲಿಂಗಕ್ಕೆ "ಮಹಾಬಲಲಿಂಗ" ವೆಂದು ಹೆಸರಾಯಿತು ಲಿಂಗ ವನ್ನು ತನ್ನ ಕೈಹಸ್ತದಿಂದ ಹಿಸುಕಿ ಹಿಡಿದು ಮೇಲಕ್ಕೆತ್ತಲು ಆ ರಾವಣನು ಹೋರಾಡಿದ್ದರಿಂದ ಲಿಂಗವು ಆಕಳ ಕಿವಿಯ ಸ್ವರೂಪದಂತಾಯಿತು, ಆದ್ದರಿಂದಲೇ "ಗೋ–ಕರ್ಣ" ಎಂಬ ಯಥಾರ್ಥ ಅಭಿಧಾನವು ರೂಢವಾಯಿತು.

ರಾವಣನು ಕ್ರಿಯಾ ನಿಷ್ಫಲತೆಯಿಂದ ಕುದಿಯುತ್ತ ಪುನಃ ಪ್ರಯತ್ನವೆಂದು ತಪಶ್ಚರ್ಯೆಗಾಗಿ ಹೊರಟು ಹೋದನು.

ನಾಮಧಾರಕಾ ! ಈ ಬಗೆಯಿಂದ ಗೋಕರ್ಣಕ್ಷೇತ್ರವು ಪ್ರಖ್ಯಾತವಾಯಿತು, ಸಮಸ್ತ ದೇವತೆಗಳು ಅಲ್ಲಿಗೆ ಬಂದರು. ಆ ಕ್ಷೇತ್ರ ಮಹಿಮೆಯು ಇನ್ನೂ ಅಪಾರವಾಗಿರುವದು ಎಂದು ಸಿದ್ಧಮುನಿಯು ಹೇಳಿದನು.

# ೭ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ- ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನಿಗೆ ಪುರಾಣೋಕ್ತ ಗೋಕರ್ಣತೀರ್ಥ'ಮಹಿಮೆಯನ್ನು ಹೇಳಹತ್ತಿದನು. ಎಂತೆಂದರೆ—

ಪೂರ್ವಯುಗದಲ್ಲಿ ಇಕ್ಷ್ವಾಕುವಂಶದಲ್ಲಿ 'ಮಿತ್ರಸಹ' ಎಂಬ ರಾಜನಿದ್ದನು. ಮದಯಂತಿ ಎಂಬವಳು ಆ ರಾಜನ ಧರ್ಮಪತ್ನಿಯು. ರಾಜನು ಸಕಲ ಶಾಸ್ತ್ರನಿಪುಣನೂ, ವಿವೇಕಿಯೂ, ನಿತ್ಯೋದ್ಯೋಗಿಯೂ ಆಗಿದ್ದನು. ಶೂರನಾದ ಆತನು ಒಂದು ದಿನ ವಿನೋದಕ್ಕೆಂದು ಬೇಟೆಗಾಗಿ ಅರಣ್ಯಕ್ಕೆ ಹೋದನು. ನಿರ್ಮಾನುಷವಾದ ಪ್ರದೇಶದಲ್ಲಿ ಅವನು ಬೇಟೆಯಾಡುತ್ತಿರುವಾಗ ಇಬ್ಬರು ಭೀಕರ ರಾಕ್ಷಸರು ಅವನನ್ನು ಎದುರಿಸಿದರು. ಪ್ರತಾಪಿಯಾದ ರಾಜನು ಆ ರಾಕ್ಷಸರ ಮೇಲೆ ಬಾಣಗಳ ಸುರಿಮಳೆ ಸುರಿಸಿದನು. ಅದರಿಂದಾಗಿ ಆ ರಾಕ್ಷಸರಲ್ಲಿಯ ಒಬ್ಬನು ಗತಜೀವನಾಗಿ ನೆಲಕ್ಕುರುಳಿದನು. ಇನ್ನೊಬ್ಬನು ಜೀವಗಳ್ಳನಾಗಿ ಓಡಿ ಹೋದನು. ರಾಜನು ಬೇಟೆಯಾಡಿ ಹಿಂದಿರುಗಿ ರಾಜಧಾನಿಗೆ ಬಂದನು.

ಓಡಿಹೋಗಿದ್ದ ರಾಕ್ಷಸನು ತನ್ನ ಜೊತೆಯ ರಾಕ್ಷಸನ ಮರಣದ ಸೇಡು ತೀರಿಸಿಕೊಳ್ಳುವದಕ್ಕೆ ಮಾನವರೂಪದಿಂದ ರಾಜನ ಅರಮನೆಗೆ ಬಂದನು. ಆ ಮಾಯಾವಿಯು ತನ್ನ ಮಧುರ ಭಾಷಣಗಳಿಂದ ರಾಜನ ಮೆಚ್ಚುಗೆಗೆ ಪಾತ್ರನಾದನು. ಹಾಗು ಅತಿ ನಮ್ರತೆ ತೋರಿಸಿ ರಾಜನ ಸೇವಕತ್ವವನ್ನು ಸ್ವೀಕರಿಸಿದನು.

ಮುಂದೊಂದು ದಿನ ರಾಜನ ತಂದೆಯ ಶ್ರಾದ್ಧವು ಬಂದಿತು. ಶ್ರಾದ್ಧಕ್ಕಾಗಿ ವಸಿಷ್ಠಾದಿ ಋಷಿ ಬ್ರಾಹ್ಮಣರು ಆಮಂತ್ರಿಸಲ್ಪಟ್ಟರು. ಪಾಕಶಾಲೆಯಲ್ಲಿ ಅತ್ಯುತ್ತಮ ಅಡಿಗೆಯ ಸಿದ್ಧತೆ ನಡೆಯಿತು. ರಾಜನು ಅಡಿಗೆಯ ವ್ಯವಸ್ಥೆಗಾಗಿ ತನ್ನ ಪ್ರೀತಿಯ ಸೇವಕ ಮಾಯಾವಿಯನ್ನು ನೇಮಿಸಿದ್ದನು.

ತಾನು ಸೇಡು ತೀರಿಸಿಕೊಳ್ಳ ಬಯಸಿ ಕಾಯುತ್ತಿದ್ದ ಸಮಯವು ಈದಿನ ಪ್ರಾಪ್ತವಾಯಿತೆಂದು ಆ ಮಾಯಾವಿಯು ಸಂತೋಷಪಟ್ಟನು. ಅವನು ಮನಸಾರ ಬಯಸಿದಂತೆ ನರಮಾಂಸದ ಪಾಕವನ್ನು ಸಿದ್ಧಪಡಿಸಿದನು.

ಶ್ರಾದ್ಧದ ಕೆಲಸ ತೀರಿ ಬ್ರಾಹ್ಮಣರಿಗೆ ಭೋಜನ ಪಾತ್ರವನ್ನು ಬಡಿಸಿ ಇಡಲಾಯಿತು. ಮಾಯಾವಿಯು ಮಾಡಿದ ನರಮಾಂಸದ ಪಾಕವು ಆ ಪಾತ್ರಗಳಲ್ಲಿ ಹಾಕಲಾಗಿತ್ತು. ವಸಿಷ್ಠಾದಿ ಬ್ರಾಹ್ಮಣರು ಪಂಕ್ತಿಯಾಗಿ ಕುಳಿತರು. ಭೋಜನಾರಂಭದ ಮೊದಲು ವಸಿಷ್ಠರು ಆಪೋಶನವನ್ನು ಕೈಯಲ್ಲಿ ಹಾಕಿಕೊಂಡು ನೋಡುತ್ತಾರೆ. ಪಾತ್ರಗಳಲ್ಲಿ ನರಮಾಂಸದ ಪಾಕ! ಕಂಡರು, ಕೋಪಗೊಂಡರು. ಅವರು ರಾಜನನ್ನು ಕಿಡಿಗಣ್ಣಿನಿಂದ ಕಂಡು:— "ದುರಾತ್ಮಾ! ರಾಜಾ ನೀನು ನಮಗೆ ನರಮಾಂಸ ಭಕ್ಷಣವನ್ನು ನೀಡಿದಿ. ಈ ನಿನ್ನ ಪಾಪಕೃತ್ಯದ ಫಲವಾಗಿ 'ನೀನು ರಾಕ್ಷಸನಾಗು' ಎಂದು ಉಚ್ಚರಿಸುತ್ತ ತಮ್ಮ ಕೈಯಲ್ಲಿ ತಕ್ಕೊಂಡ ಆಪೋಶನ ಜಲವನ್ನು ಶಾಪಜಲವನ್ನಾಗಿ ನೆಲಕ್ಕೆ ಚೆಲ್ಲಿದರು. ಹಾಗು ತಮ್ಮ ಆಸನಗಳಿಂದ ಮೇಲೆದ್ದರು.

ತಾನು ಏನೊಂದನ್ನರಿಯದ ರಾಜನು ವಸಿಷ್ಠರು ಕೊಟ್ಟ ಶಾಪದಿಂದ ತಳಮಳಿಸಿದನು. ಅವನು ವಸಿಷ್ಠರನ್ನು ಕುರಿತು— "ನನ್ನಲ್ಲೇನೂ ಅಪರಾಧವಿಲ್ಲದೆ ಶಾಪ ನೀಡಿದಿರಿ. ಪ್ರತಿಯಾಗಿ ನಾನೂ ನಿಮಗೆ ಶಾಪಕೊಡುವೆನು ಸ್ವೀಕರಿಸಿರಿ' ಎಂದು ಕೈಯಲ್ಲಿ ಜಲವನ್ನು ತಕ್ಕೊಂಡನು.

ಭೋಜನಶಾಲೆಯಲ್ಲಿ ನಡೆದ ರಾಜ–ವಿಪ್ರರ ಕೋಲಾಹಲ ಶಬ್ದವು ಒಳಗಿರುವ ರಾಜಪತ್ನಿ ಮದಯಂತಿಯ ಕಿವಿಗೆ ತಾಗಿದವು. ಕೂಡಲೆ ಅವಳು ಭೋಜನಶಾಲೆಗೆ ಬಂದು ನೋಡುತ್ತಾಳೆ! ಋಷಿಯು ಕ್ರುದ್ಧನಾಗಿರುವನು. ರಾಜನು ಆ ಋಷಿಗೆ ಶಾಪಕೊಡಲು ಸಿದ್ಧನಾಗಿ ನಿಂತಿರುವನು. ಕೂಡಲೇ ಆಕೆ ಪತಿಯ ಕೈಹಿಡಿದು ತಡೆದು— "ಪತಿರಾಜ! ಗುರುವಿಗೆ ಶಾಪಕೊಡುವದು ಮಹಾದೋಷವು! ಅವರನ್ನು ವಂದಿಸಿ ಪ್ರಾರ್ಥಿಸಿದರೆ ಭವಸಾಗರ ದಾಟಿಸುವರು" ಎಂದು ಬುದ್ಧಿ ಹೇಳಿದಳು. ತನ್ನ ಪತ್ನಿಯ ಬೋಧೆಯು ಅವನಿಗೆ ಸಮುಕ್ತಿಕವೆನ್ನಿಸಿತು. ತಾನು ಶಾಪಕೊಡಲು ಉದ್ಯುಕ್ತನಾದುದನ್ನು ಪರಾವರ್ತಿಸಿ ತನ್ನ ಕೈಯಲ್ಲಿಯ ಶಾಪ ಜಲವನ್ನು ತನ್ನ ಕಾಲಮೇಲೆಯೇ ಸುರುವಿಕೊಂಡನು. ಕೂಡಲೆ ಅವನ ಕಾಲು ಕಪ್ಪುವರ್ಣದ್ದಾಯಿತು. ಹಾಗು ಆಗಲೇ ಅವನು 'ಕಲ್ಮಾಷಪಾದ' ಎಂಬ ಹೆಸರಿನ ರಾಕ್ಷಸನಾಗಿ ನಿಂತನು.

ರಾಜಪತ್ನಿ ಮದಯಂತಿಯು ವಸಿಷ್ಠರನ್ನು ವಂದಿಸಿ ತನ್ನ ಪತಿಯನ್ನು ಶಾಪದಿಂದ ಉದ್ಧರಿಸ ಬೇಕೆಂದು ಬೇಡಿಕೊಂಡಳು. ಋಷಿಯು ತನ್ನ ಜ್ಞಾನದೃಷ್ಟಿಯಿಂದ ನೋಡಿ 'ಇದರಲ್ಲಿ ರಾಜನ ಅಪರಾಧ

ಏನೂ ಇಲ್ಲ. ನಾನು ಕೋಪಿಸಿದ್ದು ತಪ್ಪಾಯಿತು' ಎಂದು ಹಳಹಳಿಸಿದರು. ಅವರು ಮದಯಂತಿಯನ್ನು ಕುರಿತು— "ರಾಜಪತ್ನಿ! ನಾನು ಕೊಟ್ಟ ಶಾಪವನ್ನು ಹಿಂತೆಗೆದುಕೊಳ್ಳಲು ಬರಲಾರದು. ಆದರೂ ಕೇವಲ ಹನ್ನೆರಡು ವರುಷಗಳ ವರೆಗೆ ನಿನ್ನ ಪತಿಯು ಶಾಪ ಅನುಭವಿಸಿ ಪುನಃ ತನ್ನ ಮಾನವನಾಗಿ ಬರಲಿ' ಎಂದು ಉಶ್ಶಾಪ ನೀಡಿದರು.

ವಸಿಷ್ಠರು ಉಶ್ಶಾಪ ನೀಡಿ ತಮ್ಮಾಶ್ರಮಕ್ಕೆ ಹೋದರು. ರಾಜನು 'ಕಲ್ಮಾಷಪಾದ' ಎಂಬ ಹೆಸರಿನ ರಾಕ್ಷಸನಾಗಿ ಆಗಲೇ ಹೊರಬಿದ್ದು ಹೋಗಿ ಒಂದು ಘೋರಾರಣ್ಯ ಸೇರಿದನು. ಆ ಕಟ್ಟಡವಿಯಲ್ಲಿ ಕಲ್ಮಾಷಪಾದ ರಾಕ್ಷಸನು ಹಿಂಸಾವೃತ್ತಿಯಿಂದಲೇ ಉಪಜೀವಿಸುತ್ತ ಸಂಚರಿಸಹತ್ತಿದನು. ಹೀಗೆ ಆ ರಾಕ್ಷಸನು ಸಂಚರಿಸುತ್ತಿರುವಾಗ ಆ ಅಡವಿಯಲ್ಲಿಯ ಕಾಲುದಾರಿಯಿಂದ ಒಬ್ಬ ಬ್ರಾಹ್ಮಣನು ಹೆಂಡತಿಸಹಿತ ಹಾದು ಹೋಗುತ್ತಿದ್ದನು. ಹಸಿದು ಕಂಗೆಟ್ಟ ಕಲ್ಮಾಷಪಾದ ರಾಕ್ಷಸನು ಅವರನ್ನು ಕಂಡನು, ಓಡುತ್ತ ಹೋಗಿ ಆ ದಂಪತಿಗಳನ್ನು ಅಡ್ಡಗಟ್ಟಿ 'ಆ' ಎಂದು ಬಾಯ್ತೆರೆದು ನಿಂತನು. ಬ್ರಾಹ್ಮಣನೂ ಅವನ ಪತ್ನಿಯೂ ಅಂಜಿ ಅಳಹತ್ತಿದರು, ಆ ರಾಕ್ಷಸನಲ್ಲಿ ದಯಾಯಾಚನೆ ಮಾಡಹತ್ತಿದರು. ಕರುಣವಿದ್ದರೆ ಅವನು ರಾಕ್ಷಸನೇ? ದಂಪತಿಗಳು ಎಷ್ಟೊಂದು ಪರಿ ಬೇಡಿಕೊಂಡರೂ ನಿಷ್ಫಲವಾಯಿತು. ಕಡೆಗೆ ರಾಕ್ಷಸನು ಆ ಬ್ರಾಹ್ಮಣನನ್ನು ಹಿಡಿದು ತನ್ನ ಕಕ್ಷೆಯಲ್ಲಿ ತಕ್ಕೊಂಡನು. ಬ್ರಾಹ್ಮಣ ಪತ್ನಿಯು— 'ನನಗೆ ನನ್ನ ಪತಿಯ ಜೀವವನ್ನು ದಾನವಾಗಿ ಕೊಡು, ಇಚ್ಛೆಯಿದ್ದರೆ ನನ್ನ ಗಂಡನನ್ನು ಬಿಟ್ಟು ನನ್ನನ್ನು ಭಕ್ಷಿಸು. ನನ್ನ ಪತಿಯನ್ನು ಕೊಲ್ಲದೆ ಬಿಡು.

ನಾನು ನಿನ್ನನ್ನು ತಂದೆಯೆಂದು ಬಗೆಯುವೆನು, ನಿನ್ನ ಉಪಕಾರ ಸ್ಮರಣೆಯೆಂದು . ಮಕ್ಕಳಿಲ್ಲದ ನಾನು ಸಂತತಿಯನ್ನು ಕಂಡ ಬಳಿಕ ನನ್ನ ಮಕ್ಕಳನ್ನು ನಿನ್ನ ಹೆಸರಿನಿಂದ ಸಂಬೋಧಿಸುವೆನು" ಇತ್ಯಾದಿಯಾಗಿ ಆಕೆ ಪರಿಪರಿಯಿಂದ ಬೇಡಿಕೊಂಡಳು. ಆಕೆಯ ಆರ್ತವನ್ನು ಲೆಕ್ಕಿಸದೆ ಆ ದುರಾತ್ಮ ರಾಕ್ಷಸನು ಆಕೆಯ ಸಮ್ಮುಖದಲ್ಲಿಯೇ ಆಕೆಯ ಗಂಡನನ್ನು ಕಟಕಟನೆ ತಿಂದು ಅಸ್ಥಿಗಳನ್ನೆಲ್ಲ ಉಗುಳಿ ನಿಂತನು. ಬ್ರಾಹ್ಮಣ ಪತ್ನಿಯು ಸಂತಪ್ತಳಾದಳು, ಅತ್ತಳು, ಕರೆದಳು. ಎದೆ ಎದೆ ಬಡಿದುಕೊಂಡಳು, ತಲೆ ಒಡೆದುಕೊಂಡಳು. ಆದರೆ ಆ ಘೋರಾರಣ್ಯದಲ್ಲಿ ಆಕೆಯ ರೋದನ ಕೇಳುವವರಾರು? ಕಡೆಗೆ ಆಕೆ ಸಂತಾಪದಿಂದ— "ಎಲೋ ದುರಾತ್ಮಾ! ರಾಕ್ಷಸಾಧಮಾ! ನಿಷ್ಕರುಣೆಯಿಂದ ನಿರಪರಾಧಿ ನನ್ನ ಪತಿಯ ಪ್ರಾಣವನ್ನು ಹೀರಿದಿ, ನೀನು ರಾಜನಿದ್ದು ಸದ್ಯ ರಾಕ್ಷಸನಾಗಿರುವಿ! ಈ ರಾಕ್ಷಸ ಜನ್ಮವನ್ನು ಹನ್ನೆರಡು ವರುಷ ನೂಕಿ ನೀನು ರಾಜನಾಗಿ ಮತ್ತೆ ಮೆರೆಯುವಿಯಲ್ಲವೇ? ನನ್ನನ್ನು ಸಂಪತ್ತಗೊಳಿಸಿದ ನಿನಗೆ ಈ ಹನ್ನೆರಡು ವರ್ಷದ ಅವಧಿ ತೀರಿದ ಮೇಲೆ ನೀನು ರಾಜನಾದ ಕೂಡಲೆ ಅನುಭವಿಸುವದಕ್ಕೆ ನಾನು ಶಾಪ ಕೊಡುವೆ. ನಾನು ಕೊಡುವ ಶಾಪವೆಂದರೆ— 'ನೀನು ನಿನ್ನ ಹೆಂಡತಿಯನ್ನು ಸ್ಪರ್ಶಮಾಡಿದ ಕ್ಷಣದಲ್ಲಿಯೇ ನಿನಗೆ ಮರಣ ಒದಗಲಿ' ಇದೇ ಆಗಿರುವದು" ಎಂದು ಶಾಪನೀಡಿದಳು. ಆಕೆಯ ಶಾಪ ವಾಕ್ಯ ಕೇಳಿ ರಾಕ್ಷಸನು ವಿಕಟಹಾಸ್ಯದೊಂದಿಗೆ ನಗುತ್ತ ಗುಪ್ತಸೇರಿ ಹೋದನು.

ಆ ಮೇಲೆ ಬ್ರಾಹ್ಮಣ ಪತ್ನಿಯು ಅಳುತ್ತ ಕರೆಯುತ್ತ ಸುತ್ತಾಡಿದು ಬಿದ್ದಿದ್ದ ಪತಿಯ ಅಸ್ಥಿಗಳನ್ನೆಲ್ಲ

ಕೂಡಹಾಕಿದಳು. ಅವುಗಳನ್ನು ಚಿತೆಗಾಗಿ ಆಯ್ದು ತಂದ ಕಟ್ಟಿಗೆಯ ಮೇಲೆ ಹಾಕಿ ಅಗ್ನಿಯನ್ನು ಸ್ಪರ್ಶಿಸಿದಳು. ಅಗ್ನಿಯು ಪ್ರಜ್ವಲಿತವಾದ ನಂತರ ಅವಳು ಪತಿಯನ್ನು ಸ್ಮರಿಸುತ್ತ ಚಿತೆಯಲ್ಲಿ ದುಮ್ಮಿಕ್ಕಿ ಪತಿಯೊಡನೆ ಸಹಗಮನಿಸಿದಳು.

ರಾಜನಿಗೆ ವಸಿಷ್ಠರು ಕೊಟ್ಟ ಹನ್ನೆರಡು ವರುಷದ ಶಾಪದ ಅವಧಿ ಮುಗಿಯಿತು. ಕಲ್ಮಾಷಪಾದನು ರಾಕ್ಷಸ ಸ್ವರೂಪ ತೊರೆದು 'ಮಿತ್ರಸಹರಾಜ' ನಾಗಿ ನಗರಕ್ಕೆ ಬಂದನು. ಅರಮನೆ ಪ್ರವೇಶಿಸಿದನು, ಆಗ ಅವನಿಗೆ 'ತಾನು ರಾಕ್ಷಸನಾಗಿದ್ದಾಗ ವಿಪ್ರಪತ್ನಿಯು ತನಗೆ ಕೊಟ್ಟ ಶಾಪ'ವು ಸ್ಮರಣೆಗೆ ಬಂದಿತು. ಪತ್ನಿ ಮದಯಂತಿಗೆ ಅದನ್ನು ತಿಳಿಸಿ 'ನೀನು ನನ್ನನ್ನು ಸ್ಪರ್ಶಿಸಬೇಡ' ಎಂದು ಹೇಳಿದನು. ಮದಯಂತಿಯು ಒಳ್ಳೆ ಸಂತಾಪಕ್ಕೊಳಗಾದಳು, 'ಇನ್ನೂ ಸಂತತಿಯಿಲ್ಲ ಮುಂದೇನು ಗತಿ' ಎಂದು ಅಳಹತ್ತಿದಳು, ಪ್ರಾಣತ್ಯಾಗಕ್ಕೆ ಸಿದ್ಧಳಾದಳು. ಆಕೆಯ ಶೋಕ ಸಂತಪ್ತತೆಗೆ ರಾಜನು ಬಹಳೇ ಕಳವಳಿಸಹತ್ತಿದನು, ತನಗಾದ ಶಾಪ ಕಳೆದುಕೊಳ್ಳುವದಕ್ಕೆ ಮಂತ್ರಿ ಪುರೋಹಿತರನ್ನೂ ಬಲ್ಲ ಜ್ಯೋತಿಷಿಗಳನ್ನೂ ವಿಚಾರಿಸಿದನು. ಎಲ್ಲರೂ—'ತೀರ್ಥಾಟನ' ದಿಂದ ಶಾಪ ನಿವೃತ್ತಿಯಾಗುವದೆಂದು ಒಮ್ಮತದಿಂದ ಹೇಳಿದರು.

ರಾಜನು ಮರುದಿನವೇ ತೀರ್ಥಾಟನಕ್ಕೆ ಹೊರಟನು, ಅವನು ಹೋದಹೋದಲ್ಲೆಲ್ಲ ಅಘೋರ ರೂಪಿನ ವ್ಯಕ್ತಿಯು ತನ್ನನ್ನು ನೆರಳಿನಂತೆ ಹಿಂಬಾಲಿಸಿ ಬರುವದನ್ನು ಕಾಣಹತ್ತಿದನು. ಅವನು ಹೀಗೆ ಸಂಚರಿ

ಸುತ್ತ ಮಿಥಿಲಾ ಪಟ್ಟಣಕ್ಕೆ ಬಂದನು. ನಗರದ ಹೊರಗಿರುವ ಒಂದು ಮರದಡಿಯಲ್ಲಿ ಕುಳಿತನು. ಅವನೊಡನೆ ಯಾರೂ ಇಲ್ಲದಿದ್ದರೂ ಆ ಘೋರ ರೂಪಿನ ವ್ಯಕ್ತಿಯು ಇದ್ದೇ ಇದ್ದಿತು. ಅವನು ಅಲ್ಲಿ ಕುಳಿತುಕೊಂಡು ತನ್ನ ದುರವಸ್ಥೆಯ ಬಗೆಗೆ ಚಿಂತೆ ಮಾಡುತ್ತಿದ್ದನು. ಅಷ್ಟರಲ್ಲಿ ಗೌತಮ ಋಷಿಗಳು ಅಲ್ಲಿಗೇ ಬಂದರು. ರಾಜನು ಅವರಿಗೆ ವಂದಿಸಿದನು, ಅವರೀರ್ವರಲ್ಲಿ ಕುಶಲ ಪ್ರಶ್ನೆಗಳು ನಡೆದವು, ಋಷಿಯು ರಾಜನಿಗಾದ ಚಿಂತೆಯ ಕಾರಣ ಕೇಳಿದನು. ರಾಜನು ವಿಪ್ರಪತ್ನಿಯಿಂದ ತನಗಾದ ಶಾಪವನ್ನು ವಿವರಿಸಿ ಹೇಳಿದನು. ಹಾಗು 'ಶಾಪ ನಿವಾರಣೆಗೆ ತಕ್ಕ ಪ್ರಾಯಶ್ಚಿತ್ತವನ್ನೂ ಕೇಳಿದನು.

ಆಗ ಗೌತಮನು ರಾಜನನ್ನು ಕುರಿತು— "ರಾಜಾ! ನಿನ್ನ ಪಾಪ-ಶಾಪಗಳ ನಿವಾರಣೆಗಾಗಿ ನೀನು ಭೂಮಿಯ ಮೇಲಿನ ತೀರ್ಥಗಳಲ್ಲಿ ವೈಶಿಷ್ಟ್ಯವಾಗಿದ್ದ 'ಗೋಕರ್ಣ' ಕ್ಕೆ ಹೋಗು. ಅಲ್ಲಿ ಈಶ್ವರನು ಸತತವೂ ವಾಸವಾಗಿರುವನು. ಆ ಗೋಕರ್ಣ ದರ್ಶನ ಮಾತ್ರದಿಂದಲೇ ಎಲ್ಲ ಪಾಪಗಳು ದೂರಾಗುವವು. ಅದೊಂದು ಮಹತ್ಪುಣ್ಯ ಕ್ಷೇತ್ರವು. ಈಶ್ವರನ ವಾಸವಿರುವದರಿಂದ ಅದು ಕೈಲಾಸಪುರವೆನ್ನಿಸಿದೆ, ಅಲ್ಲಿ ಶಿವನ ಆತ್ಮಲಿಂಗವು ಗಣಪನಿಂದ ಪ್ರತಿಷ್ಠಾಪನೆಯಾಗಿದೆ. ಸ್ವರ್ಗಸ್ಥಿತ ದೇವ ಸಂಕುಳವೆಲ್ಲವೂ ಅಲ್ಲಿಗೆ ಬಂದಿಳಿದಿರುವದು. ಮರುದ್ಗಣವೂ, ಚಂದ್ರ-ಸೂರ್ಯರೂ, ವಸು ಮೊದಲಾದವರೂ ಮಹಾಬಲೇಶ್ವರ ಮಂದಿರದ ಪೂರ್ವ ದ್ವಾರದಲ್ಲಿ ಕುಳಿತಿರುವರು.

ದಕ್ಷಿಣ ದ್ವಾರದಲ್ಲಿ— ಅಗ್ನಿ, ಯಮ, ಚಿತ್ರಗುಪ್ತರೂ, ಏಕಾದಶರುದ್ರರೂ, ಪಿತೃದೈವತವೂ ಇವರೆಲ್ಲರಿರುವರು.

ಪಶ್ಚಿಮದ್ವಾರದಲ್ಲಿ— ವರುಣಾಸಹಿತ ಗಂಗೆಯೂ, ಚಂದ್ರಮೌಳಿಯೂ ಇರುವರು, ಹಾಗು

ಉತ್ತರದ್ವಾರದಲ್ಲಿ— ಕುಬೇರ, ವಾಯು, ಭದ್ರಕಾಳಿ, ಮಾತೃದೇವತೆಗಳು, ಚಂಡಿ ಇವರೆಲ್ಲರು ತ್ರಿಕಾಲದಲ್ಲಿಯೂ ವಾಸಮಾಡಿಕೊಂಡಿರುವರು. ಇವರೆಲ್ಲರು ಮಹಾಬಲೇಶ್ವರನನ್ನು ಅರ್ಚಿಸುವರು. ಗಂಧರ್ವರು, ಅಪ್ಸರೆಯರು, ಇವರೆಲ್ಲರು ಸದಾಶಿವನ ಸೇವೆಯಲ್ಲಿ ನಿರಂತರಾಗಿರುವರು. ಋಷಿವರ್ಗವೆಲ್ಲವೂ ಶಿವನನ್ನು ಪೂಜಿಸುವದು. ಇವರಲ್ಲದೆ ಬ್ರಹ್ಮರ್ಷಿಗಳು, ತಪಸ್ವಿ–ಮಹಾತಪಸ್ವಿಗಳು, ಸಿದ್ಧರು, ಸಾಧ್ಯರು, ಮುನೀಶ್ವರರು, ಅಜಿನಧಾರಿಗಳು, ದಂಡಧಾರಿಗಳು, ಸನ್ಯಾಸಿಗಳು, ನಿರ್ಗುಣರು, ಬ್ರಹ್ಮಚಾರಿಗಳು ಇವರೆಲ್ಲರೂ ಅಲ್ಲಿ ಇರುವರು. ಇವರಲ್ಲದೆ ತಪಸ್ವಿಗಳು, ಗಂಧರ್ವಾದಿ ಸಕಲ ದೇವತೆಗಳು, ಪಿತರರು, ಸಿದ್ಧರು, ಅಷ್ಟವಸುಗಳು, ವಿದ್ಯಾಧರರು, ಕಿಂಪುರುಷರು, ಗುಹ್ಯಕರು, ಕಿನ್ನರರು, ಸ್ವರ್ಗಲೋಕದವರು, ಶೇಷ ಮೊದಲಾದ ನಾಗಗಳು, ತಕ್ಷಕರ, ಪಿಶಾಚ್ಚಗಳು, ಎಲ್ಲ ವೇತಾಳಗಳು ಇವರೆಲ್ಲರು ಮಹಾಬಲೇಶ್ವರನ ಪೂಜೆಗಾಗಿ ಅಲ್ಲಿಗೆ ಹೋಗುವರು. ದೇವನನ್ನು ಸಿಂಗರಿಸುವರು, ಹಾಡುವರು, ಕುಣಿಯುವರು. ಈಪ್ಸಿತವನ್ನು ಪೂರ್ಣಮಾಡಿಕೊಳ್ಳುವರು. ಭೂಮಂಡಲದಲ್ಲಿ ಇಂಥ ಕ್ಷೇತ್ರವು ಇನ್ನೊಂದಿಲ್ಲ. ಅಗಸ್ತ್ಯ ಮೊದಲಾದವರು, ಸನತ್ಕುಮಾರರು, ಪ್ರಿಯವ್ರತ ಮೊದಲಾದ ರಾಜಕುಮಾರರು, ಅಗ್ನಿ–ದೇವ–ದಾನವರು ಇವರೆಲ್ಲರು ಅಲ್ಲಿ ವರಗಳನ್ನು ಪಡೆದಿರುವರು. ಕಿಶುಮಾರಿ–ಭದ್ರಕಾಳಿಯರು ತ್ರಿಕಾಲ ಪೂಜಿಸುವರು, ಇಲ್ಲಿ ಗರುಡಗಳು ಸರ್ಪಗಳನ್ನು ನುಂಗಲಾರವು. ರಾವಣ ಮೊದಲಾದ ರಾಕ್ಷಸರು ಇಲ್ಲಿಯೇ ವರ ಪಡೆದರು. ಎಲ್ಲ ದೇವತೆಗಳೂ ಇತರರೂ ತಮ್ಮ ತಮ್ಮ

ಹೆಸರಿನಿಂದ ಇಲ್ಲಿ ಲಿಂಗಗಳನ್ನು ಸ್ಥಾಪಿಸಿರುವರು. ಹೀಗಾಗಿ ಅಸಂಖ್ಯ ಲಿಂಗಗಳು ಈ ಕ್ಷೇತ್ರದಲ್ಲಿರುವವು. ಈ ಮಹಾಬಳೇಶ್ವರ ಲಿಂಗವು ಯುಗಪರ್ವತದಿಂದ ಬೇರೆ ಬೇರೆ ವರ್ಣದ್ದಾಗುವದು. ಈ ಕಲಿಯುಗದಲ್ಲಿ ಅದಕ್ಕೆ ಕಪ್ಪು ಬಣ್ಣ ಬಂದಿದೆ. ಹಾಗು ಸೂಕ್ಷ್ಮರೂಪದಿಂದ ಮೃದುವಾಗಿದೆ. ಈ ಕ್ಷೇತ್ರದರ್ಶನದಿಂದ ಪಾಪಗಳೆಲ್ಲ ನಶಿಸುವವು, ಪುಣ್ಯ ದಿನಗಳಲ್ಲಿ ಮಹಾಬಳೇಶ್ವರನನ್ನು ಅರ್ಚಿಸಿದರೆ ಅವನೇ ರುದ್ರನ ಅಂಶಿಯಾಗುವನು. ರವಿವಾರ, ಸೋಮವಾರ, ಬುಧವಾರಗಳಲ್ಲಿ ಅಮಾವಾಸ್ಯೆ-ಪರ್ವಕಾಲಗಳಲ್ಲಿಯೂ ಸಮುದ್ರಸ್ನಾನ ಮಾಡಿ ಲಿಂಗಪೂಜೆ ಮಾಡಬೇಕು. ಶಿವಪೂಜೆ, ವ್ರತ, ಹೋಮ, ಹವನಗಳಿಂದ ಅನಂತ ಪುಣ್ಯಬರುವದು. ವ್ಯತೀಪಾತ ಪರ್ವಣಿ, ಸಂಕ್ರಾಂತಿ ಪೂಜೆಯಿಂದ ಮಹತ್ಪುಣ್ಯವೊದಗುವದು. ಮಹಾಶಿವರಾತ್ರಿಯಲ್ಲಿ ಬಿಲ್ವದಳ ಏರಿಸಿದರೆ ತ್ರಿಭುವನದಲ್ಲಿ ಎಲ್ಲವೂ ಲಭಿಸುವವು. ಶಿವರಾತ್ರಿಯ ಉಪವಾಸ-ಜಾಗರಣೆ ಮೊದಲಾದವು ಸ್ವರ್ಗದ ಮೆಟ್ಟಿಲುಗಳು. ರಾಜಾ ! ಈ ಗೋಕರ್ಣ ಸ್ಥಾನ ಮಹಿಮೆಯನ್ನು ಕುರಿತು ನಾನು ಪ್ರತ್ಯಕ್ಷ ಕಂಡುದುದನ್ನು ನಿನಗೆ ಉದಾಹರಣೆಗಾಗಿ ಹೇಳುವೆನು ಕೇಳು. ಆ ಕಥೆ ಎಂತಿರುವದೆಂದರೆ—

"ರಾಜಾ ! ಒಂದು ಬಾರಿ ಆ ಯಾತ್ರೆಗೆ ಹೋಗಿದ್ದೆ. ಅಲ್ಲಿ ಒಂದು ಮರದ ಕೆಳಕ್ಕೆ ಕುಳಿದಿದ್ದೆ. ಸನಿಹದಲ್ಲಿಯೇ ಇದ್ದ ಒಬ್ಬ ಮುದಿಕೆಯನ್ನು ನೋಡಿದೆನು. ಅವಳು ಕುರುಡೆಯೂ, ಮಹಾರೋಗಪೀಡಿತಳೂ ಆಗಿದ್ದಳು. ಆಹಾರವಿಲ್ಲದ್ದರಿಂದ ಆಕೆಯ ಮುಖ ಬಾಡಿತ್ತು. ಮೈತುಂಬಾ ಬಿಳುಪು, ಮೈಯಲ್ಲಿ ಹುಳುಗಳು ಬುಚುಗುಡುತ್ತಿದ್ದವು. ಹಲ್ಲುಗಳಿದ್ದಿಲ್ಲ, ಮೈಮೇಲೆ ಸೀರೆಯಿದ್ದಿಲ್ಲ. ಆಕೆ ಕುತ್ತಿಗೆಯಲ್ಲಿ ಜೀವಾ ಹಿಡಿದಿದ್ದಳು,

ಶೌಚವ್ಯಾಧಿಯಿಂದ ಪೀಡಿತಳಾಗಿದ್ದಳು, ಮೈಯಲ್ಲೆಲ್ಲ ಕ ಲಿ, ಈ ಸ್ವರೂಪದ ಆಕೆಯು ವಿಧವೆ. ತಲೆಗೂದಲು ಕತ್ತರಿಸಲ್ಪಟ್ಟಿತ್ತು, ಆಕೆ ನಡೆದು ಬರುವಾಗ ಅಲ್ಲಲ್ಲಿಗೆ ಬೀಳುತ್ತಿದ್ದಳು, ಜೀವ ಹಿಡಿಯುವ ಆಸೆ ಆಕೆಗೆ ಬಲವತ್ತರವಾಗಿತ್ತು. ಆ ಚಾಂಡಾಲಿನಿಗೆ ಈ ಪ್ರಕಾರ ದುರವಸ್ಥೆ ಪ್ರಾಪ್ತವಾಗಿತ್ತು. ಕಡೆಗೊಮ್ಮೆ ಆವಳು ನಾನಿರುವ ಗಿಡದ ನೆರಳಿಗೆ ಬಂದಳು, ದೊಕ್ಕನೆ ಬಿದ್ದಳು, ಆಕೆಯ ಪ್ರಾಣವೂ ಹೋಯಿತು.

ಆಕೆಯ ಜೀವ ಹಾರುವಷ್ಟರಲ್ಲಿಯೇ ಶಿವಲೋಕದಿಂದ ಒಂದು ವಿಮಾನ ಬಂದು ಅಲ್ಲಿ ಇಳಿಯಿತು ಅದರಲ್ಲಿದ್ದ ಶಿವದೂತರು ಆ ಚಾಂಡಾಲಿನಿಯನ್ನು ಕರೆದೊಯ್ಯುವದಕ್ಕೆ ಬಂದಿರುವರೆಂಬದು ನನಗೆ ಗೊತ್ತಾಯಿತು. ನಾನು ಶಿವದೂತರನ್ನು ಕುರಿತು— 'ಈಕೆ ಪಾಪಿಣಿಯು, ಇವಳನ್ನು ನೀವು ಕರೆದೊಯ್ಯುವದು ಯೋಗ್ಯವೇ" ಎಂದು ಕೇಳಿದೆನು. ಅದಕ್ಕೆ ಆ ಶಿವದೂತರು ಆ ಚಾಂಡಾಲಿಯ ಜನ್ಮಾಂತರ ವೃತ್ತವನ್ನು ಹೇಳಿದರು. ಆ ವೃತ್ತವು ಎಂತಿರುವದೆಂದರೆ—

"ಮೊದಲು ಇವಳು ಒಬ್ಬ ಬ್ರಾಹ್ಮಣ ಕನ್ಯೆಯು. ಸೌದಾಮಿನಿ ಎಂದು ಈಕೆಯ ಹೆಸರು, ಬಲು ಚೆಲುವೆಯಾಗಿದ್ದಳು. ತಂದೆಯು ಯೋಗ್ಯ ವರನಿಗೆ ಕೊಟ್ಟು ಲಗ್ನ ಮಾಡಿದನು. ಗಂಡನ ಮನೆಗೆ ಹೋದಳು. ಕೆಲವು ದಿನಗಳಲ್ಲಿಯೇ ಈಕೆಯ ಗಂಡನು ಸತ್ತನು. ತಂದೆಯು ವಿಧವೆಯಾದ ಮಗಳನ್ನು ತನ್ನ ಮನೆಗೆ ಕರಕೊಂಡು ಹೋದನು. ದಿನದಿನಕ್ಕೂ ಈಕೆಯ ಪ್ರಾಯ ಬಲಿಯಹತ್ತಿತು. ರತಿ ವಿಕಾರವು

ಹೆಚ್ಚಿ ಇವಳು ಒಂದು ಬಾರಿ ಜಾರಕೃತ್ಯಕ್ಕೆ ಗುರಿಯಾದಳು. ಈಕೆಯ ಆಕೃತಿಯು ಪ್ರಕಟವಾಯಿತು, ಸಮಾಜದವರು ಬಹಿಷ್ಕೃತಳನ್ನಾಗಿ ಮಾಡಿದರು. ಇದರಿಂದ ಆಕೆಯ ತಂದೆ–ತಾಯಿ–ಬಂಧು ಬಳಗವೆಲ್ಲ ಈಕೆಯಿಂದ ದೂರಾಯಿತು. ಕಡೆಗೆ ಈಕೆ ಒಬ್ಬ ಶೂದ್ರನ ಮನೆ ಹೊಕ್ಕಳು. ಆಚಾರ ವಿಚಾರ, ಆಹಾರ-ವಿಹಾರಗಳೆಲ್ಲ ಆ ಶೂದ್ರರಂತೆಯೇ ನಡೆದವು. ಈಕೆಗೆ ಆ ಶೂದ್ರನಿಂದ ಒಬ್ಬ ಮಗ ಹುಟ್ಟಿದನು, ಮಾಂಸ-ಮದಿರೆಗಳಿಗೆ ಮೆಚ್ಚಿದಳು.

ಒಂದು ದಿನ ಈಕೆ ಶೂದ್ರನು ಮನೆಯಲ್ಲಿಲ್ಲದಾಗ ಸೆರೆ ಕುಡಿದಳು, ಆ ಗುಂಗಿನಲ್ಲಿಯೇ ಆಡಿನ ಮರಿಯೆಂದು ಆಕಳ ಕರುವನ್ನು ಕೊಂದು ಮಾಂಸದ ಅಡಿಗೆ ಮಾಡಿದಳು. ಕೆಲಹೊತ್ತಿನ ಮೇಲೆ ಸೆರೆಯ ಅಮಲು ಇಳಿಯಿತು. ತಾನು ಆಕಳ ಕರುವನ್ನು ಕೊಂದುದನ್ನು ತಿಳಿದಳು. ಶೂದ್ರನು ಸಿಟ್ಟಾಗುವನೆಂದು ತಿಳಿದು ಈಕೆ ಆತನು ಬರುವದರೊಳಗೆ ಕರುವಿನ ಚರ್ಮ–ರುಂಡ ಹುಗಿದಳು. ಹಾಗು 'ಒಂದು ಹುಲಿಯು ಬಂದು ನಮ್ಮ ಕರುವನ್ನು ಒಯ್ದಿತೆಂದು ಓಣಿಯಲ್ಲಿ ರಂಭಾಟ ಮಾಡಿ ಅಳಹತ್ತಿದಳು. ಎಲ್ಲರೂ ನಿಜವೆಂದು ನಂಬಿದರು. ಇದರಂತೆ ಆಕೆ ದುಷ್ಟ ವ್ಯವಹಾರ ಮಾಡುತ್ತ ಮುಂದೆ ಕೆಲ ದಿನಗಳ ವರೆಗೆ ಆ ಶೂದ್ರನ ಮನೆಯಲ್ಲಿದ್ದಳು. ನಂತರ ಯಾವದೋ ಬೇನೆಯಿಂದ ಸತ್ತಳು.

ಯಮದೂತರುಗಳು ಈ ದುಷ್ಟೆಯನ್ನೊಯ್ದು ನರಕದಲ್ಲಿ ಚಲ್ಲಿದರು. ನರಕ ಅನುಭೋಗಿಸುವ

ಅವಧಿ ಮುಗಿದ ನಂತರ ಇವಳು ಚಾಂಡಾಲ ಯೋನಿಯಲ್ಲಿ ಹುಟ್ಟಿದಳು. ಹುಟ್ಟಿದಾಗಲೇ ಈಕೆಗೆ ಕಣ್ಣು ಗಳಿದ್ದಿಲ್ಲ. ಕುರೂಪಿ, ಕಪ್ಪು ಬಣ್ಣದವಳು. ಇಂಥ ಮಗಳನ್ನೇ ಈಕೆಯ ತಾಯಿ–ತಂದೆಗಳು ಕೆಲಕಾಲ ಸಲುಹಿದರು. ಎಂಜಲು ಅನ್ನ ತಂದು ಈಕೆಗೆ ತಿನ್ನಿಸುತ್ತಿದ್ದರು. ಈ ರೀತಿಯಿಂದ ಚಿಕ್ಕವಳಿದ್ದಾಗ ಈಕೆಯನ್ನು ಸಲುಹಿದರು. ಹೀಗಿರುತ್ತಿರಲು ಈಕೆಗೆ ಕುಷ್ಠರೋಗ ವ್ಯಾಪಿಸಿತು, ಜೋಪಾನ ಮಾಡುವ ತಾಯಿ–ತಂದೆಗಳೂ ಸತ್ತರು. ಆಗ ಈಕೆ ನಿರಾಧಾರಳಾದಳು, ಈಕೆಯ ರೋಗದ ಮೂಲಕ ಜಾತಿಯವರಾದರೂ ಈಕೆಯನ್ನು ಮುಟ್ಟದಾದರು. ತಾನೇ ಕಾಲಾಡಿಸುತ್ತ ಹೋಗಿ ಭಿಕ್ಷೆ ಬೇಡಿ ತಂದು, ತಿಂದು ಶರೀರ ರಕ್ಷಣೆ ಮಾಡಿಕೊಂಡಳು. ಮುಂದೆ ಕೆಲ ದಿನಗಳ ಮೇಲೆ ಈಕೆಗೆ ಅನ್ನ–ವಸ್ತ್ರಗಳು ಸಿಗದಾದವು, ತನ್ನ ಪೂರ್ವ ಕರ್ಮವೆಂದು ಬಗೆದು ದುಃಖಿಸಹತ್ತಿದಳು. ಈ ಕಷ್ಟಸ್ಥಿತಿಯಲ್ಲಿಯೇ ಈಕೆ ಮುದಿಕೆಯಾದಳು. ಯಾವದೊಂದು ದಾರಿಯಲ್ಲಿ ಬಿದ್ದುಕೊಂಡು ಭಿಕ್ಷೆ ಬೇಡುವಳು, ದೊರೆತ ಭಿಕ್ಷೆಯಿಂದ ಹೊಟ್ಟೆತುಂಬದಾಯಿತು. ಅದಕ್ಕಾಗಿ ಅಳುವಳು, ದುಃಖಪಡುವಳು. ರೋಗವು ದಿನದಿನಕ್ಕೂ ಹೆಚ್ಚಾಗಿ ಈಕೆಯ ಶರೀರದಿಂದ ದುರ್ಗಂಧವಿಡಿಗ ಹತ್ತಿತು, ಯಾರೂ ಸನಿಹದಲ್ಲಿ ಹಾಯದಾದರು.

ಒಂದು ದಿನ ಮಹಾಶಿವರಾತ್ರಿ. ಭಾವುಕರು ದೇಶದೇಶಗಳಿಂದ ಯಾತ್ರೆಗಾಗಿ ಗೋಕರ್ಣ ಕ್ಷೇತ್ರಕ್ಕೆ ಬರಹತ್ತಿದರು. ಈಕೆಯಾದರೂ ಯಾತ್ರೆಗೆ ಬರುವವರ ಸುಳಿವು ಹಿಡಿದು ಅವರನ್ನು ಬೆಂಬತ್ತಿದಳು. ಕಡೆಗೊಮ್ಮೆ ಗೋಕರ್ಣ ಕ್ಷೇತ್ರಕ್ಕೆ ಬಂದು ಸೇರಿದಳು. ಆ ನಗರದ ಒಂದು ಬೀದಿಯಲ್ಲಿ ಕುಳಿತು ದೇವಾಲ

ಯಕ್ಕೆ ಹೋಗಿ ಬರುವವರನ್ನು ತಿಳಿದು ಭಿಕ್ಷೆ ಬೇಡಹತ್ತಿದಳು, ಹಸಿವೆಯಿಂದ ಕಂಗೆಟ್ಟ ಆಕೆ— 'ನಾನು ಹಸಿದಿರುವೆ, ಅನ್ನಹಾಕಿರಿ, ಹಣ್ಣು ಚೆಲ್ಲಿರಿ, ಭಕ್ಕರಿ ನೀಡಿರಿ' ಎಂದೊದರುತ್ತ ಕುಳಿತಲ್ಲಿಯೇ ಕುಳಿತಳು. ಅಂದು ಶಿವರಾತ್ರಿಯ ವ್ರತೋಪವಾಸದ ದಿನವಿದ್ದುದರಿಂದ ಯಾರೂ ಆಕೆಗೆ ಏನನ್ನೂ ಭಿಕ್ಷೆ ನೀಡಲಿಲ್ಲ. ಕಡೆಗೆ ಒಬ್ಬನು— 'ಏ ಮುದಿಕೀ! ಇಂದು ಶಿವರಾತ್ರಿಯ ಉಪವಾಸವೆಂದಮೇಲೆ ನಿನಗೆ ಅನ್ನವನ್ನು ಯಾರು ಹಾಕುವರು? ಎಂದು ನುಡಿದು ಆಕೆಯ ಕೈಯಲ್ಲಿ ಒಂದು ಬಿಲ್ವದಳವನ್ನು ಚೆಲ್ಲಿ ಮುಂದೆ ಹೋದನು. ತನ್ನ ಕೈಯಲ್ಲಿ ಬಿದ್ದಿರುವದೇನೆಂಬದನ್ನು ಆಕೆ ಮೂಸಿ ನೋಡಿದಳು. ಇದು ತಿನ್ನುವ ಪದಾರ್ಥವಲ್ಲ' ಎಂದು ನಿಶ್ಚಯಿಸಿ ಆ ಬಿಲ್ವಗೊಂಚಲನ್ನು ಸಿಟ್ಟಿನಿಂದ ಕೈಬೀಸಿ ದೂರ ಚೆಲ್ಲಿದಳು. ಆ ಚೆಲ್ಲಿದ ಬಿಲ್ವ ಮಂಜರಿಯು ಸನಿಹದಲ್ಲಿಯೇ ಇದ್ದ ಒಂದು ಶಿವಲಿಂಗದ ಮೇಲೆ ಬಿದ್ದಿತು. ಆ ದಿನ ಕತ್ತಲೆಯ ರಾತ್ರಿ. ಆಕೆಗೆ ಪೂಜೆಯು ಲಭಿಸಿತು, ಯಾರೂ ಭಿಕ್ಷೆ ಹಾಕದ್ದರಿಂದ ಅಂದು ಅವಳಿಗೆ ಉಪವಾಸವೇ ಪ್ರಾಪ್ತವಾಯಿತು. ಹೀಗೆ ಏನೊಂದು ಆಯಾಸವಿಲ್ಲದೆ ಈಕೆಗೆ ಶಿವರಾತ್ರಿ ವ್ರತ ಪೂಜಾದಿಗಳು ಲಭಿಸಿದುವು. ಈಕೆ ಮಾಡಿದ ಪೂಜೆ ಈಶ್ವರನಿಗೆ ಮಾನ್ಯವಾಯಿತು. ಅವನು ಸಂತುಷ್ಟನಾಗಿ ಈಕೆಯನ್ನು ಭವಸಾಗರ ದಾಟಿಸಿದನು.

ಮರುದಿನ ಈಕೆ ಭಿಕ್ಷೆಗೆ ಹೊರಟಳು, ಮುನ್ನಾದಿನ ಕೂಳಿಲ್ಲ, ಕಣ್ಣು ಕಾಣಲಿಲ್ಲ, ಹಾದಿ ಸಿಗಲೊಲ್ಲದು, ಮಂದಮಂದವಾಗಿ ಸಾಗಿದಳು, ಬಿಸಿಲು ಈಕೆಗೆ ಸಹಿಸದಾಯಿತು, ಕಷ್ಟಬಡುತ್ತ ಬೀಳುತ್ತ

ಏಳುತ್ತ ಈ ಮರದ ಬುಡದಲ್ಲಿ ಪ್ರಾಣಬಿಡಲು ಆತುರಳಾದಳು. ಇದನ್ನು ಕಂಡು ನಾವು ಇಲ್ಲಿಗೆ ಬಂದೆವು. ಶಿವರಾತ್ರಿಯ ವ್ರತ ಪುಣ್ಯದಿಂದ ಈಕೆಯ ಶತಜನ್ಮ ಪಾಪಗಳೆಲ್ಲ ನಷ್ಟವಾದವು. ಈಶ್ವರನ ಪ್ರೀತಿಗೆ ಪಾತ್ರಳಾದಳು. ಅವನ ಅಪ್ಪಣೆಯಂತೆ ಈಕೆಯನ್ನೊಯ್ಯಲು ನಾವು ಇಲ್ಲಿಗೆ ಬಂದಿರುವೆವು" ಎಂದು ಶಿವದೂತರು ನನಗೆ ಹೇಳಿದರು. ಮತ್ತು ಈಕೆಯ ಹೊಲಸು ದೇಹಕ್ಕೆ ಅಮೃತ ಸೇಚಿಸಿ ದಿವ್ಯ ದೇಹಿಯನ್ನಾಗಿ ಮಾಡಿ ವಿಮಾನದಿಂದ ಕರೆದೊಯ್ದರು. ಇದನ್ನು ನಾನು ಪ್ರತ್ಯಕ್ಷ ಕಂಡೆನು'' ಎಂದು ಗೌತಮರು ಮಿತ್ರಸಹರಾಜನಿಗೆ ಹೇಳಿದರು. ಇದನ್ನೇ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

# ೮-ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು— "ಸ್ವಾಮಿ ! ಶ್ರೀಪಾದಶ್ರೀವಲ್ಲಭ ಗುರುಗಳು ಪ್ರಸಿದ್ಧ ಗೋಕರ್ಣ ಕ್ಷೇತ್ರದಲ್ಲಿ ಎಷ್ಟು ದಿನಗಳ ವರೆಗೆ ಇದ್ದರು? ನಂತರ ಮುಂದೊದಗಿದ ಸಂಗತಿಗಳೇನು?" ಎಂದು ಕೇಳಲು ಸಿದ್ಧಮುನಿಯು— ನಾಮಧಾರಕಾ ! ನಿನ್ನ ವಚನ ಕೇಳಿ ಸಂತೋಷವಾಯಿತು. ಶ್ರೀಪಾದ ಯತಿಯು ಗೋಕರ್ಣ ಕ್ಷೇತ್ರದಲ್ಲಿ ಮೂರು ವರ್ಷಗಳ ವರೆಗೆ ಗೌಪ್ಯವಾಗಿಯೇ ಇದ್ದರು. ಅಲ್ಲಿಂದ ಅವರು ಜಗದೋದ್ಧಾರಕ್ಕೆಂದು ಶ್ರೀ ಗಿರಿಪರ್ವತಕ್ಕೆ ಹೋದರು. ಎಲ್ಲರು ಅವರ ಚರಣ ದರ್ಶನವು ತೀರ್ಥಕ್ಕೆ ಸಮಾನವೆಂದು ಭಾವಿಸಿ ಅವರಿದ್ದಲ್ಲಿ ಹೋಗುವ ಹವಣಿಕೆ ತಾಳುತ್ತಿದ್ದರು. ಗುರುಚರಣದಲ್ಲಿ ಸಕಲ ತೀರ್ಥಗಳಿರುವವೆಂದು ವೇದ ಶ್ರುತಿಗಳೂ ಸಾರುವವು. ಶ್ರೀಗಿರಿಪರ್ವತದಲ್ಲಿ ನಾಲ್ಕು ತಿಂಗಳು ಕಳೆದ ನಂತರ ಅವರು ನಿವೃತ್ತಿ ಸಂಗಮಕ್ಕೆ ಬಂದರು. ಮುಂದೆ ಸಾಧು ಜನರಿಗೆ ದರ್ಶನ ಕೊಡುವ ಅಪೇಕ್ಷೆಯಿಂದ 'ಕುರವಪುರ' ಕ್ಕೆ ಬಂದಿಳಿದರು. ಆ ಕುರವಪುರವು ಮಹಾ ಕ್ಷೇತ್ರವು. ಕೃಷ್ಣೆಯು ಆ ಕ್ಷೇತ್ರವನ್ನು ಸುತ್ತಿಕೊಂಡು ಪ್ರವಹಿಸಿದ್ದುದರಿಂದ ಅದಕ್ಕೆ 'ಕುರುವಗಡ್ಡೆ ಎಂಬ ಹೆಸರುಂಟಾಗಿದೆ. ಆ ಕ್ಷೇತ್ರದ ಮಹಿಮೆಯು ಅಪಾರವಾದದ್ದಿರುವದು.

ಶ್ರೀಪಾದ ಯತಿಗಳು ಕುರವಪುರದಲ್ಲಿ ಇರುವಾಗ ಸುತ್ತಲೆಲ್ಲ ಅವರ ಖ್ಯಾತಿಯು ಪಸರಿಸಿತು. ಪುತ್ರಾರ್ಥಿ, ಧನಾರ್ಥಿ, ವಿದ್ಯಾರ್ಥಿ ಮುಂತಾದವರೆಲ್ಲರು ಶ್ರೀಗುರು ಸನ್ನಿಧಿಗೆ ಬಂದು ತಮ್ಮ ತಮ್ಮ ಬಯಕೆ

ಗಳನ್ನು ಪೂರೈಸಿಕೊಂಡರು. ನಾಮಧಾರಕಾ! 'ಆ ಗುರುವರನ ಮಹಿಮೆಯನ್ನು ಬೀರುವ ಹಲವು ವೃತ್ತಗಳಿರುವವು. ಅವುಗಳಲ್ಲಿ ಸ್ವಲ್ಪ ಮಾತ್ರ ಈಗ ನಿನಗೆ ಹೇಳುವೆನು ಕೇಳು' ಎಂದು ಸಿದ್ಧಮುನಿಯು ಹೇಳಹತ್ತಿದನು. 'ಗುರುಗಳು ತಮ್ಮ ಮುಂದಿನ ಅವತಾರದ ಗತಿಯನ್ನು ಉದ್ಬೋಧಿಸುವದಕ್ಕೆ ತೋರಿಸಿದ ಅಘಟಿತ ಲೀಲೆಗಳಲ್ಲಿ ಒಂದಾದ ಲೀಲಾಕಥೆ ಎಂತೆಂದರೆ —

"ಕುರವಪುರದಲ್ಲಿ ವೇದಶಾಸ್ತ್ರಸಂಪನ್ನ ಬ್ರಾಹ್ಮಣನೊಬ್ಬನಿದ್ದನು. ಅಂಬಿಕೆಯೆಂಬವಳು ಆ ಬ್ರಾಹ್ಮಣನ ಪುಣ್ಯಸತಿಯು. ಪಾಕ್ತನ ಕರ್ಮಾನುಸಾರವಾಗಿ ಆ ದಂಪತಿಗಳಿಂದ ಹುಟ್ಟಿದ ಮಕ್ಕಳು ಜನ್ಮಿಸಿದ ಕೂಡಲೇ ಸತ್ತುಹೋಗುತ್ತಿದ್ದವು. ಈ ದುಷ್ಪಾಪದ ನಿವೃತ್ತಿಗಾಗಿ ಅವರು ಹಲವು ತೀರ್ಥಯಾತ್ರೆಗಳನ್ನು ಆಚರಿಸಿದರು ದಾನ-ಧರ್ಮ ಮಾಡಿದರು. ಅದರ ಫಲವಾಗಿ ಅವರಿಂದ ಒಂದು ಗಂಡುಮಗು ಹುಟ್ಟಿ ಬದುಕಿತು. ತಾಯಿ-ತಂದೆಗಳಿಗೆ ಬಲು ಸಂತೋಷ! ಕೂಸು ಬೆಳೆದು ಬಾಲಕನಾದನು. ಆದರೆ ಅವರು ಪ್ರೀತಿಯಿಂದ ಬೆಳಸಿದ ಆ ಬಾಲಕನು ಮಂದಮತಿಯಾದನು. ಉಪನಯನದ ವಯಪ್ರಾಪ್ತವಾದ ಕೂಡಲೆ ಬ್ರಾಹ್ಮಣನು ಮಗನ ವ್ರತಬಂಧ ಮಾಡಿದನು. ವೇದಾಭ್ಯಾಸ ಮಾಡಿಸಹತ್ತಿದನು. ಆದರೆ ಜಡಮತಿಯಾದ ಆ ಬಾಲಕನಲ್ಲಿ ಪಠಣಶಕ್ತಿ-ಗ್ರಹಣಶಕ್ತಿ—ಸ್ಮರಣಶಕ್ತಿಗಳಿರಲಿಲ್ಲವಾದ್ದರಿಂದ ಬ್ರಾಹ್ಮಣನ ಪ್ರಯತ್ನವು ನಿಷ್ಫಲವಾಗಹತ್ತಿತು. ಅವನು ದೇಹದಂಡನೆ ಮಾಡಿ ಮಗನನ್ನು ವಿದ್ಯಾವಂತನನ್ನಾಗಿ ಮಾಡುವ ಯತ್ನ ನಡೆಸಿದನು, ಹೊಡೆದನು, ಬಡೆದನು. ಏನಾದರೂ ಆ ಹುಡುಗನ ಬುದ್ಧಿಮಾಂದ್ಯತೆಯು ತಿಳಿಯಾಗಲಿಲ್ಲ. ಬ್ರಾಹ್ಮಣನು ಮತ್ತೆ ಮತ್ತೆ ತನ್ನ ಕ್ರಿಯೆ

ನಡೆಸಿದನು. ತಂದೆಯ ಈ ಉಪಾಯದಿಂದ ಹುಡುಗನು ಅಂಜಿ ಎದೆಗುಂದಹತ್ತಿದನು. ತಾಯಿ ಅಂಬಿಕೆಯು ಮಗನ ದುರವಸ್ಥೆನೋಡಿ 'ಏಕಪುತ್ರವಿಷಯ ! ಇವನು ಹೇಗೇ ಇರಲಿ ನೀವು ಇಷ್ಟುಮಾತ್ರವೂ ಇವನನ್ನು ಶಿಕ್ಷಿಸಬಾರದು ! ಎಂದು ಅಂಗಲಾಚಿ ಗಂಡನನ್ನು ಬೇಡಿಕೊಂಡಳು. ಇಷ್ಟೇ ಅಲ್ಲ, 'ನನ್ನ ಈ ವಿನಂತಿಯನ್ನು ನೀವು ಧಿಕ್ಕರಿಸಿದರೆ ಪ್ರಾಣತ್ಯಾಗ ಮಾಡುವೆನು' ಎಂದು ಸ್ಪಷ್ಟವಾಗಿ ಹೇಳಿದಳು. ಬ್ರಾಹ್ಮಣನು ಅಂದಿನಿಂದ ತನ್ನ ಮಗನನ್ನು ನಿಯಂತ್ರಿಸುವದನ್ನು ಬಿಟ್ಟು ಬಿಟ್ಟನು.

ಇರ ಇರುತ್ತ ಹುಡುಗನು ದೊಡ್ಡವನಾದನು, ಬ್ರಾಹ್ಮಣನು ಸತ್ತುಹೋದನು. ಮನೆಯಲ್ಲಿ ತಾಯಿ–ಮಗ ಇವರಿಬ್ಬರೇ ಉಳಿದರು. ಬಡತನ. ಉದರಪೋಷಣೆ ಸಾಗದಾಯಿತು. ಅಂಬಿಕೆಯು ಮಗನನ್ನು ಯಾಚನಾವೃತ್ತಿಗೆ ಅಣಿಮಾಡಿದಳು. ಆತನು ದಿನಾಲು ಊರಲ್ಲಿ ಹೋಗಿ ಶುಕ್ಲವೃತ್ತಿಮಾಡಹತ್ತಿದನು. ಈ ಸ್ಥಿತಿಯಲ್ಲಿಯೇ ಅವನು ಇನ್ನಿಷ್ಟು ದೊಡ್ಡವನಾದನು. ಮಂದಮತಿಯೂ, ವಿದ್ಯಾವಿಹೀನನೂ ಆಗಿರುವ ಆತನನ್ನು ಎಲ್ಲರೂ ಹೀಗಳೆಯಹತ್ತಿದರು. ಭಿಕ್ಷೆಯನ್ನು ಸಹ ಹಾಕದೆ ಕೆಲವರು— 'ಎಲೋ ! ನಿನಗೇನಾಗಿದೆ ? ನೀರು ಹೊತ್ತು ಇಲ್ಲವೆ ಕಟ್ಟಿಗೆ ತಂದು ಮಾರಿ ಹೊಟ್ಟೆ ತುಂಬಿಕೊಳ್ಳಬಾರದೇ ?' ಎಂದು ನುಡಿಯಹತ್ತಿದರು. ಕೆಲವರು ಅವನ ತಾಯಿಗೆ— 'ನಿನ್ನ ಮಗನು ಮದುವೆಯ ವಯಕ್ಕೆ ತಕ್ಕವನಾಗಿರುವನು, ಒಳ್ಳೇ ಸಡಗರದಿಂದ ವಿವಾಹಮಾಡು, ಸಾಕಷ್ಟು ವರದಕ್ಷಿಣೆ ಬರುವದು' ಎಂದು ಇವರ ಬಡತನಸ್ಥಿತಿಯನ್ನು ಕಡೆಗಣಿಸಿ ಮಾತಾಡಿದರು. ಇವೆಲ್ಲ ಮಾತುಗಳನ್ನು ನಿತ್ಯವೂ ಕೇಳಿ ಕೇಳಿ ಆ ಬ್ರಾಹ್ಮಣಪುತ್ರನ ಹೃದಯವು ಕೆರಳಿತು ಅವನಿಗೆ ತನ್ನ

ಇಹಜೀವನವೇ ತನಗೆ ಬೇಸರಾಯಿತು. ಒಂದು ದಿನ ಅವನು ತನ್ನ ತಾಯಿಯನ್ನು ಕುರಿತು — 'ತಾಯಿ ! ನಾನು ಮತಿಮಂದನು, ದಡ್ಡನು, ಹಾಗು ದರಿದ್ರನು, ಹೀಗಿದ್ದರೂ ಜನರಾಡುವ ನಿಂದೆಯ ನುಡಿಗಳು ನನಗೆ ಅಸಹ್ಯವಾಗಿರುವವು. ಜನರು ನನಗೆ 'ಬಾಯಿ—ಕೆರೆ ಮುಳುಗು' ಎಂದು ಹೀನೋಕ್ತಿಗಳನ್ನಾಡುವರು. ಅವರ ಹೇಳಿಕೆಯು ನನಗೆ ಯೋಗ್ಯಕಾಣುವದು. ಈ ದಿನವೇ ಕೃಷ್ಣೆಗೆ ಹೋಗುವೆನು ಜಲಸಮಾಧಿಹೊಂದುವೆನು' ಎಂದು ಹೇಳಿ ತಾಯಿಗೆ ನಮಸ್ಕರಿಸಿ ನದಿಯ ಕಡೆಗೆ ನಡೆದನು. ಅಂಬಿಕೆಯು ತನ್ನ ಮಗನ ದೃಢನಿಶ್ಚಯ ನೋಡಿ ಅವನ ಬೆಂಬತ್ತಿ ತಾನೂ ಹೋದಳು. ಮಗನ ನಿಶ್ಚಯವನ್ನು ತಿರುಗಿಸಲು ಯತ್ನಿಸಿದಳು. ಅವನು ಕೇಳಲೊಲ್ಲನು ತಾನೂ ಮಗನೊಡನೆ ಹೊಳೆಮುಳುಗುವದಕ್ಕೆ ಸಿದ್ಧಳಾದಳು. ಇಬ್ಬರೂ ಕೈಕೈಹಿಡಿದುಕೊಂಡು ಕೃಷ್ಣೆಯಲ್ಲಿ ನಡುಮಟ್ಟ ನೀರಿಗೆ ಹೋದರು ಅಷ್ಟರಲ್ಲಿ—

ಶ್ರೀಪಾದಯೋಗಿಗಳು ಕೃಷ್ಣೆಯ ಸ್ನಾನಕ್ಕೆಂದು ಅವರಿರುವಲ್ಲಿಗೇ ಬಂದರು ಆ ತಾಯಿ-ಮಗ ಇವರಿಬ್ಬರು ಗಂಗೆಯಲ್ಲಿ ಮುಳುಗಿ ಪ್ರಾಣಕೊಡುವ ಹವಣಿಕೆಯನ್ನು ತಿಳಿದರು ಅವರು — "ಇದೇನು ? ಪ್ರಾಣತ್ಯಜಿಸುವ ನಿಮ್ಮ ಸಾಹಸ ? ಇದು ಆತ್ಮಘಾತವಲ್ಲವೇ ? " ಎಂದರು. ಗುರುಗಳ ದನಿಯನ್ನು ಕೇಳಿ ಅಂಬಿಕೆಯು ಮಗನೊಂದಿಗೆ ಹೊರಬಂದಳು ಗುರುಪಾದಗಳಿಗೆ ಇಬ್ಬರೂ ನಮಸ್ಕರಿಸಿದರು. ಅಂಬಿಕೆಯು ತಮಗಾದ ದುರವಸ್ಥೆಯನ್ನು ಗುರುಗಳಿಗೆ ತಿಳಿಸಿದಳು ಹಾಗು ತನ್ನ ಮಗನನ್ನು ಉದ್ಧರಿಸಬೇಕು" ಎಂದು ಬೇಡಿಕೊಂಡಳು. ಮತ್ತು ಆಕೆಯು- 'ಕೃಪಾಸಾಗರ ! ಇನ್ನು ಮುಂಬರುವ ನನ್ನ ಜನ್ಮಗಳಲ್ಲಿ ಇಂಥ ಮಂದಮತಿ ಪುತ್ರನು

ನನಗೆ ಹುಟ್ಟಬಾರದು. ನನಗೆ ಹುಟ್ಟಿದ ಮಕ್ಕಳೆಲ್ಲ ಗತಿಸಿ ಇವನೊಬ್ಬನೇ ಈಗ ಉಳಿದಿರುವನು. ಆದರೆ ಇವನೂ ಸಹ ಪ್ರಾಣಕೊಡುವದಕ್ಕೆ ಸಿದ್ಧನಾಗಿ ಇಲ್ಲಿಗೆ ಬಂದಿರುವನು. ಇದೆಂಥ ನನ್ನ ದುರದೃಷ್ಟವು ? ಗುರುವೇ ! ಆಡಿನ ಕೊರಳಲ್ಲಿಯ ಮೊಲೆಯಂತೆ ನಿರರ್ಥಕವಾಗಿರುವ ಮಕ್ಕಳು ಜನ್ಮ ಜನ್ಮಾಂತರಕ್ಕೂ ನನಗೆ ಬೇಕಾಗಿಲ್ಲ. ಪೂಜ್ಯ ಹಾಗು ಬ್ರಹ್ಮಜ್ಞಾನಿ ಮಗನು ನನ್ನ ಮುಂದಿನ ಜನ್ಮದಲ್ಲಿ ಜನಿಸುವಂತೆ ದಯಮಾಡಬೇಕು". ಎರಡನೆಲು ಶ್ರೀಪಾದಯತಿಗಳುಃ— "ತಾಯಿ ! ಹಾಗಾದರೆ ನೀನು ಈ ಜನ್ಮದಲ್ಲಿ ಈಶ್ವರಾರಾಧನೆಯನ್ನು ಮಾಡಿದ್ದಾದರೆ ಮುಂದಿನ ಜನ್ಮದಲ್ಲಿ ಶ್ರೀಹರಿಯ—ಸಮಾನನಾದ ಪುತ್ರನು ನಿನಗೆ ಲಭಿಸುವನು. ಇದಕ್ಕೆ ಉದಾಹರಣೆಯೆಂದರೆ— ಯಶೋದಾದೇವಿಯು, ಆಕೆ ಮೊದಲಿನ ಜನ್ಮದಲ್ಲಿ ಈಶ್ವರನ ಆರಾಧನೆ ಮಾಡಿದಳು. ಅದರ ಫಲವಾಗಿ ಆಕೆಗೆ ಶ್ರೀ ಕೃಷ್ಣನು ಕಾರಣಿಕ ಮಗನಾಗಿ ಲಭಿಸಿದನು. ಆಕೆಯಂತೆ ನೀನೂ ಈ ಜನ್ಮದಲ್ಲಿ ಶಿವಾರಾಧನೆ ಮಾಡು. ಅಂದರೆ ಬರುವ ಜನ್ಮದಲ್ಲಿ ನಿನ್ನ ಬಯಕೆ ಸಫಲವಾಗುವದು''. ಎಂದು ಹೇಳಿ ಆಕೆಗೆ ಪ್ರದೋಷ ಶಿವ ಪೂಜೆಯ ಕ್ರಮವನ್ನು ಹೇಳಿದರು. ಆಗ ಬ್ರಾಹ್ಮಣ ಪತ್ನಿಯು— " ಗುರುವೇ ! ಯಶೋದೆಗೆ ಕೃಷ್ಣನು ಜನ್ಮಿಸಿದ ಪೂರ್ವವೃತ್ತವೇನು ?'' ಎಂದು ಕೇಳಲು ಗುರುಗಳು ಆ ಕಥೆಯನ್ನು ಹೇಳಹತ್ತಿದರು! ಎಂತೆಂದರೆ—

"ಉಜ್ಜನೀ ನಗರದಲ್ಲಿ ಚಂದ್ರಸೇನ ಎಂಬ ಹೆಸರಿನ ಅರಸನಿದ್ದನು. 'ಮಣಿಭದ್ರ'ನೆಂಬವನು ಅವನ ಜೀವನ್ಮಿತ್ರನು. ಅವನು ಈಶ್ವರ ಭಕ್ತನಾಗಿದ್ದನು. ಶಿವನು ಪ್ರಸನ್ನನಾಗಿ ಅವನಿಗೆ ಒಂದು ಪ್ರಕಾಶಮಾನವಾದ ಚಿಂತಾರತ್ನಕೊಟ್ಟಿದ್ದನು. ಮಣಿಭದ್ರನು ಆ ರತ್ನವನ್ನು ತನ್ನ ಸ್ನೇಹಿತ ಚಂದ್ರಸೇನ ರಾಜನಿಗೆ ಕೊಟ್ಟನು

ಕಬ್ಬಿಣಕ್ಕೆ ತಗಲಿ ಅದನ್ನು ಸುವರ್ಣವನ್ನಾಗಿ ಮಾಡುವ ಸಾಮರ್ಥ್ಯವೂ, ಇಚ್ಛಿತ ಫಲವನ್ನು ಕೊಡುವ ಶಕ್ತಿಯೂ ಆ ಚಿಂತಾರತ್ನದಲ್ಲಿ ಇದ್ದಿತು. ಚಂದ್ರಸೇನನು ಸತತವೂ ಆ ರತ್ನವನ್ನು ಕೊರಳಲ್ಲಿ ಧರಿಸಿಕೊಳ್ಳುತ್ತಿದ್ದನು. ಅನ್ಯದೇಶಗಳ ರಾಜರು ಆ ರತ್ನದ ಮಹತ್ವವನ್ನು ಕೇಳಿ ಚಂದ್ರಸೇನನಿಂದ ಅದನ್ನು ಸೆಳೆಯುವ ಆಸೆಯುಳ್ಳವರಾದರು. ಅದರಂತೆ ಅವರು ಚಂದ್ರಸೇನನ್ನು ಬೇಡಿದರು. ಅವನು ಕೊಡಲಿಲ್ಲ ಆದ್ದರಿಂದ ಆ ರಾಜರುಗಳೆಲ್ಲ, ಆ ರತ್ನವನ್ನು ಅಪಹರಿಸುವ ಉದ್ದೇಶದಿಂದ ಸೈನ್ಯಸಹಿತ ಒಂದಾಗಿ ಬಂದು ಚಂದ್ರಸೇನರಾಜನ ನಗರವನ್ನು ಮುತ್ತಿದರು. ಇದು ಚಂದ್ರಸೇನನಿಗೆ ಗೊತ್ತಿರಲಿಲ್ಲ. ಅಂದು ಶನಿವಾರ, ತ್ರಯೋದಶಿಯು ಪ್ರದೋಷಸಮಯದಲ್ಲಿ ಅವನು ಈಶ್ವರ ಪೂಜೆಯನ್ನು ಮಾಡುತ್ತ ಏಕ ಚಿತ್ತದಲ್ಲಿ ಕುಳಿತಿದ್ದನು.

ರಾಜನು ಪ್ರದೋಷ ಪೂಜೆಮಾಡುತ್ತಿರುವಾಗ ಎಷ್ಟೋ ಗೌಳಿಗರ ಹುಡುಗರು ಆ ಪೂಜೆಯ ಸಡಗರ ನೋಡುತ್ತಲಿದ್ದರು. ಆ ಹುಡುಗರು ಅಲ್ಲಿಂದ ಬಂದು ತಮ್ಮ ಓಣಿಯಲ್ಲಿ ರಾಜನು ಮಾಡುತ್ತಿದ್ದ ಪೂಜೆಯ ಅಣಕ ಪೂಜೆಯ ಆಟ ಹೂಡಿದರು. ಎಲ್ಲ ಹುಡುಗರು ಕಲ್ಲುಗಳನ್ನು ಆಯ್ದು ತಂದರು. ಆ ಕಲ್ಲುಗಳಿಂದ ಒಂದು ಶಿವಾಲಯವನ್ನೂ ಪತ್ರ-ಪುಷ್ಪಾದಿಗಳನ್ನೂ ಕಲ್ಪಿಸಿದರು. ಒಂದು ದುಂಡನ್ನ ಕಲ್ಲನ್ನು ಮಹಾಬಲೇಶ್ವರ ಲಿಂಗವೆಂದು ಭಾವಿಸಿದರು ಆ ಹುಡುಗರಲ್ಲಿಯ ಒಬ್ಬ ಹುಡುಗನು ಲಿಂಗಪೂಜೆ ಮಾಡಹತ್ತಿದನು. ಉಳಿದವರು ಸುತ್ತರಿದು ಕೈಮುಗಿದುಕೊಂಡು ನಿಂತು ಭಕ್ತಿಯಿಂದ ಆ ಪೂಜೆ ನೋಡುತ್ತಿದ್ದರು. ಆಟದ ಭರದಲ್ಲಿ ಹುಡುಗರಿಗೆ ಹೊತ್ತು ಬಹಳಾಯಿತೆಂಬದರ ಅರಿವು ಉಳಿಯಲಿಲ್ಲ. ಆ ಹುಡುಗರ ತಾಯಿಗಳು ತಮ್ಮ ತಮ್ಮ ಮಕ್ಕ

ಳನ್ನು ಹೊಡೆಹೊಡೆದು ಮನೆಗಳಿಗೆ ಕರೆದೊಯ್ದರು.

ಆ ಎಲ್ಲ ಹುಡುಗರಲ್ಲಿ ಪೂಜೆಮಾಡುತ್ತಿದ್ದ ಹುಡುಗನೊಬ್ಬನು ಮಾತ್ರ ಅಲ್ಲಿಯೇ ಪೂಜೆಮಾಡುತ್ತ ಕುಳಿತನು. ಅವನ ತಾಯಿಯೂ ಅವನನ್ನು ಹುಡುಕುತ್ತ ಅಲ್ಲಿಗೇ ಬಂದಳು. ಒಬ್ಬನೇ ಕಣ್ಮುಚ್ಚಿ ಕುಳಿತಿದ್ದ ಆ ಮಗನನ್ನು "ಮನೆಗೆ ನಡೆ" ಎಂದು ಒತ್ತಾಯಪಡಿಸಿದಳು. ಪೂಜೆಯಲ್ಲಿ ಮಗ್ನನಾಗಿದ್ದ ಆ ಹುಡುಗನು ಸ್ಥಳಬಿಟ್ಟು ಕದಲಲಿಲ್ಲ. ಕಡೆಗೆ ಆ ತಾಯಿಯು ಆ ಆಟವನ್ನು ಕೆಡಿಸಿ ಬಿಟ್ಟಳು. ಕಲ್ಲಿನಿಂದ ಕಲ್ಪಿಸಿದ ಶಿವಾಲಯವನ್ನೂ ಲಿಂಗವನ್ನೂ ತೆಗೆ ತೆಗೆದು ಬೀದಿಗೆ ಚೆಲ್ಲಿಹೋದಳು ಇಷ್ಟಾದರೂ ಆ ಹುಡುಗನು ಮೇಲೇಳಲಿಲ್ಲ. ತಾಯಿಯ ಗೂಡಹೋಗಲಿಲ್ಲ ಹುಡುಗನು ತಾನು ಮಾಡಿದ ಶಿವಪೂಜೆಯು ಭಂಗವಾಯಿತಲ್ಲ ! ಎಂದು ಅಳುತ್ತ ಅಲ್ಲಿಯೇ ಕುಳಿತು ಬಿಟ್ಟನು. ರಾತ್ರಿಯಾಯಿತು ಕತ್ತಲೆ ಪಸರಿಸಿತು ಹುಡುಗನು ಒಂದೇಸವನೆ ಅಳುತ್ತ, 'ನನ್ನ ದೇವಪೂಜೆಗೆ ಭಂಗವುಂಟಾಯಿತಲ್ಲ' ! ಎಂದು ಒಂದೇ ಸವನೆ ಮಿಡುಕುತ್ತ ಕುಳಿತನು. ಈಗ ಅವನಿಗೆ ಹಸಿವು, ನೀರಡಿಕೆ, ನಿದ್ದೆ, ಅಂಜಿಕೆ ಇವಾವುಗಳ ಪರಿವೆ ಇದ್ದಿರಲಿಲ್ಲ.

ಆ ಹುಡುಗನ ಅಜ್ಞ ಭಕ್ತಿಯು ಶಿವನಿಗೆ ಮಾನ್ಯವಾಯಿತು! ಕೂಡಲೆ ಶಿವನು ತನ್ನ ದಿವ್ಯಸ್ವರೂಪದಿಂದ ಅಲ್ಲಿ ಪ್ರಕಟನಾದನು. ಆ ಹುಡುಗನನ್ನು ರಮ್ಮಿಸಹತ್ತಿದನು. ಅಲ್ಲಿಯೇ ಒಂದು ರತ್ನಖಚಿತ ಶಿವಾಲಯವನ್ನೂ ಶಿವಲಿಂಗವನ್ನೂ ನಿರ್ಮಾಣಮಾಡಿದನು. ಮತ್ತು ಆ ಹುಡುಗನನ್ನು ಮುಂಡಾಡಿ— "ನಿನ್ನ ಇಚ್ಛೆಯೇನು ?" ಎಂದು ಕೇಳಿದನು. ಹುಡುಗನು ಹರ್ಷಿತನಾಗಿ— 'ದೇವಾ ! ನಿನ್ನ ಮೇಲಿನ ನನ್ನ ಭಕ್ತಿಯು

ಸತತವಿರಬೇಕು. ಹಾಗು ನಾನು ಮಾಡುತ್ತಿದ್ದ ಪೂಜೆಯನ್ನು ಕೆಡಿಸಿದ ನನ್ನ ತಾಯಿಯನ್ನು ಕ್ಷಮಿಸಬೇಕು" ಎಂದು ಕೈಮುಗಿದು ಹೇಳಿಕೊಂಡನು, ಈಶ್ವರನು 'ತಥಾಸ್ತು' ಎಂದು ಅಂತರ್ಧಾನಹೊಂದಿದನು. ಹುಡುಗನು ಅಲ್ಲಿಯೇ ಶಿಹಲಿಂಗವನ್ನು ಅರ್ಚಿಸುತ್ತ ಕುಳಿತನು.

ಶಿವಪ್ರಸನ್ನತೆಯಿಂದ ಉಂಟಾದ ಶಿವಾಲಯದ ದಿವ್ಯಪ್ರಕಾಶದಿಂದ ಇಡೀ ನಗರವೆಲ್ಲ ಬೆಳಗಹತ್ತಿತು. ಆ ಗೋಪಕುವರನ ಮನೆಯು ಸಿರಿಸಂಪದ್ಯುಕ್ತವಾಗಿ ಶೋಭಿಸಹತ್ತಿತು. ಒಮ್ಮೆಲೆ ನಗರವು ಪ್ರಕಾಶಮಾನವಾದುದನ್ನು ಮುತ್ತಿಗೆ ಹಾಕಿದ ರಾಜರು ನೋಡಿ ದಂಗಾದರು. ಅವರು— 'ಈ ನಗರದ ರಾಜ ಚಂದ್ರಸೇನನು ಪುಣ್ಯವಂತನಾಗಿರುವದರಿಂದಲೇ ಈ ರಾತ್ರಿಯಲ್ಲಿ ಸಹ ಕೋಟಿ ಸೂರ್ಯಪ್ರಭೆಯುಂಟಾಗಿ ಇಡೀ ನಗರವೇ ಪಾವಿತ್ರ್ಯತೆ ಹೊಂದಿರುವದು. ಇಂಥ ರಾಜನೊಡನೆ ನಾವು ಒಂದು ರತ್ನದ ನಿಮಿತ್ತ ದ್ವೇಷಕಟ್ಟಿಕೊಳ್ಳುವದು ನಮ್ಮ ಮೂರ್ಖತನವು. ಇನ್ನು ನಾವು ಸ್ನೇಹಭಾವದಿಂದ ಇಲ್ಲಿಯ ರಾಜದರ್ಶನ ತೆಗೆದುಕೊಳ್ಳುವದು ವಿಹಿತವು. ಎಂದು ವಿಚಾರಮಾಡಿ ಅವರೆಲ್ಲರು ಒಬ್ಬ ದೂತನನ್ನು ಸ್ನೇಹಭಿಕ್ಷೆಗಾಗಿ ಕಳಿಸಿದರು. ರಾಜನು ಅವರ ಬಿನ್ನಹ ಮನ್ನಿಸಿ ಅವರನ್ನೆಲ್ಲ ತನ್ನೆಡೆಗೆ ಬರಮಾಡಿಕೊಂಡನು. ಅವರೆಲ್ಲರು ಚಂದ್ರಸೇನನನ್ನು ಕುರಿತು— "ರಾಜ ! ಇಂಥ ಕತ್ತಲೆಯ ರಾತ್ರಿಇದ್ದರೂ ನಿನ್ನ ಈ ನಗರದಲ್ಲಿ ರವಿ ಪ್ರಭೆಯೇ ತೋರುವದಲ್ಲ ! ಇದೇನು ವಿಚಿತ್ರ ? ಎಂದು ಕೇಳಿದರು. ಚಂದ್ರಸೇನನಿಗೂ ಇದರ ರಹಸ್ಯಗೊತ್ತಿರಲಿಲ್ಲ. ಅವನು ತನ್ನಲ್ಲಿ ಬಂದ ರಾಜರನ್ನೊಡಗೊಂಡು ಕೌತುಕ ನಿರೀಕ್ಷಣೆಗೆಂದು ನಗರದೊಳಕ್ಕೆ ನಡೆದನು. ತುಸು ಮುಂದೆ ಹೋಗುವಷ್ಟರಲ್ಲಿ ಒಂದು

ಅನುಪಮ್ಯ ಶಿವಾಲಯವು ರತ್ನ ಭೂಷಿತವಾಗಿ ಶೋಭಿಸುತ್ತಿರುವದನ್ನು ಕಂಡರು. ಅದರಂತೆಯೇ ಗೋಪಕುಮಾ
ರನ ಮನೆಯು ಶೋಭಿಸುವದನ್ನೂ ನೋಡಿದರು. ಶಿವಾಲಯದ ಒಳಕ್ಕೆ ಹೋಗಿ ಆ ಗೋಪಕುಮಾರನನ್ನು
ಭೆಟ್ಟಿಯಾದರು. 'ಗೋಪಕುಮಾರಾ ! ಇದೇನು ವಿಚಿತ್ರ ? ಎಂದು ಕೇಳಲು ಆ ಹುಡುಗನು ರಾಜನು ಮಾಡು
ತ್ತಿದ್ದ ಪ್ರದೋಷಪೂಜೆಯು ಮೊದಲ್ಗೊಂಡು— ಎಲ್ಲ ಸಂಗತಿಯನ್ನು ಅವರಿಗೆ ಹೇಳಿದನು. ಅದನ್ನು ಕೇಳಿ
ಆ ರಾಜರೆಲ್ಲರು ಆ ಹುಡುಗನಿಗೆ 'ನೀನು ಗೋಪರಾಜನಾಗಿರುವಿ' ಎಂದು ಮರ್ಯಾದಿಸಿ ಅವನಿಗೆ ಕಾಣಿಕೆಗಳನ್ನು
ಕೊಟ್ಟರು. ಹಾಗು ತಮ್ಮ ತಮ್ಮ ಸ್ಥಾನಗಳಿಗೆ ಹಿಂತೆರಳಿದರು.

ಚಂದ್ರಸೇನರಾಜನು ನಿರ್ಮಲನು, ಪ್ರದೋಷಪೂಜೆಯ ಫಲ ಹೊಂದಿದ ಅವನಿಗೆ ಯಾತರ
ಭಯವು ? ಶಿವಾಲಯದಿಂದ ಆ ಗೋಪಕುಮಾರನು ತನ್ನ ಮನೆಗೆ ಬಂದನು. ತನ್ನ ತಾಯಿಯನ್ನು ಕಂಡು—
'ಅವ್ವಾ ! ನಿನ್ನ ಮುಂದಿನ ಜನ್ಮದಲ್ಲಿ ನಾರಾಯಣದೇವನು ನಿನ್ನ ಉದರದಿಂದ ಅವತರಿಸುವನೆಂಬ ವರವನ್ನು
ಸಾಕ್ಷಾತ್ ಈಶ್ವರನು ದಯಪಾಲಿಸಿರುವನು. ಇದರಲ್ಲಿ ಸಂಶಯಹಿಡಿಯಬೇಡ. ನೀನು ಪ್ರದೋಷಪೂಜೆಯನ್ನು
ನೋಡಿದಿ. ನಾನು ಮಾಡುತ್ತಿರುವ ಪೂಜೆಯನ್ನು ಭಂಗಗೊಳಿಸಿದುದಕ್ಕೆ ಆ ಶೂಲಪಾಣಿಯಿಂದ ಕ್ಷಮೆ ಕೇಳಿ
ದೆನು'' ಎಂದು ಎಲ್ಲ ವೃತ್ತಾಂತ ಆಕೆಗೆ ಹೇಳಿದನು. ಎಂದು ಶ್ರೀಪಾದಯತಿವರರು ಆ ವಿಪ್ರಸ್ತ್ರೀಯಳಿಗೆ ಪ್ರದೋಷ
ಪೂಜೆಯ ಫಲ ಮಹಿಮೆ ಹೇಳಿ 'ನೀನಾದರೂ ಪ್ರದೋಷ ಪೂಜೆ ಮಾಡು. ಮುಂದಿನ ಜನ್ಮದಲ್ಲಿ ನನ್ನಂಥ
ಪುತ್ರನನ್ನು ಪಡೆಯುವಿ'. ಎಂದು ಸೂಚನೆ ಹೇಳಿದರಲ್ಲದೆ ಆಕೆಯ ಭಾವನೆಗೆ ಮೆಚ್ಚಿದರು. ಹಾಗು ಆಗಲೇ

ಆಕೆಯ ಮಂದಮತಿಯಾದ ಆ ಮಗನನ್ನು ತಮ್ಮ ಮುಂದೆ ಕರೆದು ಅವನ ತಲೆಯಮೇಲೆ ತಮ್ಮ ವರದಹಸ್ತವನ್ನಿರಿಸಿದರು. ತತ್ಪರಿಣಾಮವಾಗಿ ಆ ಮೂಢಮತಿಯ ವೃತ್ತಿ ಪಲ್ಲಟವಾಗಿ ಅವನು ಮೂರುವೇದಗಳನ್ನು ಬಲ್ಲ ಪಂಡಿತನಾದನು. ಆ ಬ್ರಾಹ್ಮಣಪುತ್ರನು 'ತನ್ನ ಮತಿಯು ಒಮ್ಮೆಲೆ ಬದಲಾಗಿ ತ್ರಿವೇದಿಯಾದೆನೆಂದು ಸಂತೋಷಗೊಂಡನು. ಆತನ ತಾಯಿಯೂ ತನ್ನ ಮಗನು ವಿದ್ವಾಂಸನಾದುದನ್ನು ನೋಡಿ ವಿಸ್ಮಿತಳಾದಳು ! ಅವರಿಬ್ಬರೂ ತಮ್ಮನ್ನು ಉದ್ಧರಿಸಿದ ಶ್ರೀಪಾದಯತಿವರರ ಪಾದಗಳಿಗೆ ಮತ್ತೆ ಮತ್ತೆ ನಮಸ್ಕರಿಸಿದರು.

ತಾಯಿಯು ಮಗನೊಡನೆ ಮನೆಗೆ ಬಂದಳು ಗುರುವಾಕ್ಯವನ್ನು ಸ್ಮರಿಸಿಕೊಂಡು ಪ್ರದೋಷ ವ್ರತಧಾರಿಯಾದಳು. ಆಕೆಯ ಮಗನು ವೇದಶಾಸ್ತ್ರಸಂಪನ್ನನಾಗಿ ಎಲ್ಲರಿಂದಲೂ ಪೂಜಾರ್ಹನಾದನು. ಮೊದಲು ಅವನನ್ನು ಹಲವು ಬಗೆಯಿಂದ ಧಿಕ್ಕಾರ ಮಾಡುತ್ತಿದ್ದ ಬ್ರಹ್ಮವೃಂದವು ಈಗ ಅವನನ್ನು ಬಹಳೇ ಗೌರವಿಸಹತ್ತಿತು. ಮುಂದೆ ಅವನ ವಿವಾಹವಾಯಿತು. ಹಿಂದಿನಿಂದ ಆತನು ಪುತ್ರ-ಪೌತ್ರರಿಂದ ಯುಕ್ತನಾಗಿ ಒಳ್ಳೆ ಹರ್ಷದಿಂದ ಜೀವಿಸಹತ್ತಿದನು. ಶ್ರೀಗುರುಕೃಪೆಯನ್ನು ದೊರಕಿಸಿದವನಿಗೆ ಅಸಾಧ್ಯವೇನೂ ಇರುವದಿಲ್ಲ" ಈ ಪ್ರಕಾರ ಸಿದ್ಧ ಮುನಿಯು ನಾಮಧಾರಕನಿಗೆ ಹೇಳಿದನು.

—o—

# ೯ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ನಾಮಧಾರಕನು ಸಿದ್ಧಮುನಿವರನಿಗೆ ನಮಸ್ಕರಿಸಿ— "ಸ್ವಾಮಿ! ಶ್ರೀಪಾದಗುರುಗಳು ಕುರುವಪುರದಲ್ಲಿ ವಾಸಮಾಡಿರುವಾಗ .ಅಲ್ಲಿ ಮುಂದೆ ನಡೆದ ಕಥೆಯನ್ನೂ ವೃತ್ತಾಂತವನ್ನೂ ಹೇಳುವದಾಗಬೇಕು' ಎಂದು ಬೇಡಿಕೊಳ್ಳಲು ಸಿದ್ಧಮುನಿಯು— ನಾಮಧಾರಕ! ಆ ಕುರವಪುರದಲ್ಲಿ ವರ್ತಿಸಿದ ಇನ್ನೊಂದು ಕತೆ ಹೇಳುವೆನು . ಕೇಳು' ಎಂದು ಹೇಳಹತ್ತಿದನು. ಎಂತೆಂದರೆ—

'ಆ ಕುರವಪುರದಲ್ಲಿ ಒಬ್ಬ ಮಡಿವಾಳನಿದ್ದನು. ಅವನು ಶ್ರೀಪಾದ ಗುರುಗಳ ಸೇವಕನಾದನು. ಅವನು ನಿತ್ಯವು ಕೃಷ್ಣೆಯಲ್ಲಿ ಸ್ನಾನ ಮಾಡುತ್ತಿದ್ದನು. ಹಾಗು ತನ್ನ ಉದ್ಯೋಗ ಬಿಡದೆ ಲೌಕಿಕ ವ್ಯವಹಾರ ಸಂಪಾದಿಸುತ್ತಿದ್ದನು. 'ಶ್ರೀಗುರುಗಳ ದರ್ಶನವು ಗಂಗಾಸ್ನಾನಕ್ಕಿಂತಲೂ ಮಿಗಿಲಾದ ಪುಣ್ಯದಾಯಕವು' ಎಂಬುದರ ಮರ್ಮವನ್ನು ಅವನು ಸರಿಯಾಗಿ ತಿಳಿದುಕೊಂಡಿದ್ದರೂ ಲೋಕಾರೂಢಿಗನುಸರಿಸಿ ಅವನು ದಿನಾಲು ತಪ್ಪದೆ ಗಂಗೆಯ ಸ್ನಾನ ಮಾಡುತ್ತಿದ್ದನು.

ಹೀಗಿರಲು ಶ್ರೀಪಾದಯತಿಗಳು ಒಂದು ದಿವಸ ಕೃಷ್ಣೆಗೆ ಸ್ನಾನಕ್ಕೆಂದು ಹೋದರು, ಸುತ್ತುಗಟ್ಟಿ ಹರಿಯುವ ಪ್ರವಾಹದ ಮಧ್ಯದಲಿ ಅವರು ನಿಂತಿದ್ದರು. ಸಮೀಪದಲ್ಲಿಯೇ ಮಡಿವಾಳನು ಅರಿವೆ ಒಗೆಯುತ್ತಲಿದ್ದನು ಆಗ .ಅವನು ಗುರುಗಳನ್ನು ಕಂಡು ಭಕ್ತಿಭಾವ ಪೂರ್ಣತೆಯಿಂದ ಓಡಿಬಂದನು. ಗುರುಗಳಿಗೆ ನಮಸ್ಕರಿಸಿದನು. ಇದೇ ಮೊದಲುಗೊಂಡು ಆ ಮಡಿವಾಳನು ದಿನದ ಮೂರು ವೇಳೆಗಳಲ್ಲಿ

ಶ್ರೀಪಾದ ಗುರುಗಳ ದರ್ಶನ ಪಡೆದು ನಮಸ್ಕರಿಸುವ ತನ್ನ ಆಚರಣೆಯನ್ನಿಟ್ಟುಕೊಂಡನು.

ಒಂದು ದಿನ ಆ ಮಡಿವಾಳನು ದಿನವಂತೆ ನಮಸ್ಕಾರ ಮಾಡುವದಕ್ಕೆಂದು ಗುರುಸನ್ನಿಧಿಗೆ ಬಂದನು. ಗುರುಗಳು ಅವನನ್ನು ಕುರಿತು— ·ಎಲೈ ರಜಕನೆ! ದಿನಾಲು ನಮಸ್ಕಾರಕ್ಕೆಂದು ಬಂದು ಶ್ರಮ ಪಡುವದೇಕೆ? ಇಷ್ಟು ದಿನಗಳ ವರೆಗೆ ನೀನು ಕಷ್ಟಪಟ್ಟಿದ್ದಕ್ಕೆ ನಾವು ಸಂತುಷ್ಟರಾದೆವು. ನಿನ್ನ ಭಕ್ತಿಗೆ ಮೆಚ್ಚಿದೆವು. 'ಇನ್ನು ಸುಖದಿಂದ ರಾಜ್ಯವಾಳುವಿ' ಎಂದು ನುಡಿದರು. ಮಡಿವಾಳನು ಗುರುವಾಕ್ಯವನ್ನು ಕೇಳಿ ಅದರ ಸ್ಮರಣೆಗೆಂದು ತನ್ನ ದೋತರ ಸೆರಗಿಗೆ ಒಂದು ಗಂಟು ಹಾಕಿಕೊಂಡನು. ಹಾಗು ಅವರೆದುರಿನಲ್ಲಿ ಕೈಮುಗಿದು ನಿಂತು— 'ಗುರುಮೂರ್ತಿಯ ಸತ್ಯಸಂಕಲ್ಪವಿದ್ದಂತೆ ಒದಗಲಿ' ಎಂದು ನಮಸ್ಕರಿಸಿದನು.

ಆ ಮೇಲೆ ಮಡಿವಾಳನು ಪ್ರಾಪಂಚಿಕ ಚಿಂತೆಯಿಂದ ದೂರಾದನು. ಗುರುಸೇವಕನಾಗಿ ವರ್ತಿಸ ಹತ್ತಿದನು. ದೂರಿನಿಂದಲೇ ಸಾಷ್ಟಾಂಗ ನಮಸ್ಕಾರ ಹಾಕುತ್ತ ·ದಿನಾಲು ಗುರುಮಠಕ್ಕೆ ಹೋಗಹತ್ತಿದನು. ಇದರಂತೆ ಎಷ್ಟೋ ದಿನಗಳ ವರೆಗೆ ಅವನ ಸೇವೆ ನಡೆಯಿತು. ಮಠದ ಹಾಗು ಅಂಗಳದ ಸಮ್ಮಾರ್ಜನೆಯ ಕ್ರಿಯೆಯು ಅವನದೇ ಆಗಿದ್ದಿತು. ಇದಿರಲಿ.

ವೈಶಾಖಮಾಸ, ವಸಂತಋತುವಿನ ಸೊಬಗು ಹಾಗು ಬಿಸಿಲಿನ ಪ್ರತಾಪ, ಹೀಗಿರುವ ಸಮಯ

ದಲ್ಲಿ ಒಬ್ಬ ಯವನರಾಜನು ಕುರವಪುರದ ಮುಂದೆ ಪ್ರವಹಿಸಿದ ಕೃಷ್ಣೆಯ ಸ್ನಾನಕ್ಕೆ ಬಂದಿಳಿದನು. ಆ ರಾಜನ ಜೊತೆಗೆ ಆತನ ಸ್ತ್ರೀ–ಪರಿವಾರವು ವಸ್ತ್ರಾಲಂಕಾರ ಭೂಷಣದೊಂದಿಗೆ ಬಂದಿದ್ದಿತು. ರಾಜನು ತನ್ನ ಸ್ತ್ರೀ ಪರಿವಾರದೊಡನೆ ಒಮ್ಮೆಲೆ ಪ್ರವಾಹದಲ್ಲಿ ಸೇರಿದನು. ಅವರೆಲ್ಲರಿಂದ ಕೂಡಿ ಸೊಗಸಿನಿಂದ ಜಲಕ್ರೀಡೆಯಾಡ ಹತ್ತಿದನು. ಅವನ ಸೈನ್ಯದಳವು ನದಿಯ ಎರಡೂ ತೀರಗಳಲ್ಲಿ ನಿಂತು ರಾಜನ ಜಲಕ್ರೀಡೆಯ ಕೌತುಕ ನೋಡುತ್ತಿತ್ತು. ಜಲಕ್ರೀಡೆಗಿಳಿದವರಿಗೆ ಉತ್ಸಾಹ ಹುಟ್ಟಿಸುವದಕ್ಕೆ ವಾದ್ಯಗಳು ಬಾರಿಸಲ್ಪಡುತ್ತಿದ್ದವು.

ಮಡಿವಾಳನು ದಿನದಂತೆ ಅರಿವೆ ಒಗೆಯುವದಕ್ಕೆ ಅಲ್ಲಿಗೆ ಹೋದನು. ನೋಡುತ್ತಾನೆ! ಹೊಳೆ ತುಂಬ ರಾಜಪರಿವಾರವು! ತಾನು ತಂದ ಅರಿವೆಗಳನ್ನು ಒಗೆಯುವದನ್ನು ಬಿಟ್ಟು ಜಲಕ್ರೀಡೆಯಾಡುವ ಆ ರಾಜನ ಹಾಗು ಅವನ ಸ್ತ್ರೀಪರಿವಾರದ ಸೊಗಸನ್ನು ಕಣ್ಣೆವೆಯಿಕ್ಕದೆ ನೋಡುತ್ತ ನಿಂತುಕೊಂಡನು. ವಿಸ್ಮಯಪಟ್ಟನು. ಅವನು ತನ್ನ ಮನಸಿನಲ್ಲಿ— "ಇದ್ದರಿರಬೇಕು ಇಂಥ ಸೌಖ್ಯ! ಸಂಸಾರದಲ್ಲಿ ಹುಟ್ಟಿ ಬಂದವನು ಇಂಥ ಸುಖಪಡೆಯದಿದ್ದರೆ ಅವನು ಪಶುಸಮಾನನು. ಈ ರಾಜನ ಜೀವಿತವು ಧನ್ಯ! ಸಕಲ ಸೌಖ್ಯಭೋಗಿಸುವ ಈ ರಾಜನೇ ಧನ್ಯ! ಇವನೆಂಥ ಈಶ್ವರ ಭಕ್ತನು? ಇವನು ಅದಾವ ದೇವನನ್ನು ಆರಾಧಿಸಿರುವನು? ಇವನಿಗೆ ಅದೆಂಥ ಗುರುವು ಪ್ರಸನ್ನನಾಗಿರಬಹುದು? ಅಂತೆಯೇ ಇವನಿಗೆ ಈ ಸೌಖ್ಯದೆಶೆ ಪ್ರಾಪ್ತವಾಗಿದೆ" ಎಂದು ಮನದಲ್ಲಿ ವಿಚಾರಿಸಿದನು.

ಶ್ರೀಪಾದಗುರುಗಳು ಹೊಳೆಯಲ್ಲಿ ನಿಂತು ವಿಚಾರ ಮಾಡುತ್ತಿದ್ದ ಮಡಿವಾಳನ ಅಂತಃಸ್ಥಿತಿ

ಯನ್ನು ಅರಿತರು. ಅವರು ಆತನನ್ನು ಕರೆಯುತ್ತ— "ರಜಕನೆ! ನದಿಯಲ್ಲಿ ನಿಂತು ನೀನು ಏನು ಆಲೋಚಿಸುತ್ತಿದ್ದಿ?" ಎಂದು ಕೇಳಲು ಮಡಿವಾಳನು ಏನೊಂದನ್ನು ಬಚ್ಚಿಡದೆ ತನ್ನ ಮನಸಿನಲ್ಲಿ ಆಗ ಉಂಟಾಗಿದ್ದ ಆಲೋಚನೆಗಳನ್ನೆಲ್ಲ ಹೇಳಿದನು. ಅದಕ್ಕೆ ಶ್ರೀಪಾದಗುರುಗಳು— "ಹುಟ್ಟಿದಂದಿನಿಂದ ನೀನು ಕಷ್ಟಪಡುತ್ತ ಬಂದಿರುವಿ. ರಾಜ್ಯಭೋಗ ಭೋಗಿಸುವ ಆಸೆ ನಿನ್ನಲ್ಲುಂಟಾಗಿದೆ. ನಿಜವಾಗಿಯೂ ರಾಜ್ಯಭೋಗವು ತಮೋವೃತ್ತಿಯುಳ್ಳದ್ದು. ಇಂದ್ರಿಯಗಳನ್ನೆಲ್ಲ ಶಾಂತಗೊಳಿಸದಿದ್ದರೆ ಅದು ನಿರ್ಮಲ ಮೋಕ್ಷವಲ್ಲ. ಮುಂದೆ ಜನ್ಮಾಂತರದಲ್ಲಾದರೂ ಆ ಇಂದ್ರಿಯಗಳು ಬಾಧಿಸುವವು. ನೀನು ಇಂದ್ರಿಯಗಳನ್ನು ಸಂತುಷ್ಟಗೊಳಿಸುವದಕ್ಕೆ ಮ್ಲೇಂಛವಂಶದಲ್ಲಿ ಜನ್ಮಿಸು. ನಿನ್ನ ಮನಸ್ಸೇಚ್ಛೆಯಂತೆ ರಾಜ್ಯ ಭೋಗಿಸುವದಕ್ಕೆ ಹೋಗು, ನಡೆ" ಎಂದರು. ಮಡಿವಾಳನು ಗಾಬರಿಯಾಗಿ— "ಕೃಪಾಸಾಗರಾ! ನನ್ನನ್ನು ಉಪೇಕ್ಷಿಸಬೇಡ. ನಿನ್ನ ಚರಣದಿಂದ ಅಂತರಿಸಲಾರೆ. ನನಗೆ ಜ್ಞಾನಕೊಡು" ಎಂದು ಬೇಡಿಕೊಳ್ಳಲು ಗುರುಗಳು— ರಜಕಾ! ನೀನು ಬೇದರ ಪಟ್ಟಣದಲ್ಲಿ ಜನ್ಮತಾಳುವಿ. ಅಂತ್ಯಕಾಲದಲ್ಲಿ ದರ್ಶನ ಕೊಡುವೆವು. ನಮ್ಮ ಭೆಟ್ಟಿಯಾದ ಕೂಡಲೆ ನಿನಗೆ ಜ್ಞಾನೋದಯವಾಗುವದು. ಆಗ ನಾವು ಸನ್ಯಾಸಿ ವೇಷದಿಂದ 'ನರಸಿಂಹ ಸರಸ್ವತಿ' ಹೆಸರಿನಿಂದ ಅವತಾರ ತಾಳುವೆವು. ಹೋಗು! ನಿನಗೆ ಅಪ್ಪಣೆ ಕೊಡುವೆವು ಹೋಗು" ಎಂದೆನ್ನಲು ಮಡಿವಾಳನು ಅವರಿಗೆ ನಮಸ್ಕರಿಸಿದನು. ಗುರುಗಳು ಅವನನ್ನು ಹತ್ತಿರ ಕರೆದು— 'ರಜಕಾ! ನೀನು ಇಹಭೋಗ ಭೋಗಿಸುವಿಯೋ? ಮುಂದಿನ ರಾಜ್ಯಭೋಗ ಭೋಗಿಸುವಿಯೋ? ಎಂದು ಕೇಳಲು ಮಡಿವಾಳನು— ಗುರುದೇವಾ! ಈಗ ನಾನು ಮುಪ್ಪಿನವನಾಗಿರುವೆ. ಬಾಲಾಭ್ಯಾಸದಿಂದ ಪ್ರಾಯದಲ್ಲಿ ರಾಜ್ಯಭೋಗದ ಸವಿ

ಯುಣ್ಣುವೆನು" ಎಂದನು. ಗುರುಗಳು ಅವನಿಗೆ— "ರಜಕಾ! ಜನ್ಮಾಂತರದ ಭೋಗ ಭೋಗಿಸುವದಕ್ಕೆ ತೀವ್ರ ಹೋಗು" ಎಂದು ಅಪ್ಪಣೆ ಕೊಟ್ಟರು. ಮರುಕ್ಷಣದಲ್ಲಿಯೇ ಆ ಮಡಿವಾಳನು ಪ್ರಾಣವನ್ನು ಬಿಟ್ಟನು! ಬೇದರ ನಗರದಲ್ಲಿಯ ಮ್ಲೇಂಛ ವಂಶದಲ್ಲಿ ಜನ್ಮತಾಳಿದನು.

ನಾಮಧಾರಕಾ! ಈ ರಜಕನ ಕಥೆಯನ್ನು ಮುಂವೆ ವಿಸ್ತರಿಸಿ ಹೇಳುವೆನು. ಈಗ ಗುರುಚರಿತ್ರೆಯನ್ನು ಮುಂದೆ ಕೇಳು.

ಇಷ್ಟಾದಮೇಲೆ ಶ್ರೀಪಾದ ಗುರುಗಳ ಖ್ಯಾತಿಯು ಹೆಚ್ಚಾಯಿತು. ಅವರ ಮಹಿಮೆ ಅಪರಂಪಾರವಿರುವವು. ಅವುಗಳಲ್ಲಿ **ಪ್ರಸಿದ್ಧವಾದವುಗಳನ್ನೇ** ಕೇಳು. ಮುಂದಿನ **ಅವತಾರಗಳೂ** ಬಹಳಾಗಿವೆ. ಅವರ ಮಹಿಮೆ ಅವರ್ಣನೀಯವು. ಅವರ ಅಮೃತದೃಷ್ಟಿಯು ಆಶ್ಚರ್ಯಕರವು, ಶ್ರೀಗುರುಗಳಿರುವ ಸ್ಥಾನಗಳು ಅಪಾರ ಮಹಿಮೆಯುಳ್ಳವಾದವು. ಅವರ ಕೃತಿಯು ವಿಚಿತ್ರವಾದದ್ದು, ಅವರಿಂದೊದಗಿದ ದೃಷ್ಟಾಂತ ಹೇಳುವೆನು. ಸ್ಥಾನ ಮಹಿಮೆಯ ಪ್ರಕಾರ ಹೇಳುವದಾದರೆ— ಕುರವಪುರವು ಪ್ರಸಿದ್ಧವಾದದ್ದು. ಅಲ್ಲಿ ಮಾನವನ ಇಚ್ಛೆಗಳು ಈಡೇರುವವು.

ಕುರವಪುರದಲ್ಲಿದ್ದ ಶ್ರೀಪಾದ ಗುರುಗಳು ಮುಂದಿನ ಅವತಾರೋದಯದ ಕಾರಣದಿಂದ ಅಲ್ಲಿಯೇ

ಅದೃಶ್ಯರಾದರು! ಅವರು ಆಶ್ವೀನ ಬಹುಳ ದ್ವಾದಶಿಯ ದಿನ ಮೃಗ ನಕ್ಷತ್ರವಿದ್ದಿತು. ಆ ದಿವಸದಲ್ಲಿ ಶ್ರೀಪಾದ ಗುರುಗಳು ಕೃಷ್ಣೆಯ • ಗಂಗೆಯಲ್ಲಿ ಅದೃಶ್ಯರಾಗಿ ನಿಜಾನಂದದಲ್ಲಿ ಸಮಾವೇಶವಾದರು, ಲೌಕಿಕಕ್ಕೆ ಅನುಸರಿಸಿ ಅವರು ಅದೃಶ್ಯರಾದರೂ ತ್ರಯಮೂರ್ತಿಯ ಅವತಾರಿಕರಾದ ಆ ಶ್ರೀಪಾದ ಶ್ರೀವಲ್ಲಭರು ಇಂದಿಗೂ ಕುರವಪುರದಲ್ಲಿ ಇದ್ದೇ ಇರುವರು. ಇದು ಸತ್ಯ! ಸತ್ಯ! ಸತ್ಯವು!

ನಾಮಧಾರಕಾ! ·ಶ್ರೀಪಾದರಾಯರು ಅದೃಶ್ಯರಾದ ಆ ಸ್ಥಾನದಲ್ಲಿ ಅವರು ನಿರ್ಗುಣಸ್ವರೂಪ ತೊಂದಿದ ದೃಷ್ಟಾಂತವನ್ನು ವಿಸ್ತರಿಸಿ ಹೇಳುವೆನು' ಎಂದು ಸಿದ್ಧಮುನಿಯ ಹೇಳಿದನು.

—o—

# ೧೦ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ-ಗುರುಭ್ಯೋನಮಃ ನಾಮಧಾರಕನು ಸಿದ್ಧಮುನಿಯನ್ನು ಕುರಿತು— 'ಸ್ವಾಮಿ! ಕುರವಪುರದ ಮಹಿಮೆಯನ್ನು ನಿಮ್ಮ ಮುಖದಿಂದ ಕೇಳಿದೆನು. ಶ್ರೀಪಾದರಾಯರು ಅದೃಶ್ಯರಾಗಿಲ್ಲವೆಂದು ಕೆಲವರು ಹೇಳುವರು. ಕೆಲವರು ಶ್ರೀಪಾದರಾಯರು ಮತ್ತೆ ಅವತಾರ ತಾಳಿದರೆಂದು ಹೇಳುವರು. ಇದನ್ನೆಲ್ಲ ನನಗೆ ವಿಸ್ತೃತವಾಗಿ ಬೋಧಿಸುವದಾಗಬೇಕು' ಎಂದು ಕೈಮುಗಿದು ಬೇಡಿಕೊಂಡನು. ಆಗ ಸಿದ್ಧಮುನಿಗಳು—

"ನಾಮಧಾರಕನೆ! ಶ್ರೀಗುರು ಮಹಿಮೆಯನ್ನೇನು ಕೇಳುವಿ? ಅದು ಅಪರಂಪಾರವಾಗಿರುವದು. ಶ್ರೀಗುರುವು ವಿಶ್ವವ್ಯಾಪಕ ಪರಮಾತ್ಮನು. ಅವನು ಅನಂತರೂಪಗಳುಳ್ಳವನು. ಶ್ರೀಗುರುಗಳು ಮುಂದೆ ಕಾರ್ಯಕಾರಣವನ್ನಿಟ್ಟುಕೊಂಡು ಅವತಾರ ತಾಳುವದಕ್ಕೆಂದು ಕುರವಪುರ ಕ್ಷೇತ್ರದಲ್ಲಿ ತಾವು ಗುಪ್ತವೇಷದಿಂದ ಇರಹತ್ತಿದರು. ಪರಶುರಾಮನು ಚಿರಂಜೀವಿಯಲ್ಲವೇ? ಇಂದಿಗೂ ಅವನು ಚಿರಂಜೀವಿಯಾಗಿರುವನು. ಅವನು ಒಬ್ಬನೇ ಆಗಿದ್ದರೂ ಅವನ ಅವತಾರಗಳು ಅನೇಕವಾಗಿ ಒದಗಿರುವವು. ತ್ರಯಮೂರ್ತಿಯ ಅವತಾರಗಳು ಯಾರಿಗೂ ತಿಳಿಯವು. ಆ ತ್ರಯಮೂರ್ತಿಯೇ ಕುರವಪುರದಲ್ಲಿ ಗುರುಮೂರ್ತಿಯಾಗಿ ಇರುವನು. ಶ್ರೀಪಾದ ಶ್ರೀವಲ್ಲಭವನ ಆ ಕುರವಪುರ ಸ್ಥಾನವು ಅನುಪಮ್ಯವೂ ಅವರ್ಣನೀಯವೂ ಆಗಿರುವದು. ಅದನ್ನು ದೃಷ್ಟಾಂತದಿಂದ ಹೇಳುವೆನು ಕೇಳು.

“ವಲ್ಲಭೇಶ ಎಂಬ ಕಾಸ್ಯಪ ಗೋತ್ರದ ಬ್ರಾಹ್ಮಣನಿದ್ದನು. ಅವನು ಸುಶೀಲನೂ ಆಚಾರ ನಿಷ್ಠನೂ ಆಗಿದ್ದನು. ವ್ಯಾಪಾರದಿಂದ ಉಪಜೀವಿಸುತ್ತಿದ್ದನು. ಆ ಬ್ರಾಹ್ಮಣನು ಪ್ರತಿ ವರ್ಷವೂ ಕುರುವಪುರ ಯಾತ್ರೆ ತಪ್ಪಿಸುತ್ತಿರಲಿಲ್ಲ. ಒಂದು ಸಾರೆ ಅವನು ಯಾತ್ರೆಗೆ ಹೋಗುವ ಮೊದಲು— ‘ನನ್ನ ವ್ಯಾಪಾರವು ಸಾಕಷ್ಟು ಲಾಭದಾಯಕವಾದರೆ ಕುರುವಪುರ ಯಾತ್ರೆಗೆ ಹೋಗಿ ಸಹಸ್ರ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡುವೆನು’ ಎಂಬದಾಗಿ ಗುರುಸ್ಮರಣೆಯಿಂದ ಮನಸಿನಲ್ಲಿ ನಿಶ್ಚಯ ಮಾಡಿಕೊಂಡನು. ಅದರಂತೆ ಅವನು ತನ್ನ ವ್ಯಾಪಾರವನ್ನು ಮಾಡುವದಕ್ಕೆಂದು ಒಂದು ಪಟ್ಟಣಕ್ಕೆ ಹೋದನು. ವ್ಯಾಪಾರ ನಡೆಯಿಸಿದನು. ಪ್ರತಿಸಾರೆಯ ವ್ಯಾಪಾರದಲ್ಲಿ ಸಿಗುತ್ತಿದ್ದ ಲಾಭದ ನೂರುಪಟ್ಟು ಲಾಭವು ಅಂದಿನ ವ್ಯವಹಾರದಿಂದ ಅವನಿಗೆ ದೊರೆಯಿತು. ತನ್ನ ನಿಶ್ಚಯದಂತೆ ಅನ್ನ ಸಂತರ್ಪಣೆ ಮಾಡುವದಕ್ಕೆ ಸಾಕೆಷ್ಟು ಹಣವನ್ನು ಕಟ್ಟಿಕೊಂಡು ಕುರವಪುರದ ಯಾತ್ರೆಗೆ ಹೊರಟನು.

ವಲ್ಲಭೇಶನು ಹಣ ಕಟ್ಟಿಕೊಂಡು ಕುರವಪುರಕ್ಕೆ ಹೊರಟದುದು ಆ ಊರಿನ ಕಳ್ಳರಿಗೆ ಗೊತ್ತಾಯಿತು. ಅವನನ್ನು ನಡುದಾರಿಯಲ್ಲಿ ಕೊಂದು ದ್ರವ್ಯ ಅಪಹರಿಸುವ ಮನೀಷೆ ಅವರದಾಗಿತ್ತು. ಅದಕ್ಕನುಸರಿಸಿ ಅವರು ಕಪಟಯಾತ್ರಿಕರಾಗಿ ವಲ್ಲಭೇಶನನ್ನು ಹಿಂಬಾಲಿಸಿ ಹೋದರು. ವಲ್ಲಭೇಶನು ಅವರನ್ನು ನೋಡಿರಲಿಲ್ಲ. ಮೂರು ದಿನಗಳವರೆಗೂ ಕಳ್ಳರು ಅವನ ಬೆನ್ನು ಬಿಟ್ಟಿರಲಿಲ್ಲ. ಎರಡನೆಯ ದಿವಸ ಅವರು ವಲ್ಲಭೇಶನನ್ನು ಕೂಡಿದರು. ತಾವೂ ಯಾತ್ರಿಕರೆಂದು ಅವನಿಗೆ ಹೇಳಿದರು. ಎಲ್ಲರೂ ಕೂಡಿ ಕುರವಪುರದ ದಾರೀ

ಹಿಡಿದರು. ಮೂರನೆಯ ದಿನದ ರಾತ್ರಿಯಲ್ಲಿ ಆ ಕಳ್ಳರು ವಲ್ಲಭೇಶನ ಶಿರಸ್ಸನ್ನು ಕೊಯ್ದು ಅವನಲ್ಲಿಯ ದ್ರವ್ಯವನ್ನು ತಕ್ಕೊಂಡರು.

ಭಕ್ತರಕ್ಷಕ ಶ್ರೀಪಾದರಾಯನು ಜಟಾ ಭಸ್ಮಾಂಕಿತ ವೇಷದಿಂದ ಆಯುಧ ಧರಿಸಿಕೊಂಡು ದ್ರವ್ಯವನ್ನು ಕಟ್ಟಿಕೊಂಡು ಹೊರಡಲುದ್ಯುಕ್ತರಾದ ಆ ಕಳ್ಳರ ಮುಂದೆ ಬಂದು ನಿಂತನು. ಇನ್ನೊಂದು ಮಾತಾಡದೆ ತನ್ನ ತ್ರಿಶೂಲದಿಂದ ಆ ಎಲ್ಲ ಕಳ್ಳರನ್ನು ಕೊಂದನು. ಅವರಲ್ಲಿ ಒಬ್ಬನು ತನ್ನ ನಿರಪರಾಧತೆಯನ್ನು ವಿನಯದಿಂದ ಶ್ರೀಪಾದರಾಯನಿಗೆ ಶ್ರುತಪಡಿಸಿದನು. ನಿಜವಾಗಿ ಅವನಿಗೆ ಇದು ಗೊತ್ತಿರಲಿಲ್ಲ. ಇದನ್ನರಿತು ಶ್ರೀಪಾದರಾಯನು ಅವನನ್ನು ಕರೆದು ಅವನ ಕೈಯಲ್ಲಿ ವಿಭೂತಿಯನ್ನು ಕೊಟ್ಟನು. 'ಬ್ರಾಹ್ಮಣನ ರುಂಡ-ಮುಂಡಗಳನ್ನು ಹೊಂದಿಸಿ ಈ ವಿಭೂತಿಯನ್ನು ಪ್ರೋಕ್ಷಿಸು' ಎಂದು ಹೇಳಿ ಅಲ್ಲಿಯೇ ಅದೃಶ್ಯನಾದನು. ಶ್ರೀಪಾದರಾಯನ ಹೇಳಿಕೆಯಂತೆ ಆ ಕಳ್ಳನು ವಲ್ಲಭೇಶನಿಗೆ ವಿಭೂತಿಯನ್ನು ಹಚ್ಚಿದನು. ಕೂಡಲೆ ಆತನು ಸಜೀವಗೊಂಡನು. ಕಳ್ಳರು ಹೆತರಾಗಿ ಬಿದ್ದುದನ್ನು ನೋಡಿ ಚಕಿತನಾದನು. 'ಇದೇನು ಭೀಕರತೆ?' ಎಂದು ಜೀವದಿಂದ ಉಳಿದ ಕಳ್ಳನನ್ನು ಕೇಳಿದನು. 'ಕಳ್ಳರು ನಿನ್ನನ್ನು ರುಂಡ ಹಾರಿಸಿ ನಿನ್ನ ದ್ರವ್ಯ ದೋಚಿಕೊಂಡರು. ಇನ್ನು ಅವರು ಇಲ್ಲಿಂದ ಕಾಲ್ತೆಗೆದು ಅಷ್ಟರಲ್ಲಿ ಒಬ್ಬ ತಾಪಸಿಯು ಬಂದು ಈ ಕಳ್ಳರನ್ನು ತ್ರಿಶೂಲದಿಂದ ತಿವಿದು ಕೊಂದನು. ನಿರಪರಾಧಿಯಾದ ನನ್ನ ಕೈಯಲ್ಲಿ ವಿಭೂತಿಯನ್ನು ಕೊಟ್ಟನು. ರುಂಡ-ಮುಂಡ ಬೇರೆಯಾಗಿದ್ದ ನಿನ್ನ ರುಂಡ-ಮುಂಡಗಳನ್ನು ಹೊಂದಿಸಿದೆನು. ನಾನು ನಿನಗೆ ವಿಭೂತಿಯನ್ನು ಪ್ರೋಕ್ಷಿಸು

ತ್ರಿರುವಾಗಲೇ ನನಗೆ ಕಾಣದೆ ಆ ತಾಪಸಿಯು ಅದೃಶ್ಯವಾದನು. ನಿನ್ನ ದ್ರವ್ಯವೆಲ್ಲ ಸತ್ತು ಬಿದ್ದ ಕಳ್ಳರ ಬಳಿಯಲ್ಲಿದೆ" ಎಂದು ಹೇಳಿದನು. ವಲ್ಲಭೇಶನು ಇದನ್ನೆಲ್ಲ ಕೇಳಿ ಕೌತುಕಗೊಂಡನು. ಹಾಗು ಕಳ್ಳರ ಗಂಟಿನಲ್ಲಿದ್ದ ತನ್ನ ದ್ರವ್ಯವನ್ನು ತೆಗೆದುಕೊಂಡು ತನ್ನ ನಿಶ್ಚಯದಂತೆ ಕುರವಪುರಕ್ಕೆ ಹೋದನು. ಸಹಸ್ರ ಬ್ರಾಹ್ಮಣರ ಅನ್ನಸಂತರ್ಪಣೆ ಮಾಡಿಸಿದನು."

'ನಾಮಧಾರಕಾ ! ಇಂತು ಕುರುವಪುರದ ಮಹಿಮೆಯು ಪ್ರಖ್ಯಾತವಾಗಿರುವದು. ಶ್ರೀಪಾದ ಗುರುಗಳು ಕುರವಪುರದಲ್ಲಿಯೇ ಇರುವರು. ಇದರಲ್ಲಿ ಸಂಶಯವನ್ನೆಣಿಸಬೇಡ. ಮುಂದಿನ ಅವತಾರ ಸೂಚಕವೆಂದು ಅವರು ಗುಪ್ತವಾಗಿಯೇ ಇರುವರು. ಶ್ರೀಪಾದ ಶ್ರೀವಲ್ಲಭರ ಮುಂದಿನ ಅವತಾರವೇ ಶ್ರೀನೃಸಿಂಹ ಸರಸ್ವತಿ ಗುರುಗಳು ಎಂದು ತಿಳಿದುಕೊಳ್ಳು' ಎಂದು ಸಿದ್ಧಮುನಿಯು ಹೇಳಿದನು.

—o—

# ೧೧ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು—ನಾಮಧಾರಕಾ ! ಶ್ರೀಪಾದ ಗುರುಗಳ ಅವತಾರವೆಂತಾಯಿತೆಂಬದನ್ನು ಕೇಳಿರುವಿ. ಶ್ರೀಪಾದ ಗುರುಗಳು ಬ್ರಾಹ್ಮಣ ಸ್ತ್ರೀಯಳಿಗೆ ಪ್ರದೋಷ ಪೂಜೆಯ ಮಹಿಮೆಯನ್ನು ಹೇಳಿದುದನ್ನೂ ಕೇಳಿರುವಿ. ಆ ಬ್ರಾಹ್ಮಣ ಸ್ತ್ರೀಯಳು ಗುರೂಪದೇಶದಿಂದ ಪ್ರದೋಷ ಪೂಜೆ ಮಾಡುತ್ತ ಕಾಲಕಳೆಯುತ್ತಿರಲು ಆಕೆಯಲ್ಲಿ ದೇಹ ವಾಸನೆಯಿರುವಾಗಲೇ ಅವಳು ಮೃತಪಟ್ಟಳು. ಮರು ಜನ್ಮದಲ್ಲಿ ಆಕೆಯು ಉತ್ತರ ದೇಶದ ಕರಂಜನಗರದ ಬ್ರಾಹ್ಮಣ ಕುಲದಲ್ಲಿ ಜನ್ಮತಾಳಿದಳು. ಅಂಬಾ ಎಂಬದು ಆಕೆಯ ಜನ್ಮನಾಮವು. ತಾಯಿ-ತಂದೆಗಳು ಆಕೆಯನ್ನು ಮಮತೆಯಿಂದ ಸಲುಹಿ ದೊಡ್ಡವಳನ್ನಾಗಿ ಮಾಡಿದರು. ಅದೇ ಊರಿನಲ್ಲಿ ಶಿವಭಕ್ತನಾಗಿದ್ದ ಒಬ್ಬ ಬ್ರಾಹ್ಮಣನಿಗೆ ಅಂಬೆಯನ್ನು ಕೊಟ್ಟು ಲಗ್ನಮಾಡಿದರು. ಆ ಅಳಿಯನ ಹೆಸರು ಮಾಧವ.

ಅಂಬೆಯು ಪತಿಮಂದಿರಕ್ಕೆ ಹೋದಳು. ಶುದ್ಧಾಚಾರದಿಂದ ನಡೆಯಹತ್ತಿದಳು. ಪೂರ್ವದ ವಾಸನೆಯಂತೆ ಅವಳು ಈಶ್ವರ ಪೂಜೆ ಮಾಡುತ್ತಿದ್ದಳು. ಸನ್ಮನದಿಂದ ಆ ದಂಪತಿಗಳು ಪ್ರದೋಷ ಪೂಜೆ ಮಾಡುತ್ತಿದ್ದರು. ಹೀಗಿರುತ್ತಿರಲು ಅಂಬೆಗೆ ಬಸುರಿನ ಚಿಹ್ನಗಳು ತೋರಹತ್ತಿದವು. ಬಸಿರವಂತಿಗೆ ಮಾಡ ತಕ್ಕ ಕ್ರಿಯೆಗಳೆಲ್ಲ ನಡೆದವು. ಆಕೆಯ ಬಯಕೆಗಳನ್ನು ಮಾಧವನು ಬಲು ಹರ್ಷದಿಂದ ಪೂರೈಸುತ್ತಿದ್ದನು. ಆಕೆಯ ಬಯಕೆ ಸಾಮಾನ್ಯ ಸ್ತ್ರೀಯರ ಬಯಕೆಯಂತೆ ಇದ್ದಿರಲಿಲ್ಲ. ಆಕೆ ಯಾವಾಗಲೂ ಬ್ರಹ್ಮಜ್ಞಾನದ

ವಾಕ್ಯಗಳನ್ನೇ ಉಚ್ಚರಿಸುತ್ತಿದ್ದಳು. ಇದೇ ಸ್ಥಿತಿಯಿಂದ ಅವಳ ಗರ್ಭಕ್ಕೆ ನವಮಾಸಗಳು ತುಂಬಿದವು. ನಂತರ ಒಂದು ಶುಭ ದಿವಸವಲ್ಲಿ ಅಂಬೆಯು ಗಂಡು ಮಗನನ್ನು ಹಡೆದಳು. ಅಂಬೆ–ಮಾಧವರೀರ್ವರಿಗೂ ಬಲು ಹರ್ಷ! ಅತಿ ಆನಂದ! ಮಗುವು ಜನಿಸಿದ ಕೂಡಲೆ ಪ್ರಣವೋಚ್ಚಾರ ಮಾಡಹತ್ತಿತು. ಎಲ್ಲರಿಗೂ ಆಶ್ಚರ್ಯ! ಮಾಧವನು ಬ್ರಾಹ್ಮಣರಿಂದ ಮಗುವಿನ ಜಾತಕರ್ಮ ಮಾಡಿಸಿದನು. ಜಾತಕವನ್ನು ನೋಡಿಸಿದನು. ಜನನಕಾಲದ ಲಗ್ನವನ್ನು ನಿರೀಕ್ಷಿಸಿ ಜ್ಯೋತಿಷಿಗಳು ಜಾತಕ ಲಕ್ಷಣಗಳನ್ನೂ ಭವಿಷತ್ ನಿರ್ಣಯವನ್ನೂ ಸಾರಿದರು. 'ಈ ಹುಡುಗನು ಕಾರಣಿಕ ಪುರುಷನಾಗುವನು, ಎಲ್ಲರಿಗೂ ಗುರುವಾಗುವನು, ಅನುಗ್ರಹ ದಾತಾರನಾಗುವನು, ಇವನ ವಾಕ್ಯಗಳು ಪ್ರಮಾಣೀಭೂತವಾಗುವವು, ಅಷ್ಟಸಿದ್ಧಿ–ನವನಿಧಿಗಳು ಇವನನ್ನು ಬೆಂಬಳಿಸುವವು, ಇವನಿಗೆ ಸತಿ–ಸುತರುಗಳ ಜೊಂಜಾಟವಿಲ್ಲ, ತ್ರೈಲೋಕ್ಯ ಪೂಜ್ಯನೆನ್ನಿಸುವನು. ಇವನ ಅಮೃತ ದೃಷ್ಟಿಯಿಂದ ಅಘಟಿತ ಘಟನೆಗಳೊದಗುವವು. ಮಾಧವ ಬ್ರಾಹ್ಮಣನೆ! ನಿಜವಾಗಿಯೂ ಇವನು ಅವತಾರಿಕ ಪುರುಷನು' ಎಂದು ಸಾರಿ ಆ ಜ್ಯೋತಿಷಿಗಳು ಆ ಮಗುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಜಾತನ ಲಕ್ಷಣಾದಿಗಳನ್ನು ಕೇಳಿ ತಾಯಿ–ತಂದೆ ಸಂತೋಷಭರಿತರಾದರು.

ಮಾಧವ ಬ್ರಾಹ್ಮಣನು ಲೌಕಿಕವನ್ನನುಸರಿಸಿ ನಾಮಕರಣ ಸಮಾರಂಭ ಮಾಡಿದನು. 'ಶಾಲಿಗ್ರಾಮದೇವ' ಎಂಬ ಜನ್ಮನಾಮದಿಂದಲೂ 'ನರಹರಿ' ಎಂಬ ಅಂಕಿತನಾಮದಿಂದಲೂ ಆ ಮಗುವಿಗೆ ನಾಮಕರಣಮಾಡಿದರು.

ತಾಯಿ–ತಂದೆಗಳು ನರಹರಿಯನ್ನು ಮಮತ್ವದಿಂದ ಸಂಗೋಪನ ಮಾಡಹತ್ತಿದರು. ಬಾಲಕನು ದಿನದಿನವೂ ಬೆಳೆದು ಒಂದು ವರ್ಷದವನಾದನು. ಅವನ ಮುಖದಿಂದ ಪ್ರಣವದ ಹೊರತು ಶಬ್ದಗಳೇ ಹೊರಡದಾದವು. ತಮ್ಮ ಮಗನು ಮೂಕನಾಗುವನೆಂಬ ಚಿಂತೆಯು ತಾಯಿ–ತಂದೆಗಳನ್ನು ಬಾಧಿಸಹತ್ತಿತು. ಅವನಿಗೆ ಬಾಯಿ ಬರಬೇಕೆಂದು ಕುಲದೇವತೆಯನ್ನು ಆರಾಧಿಸಿದರು. ಯಂತ್ರ–ಮಂತ್ರ–ತಾಯಿತಗಳ ಉಪಾಯ ಮಾಡಿದರು, ಅರಳೆಲೆಯಲ್ಲಿ ಉಣ್ಣಿಸಿದರು, ಏನೊಂದು ಉಪಾಯಮಾಡಿದರೂ ಸಾಧ್ಯವಾಗಲಿಲ್ಲ. ಪ್ರಣವದ ಹೊರತು ಅನ್ಯ ಶಬ್ದಗಳ ಉಚ್ಚಾರವಾಗಲೊಲ್ಲದು. ವಯಸ್ಸು ದಿನದಿನ ಹೆಚ್ಚಾಗಹತ್ತಿದವು. ಎಲ್ಲರೂ 'ಈ ಹುಡುಗನು ಮೂಕನು' ಎಂದು ನಿರ್ಧರ ವಾಕ್ಯವನ್ನಾಡಹತ್ತಿದರು. ತಾಯಿ–ತಂದೆಗಳು ತಾವು ಪುತ್ರಪ್ರಾಪ್ತಿಗಾಗಿ ಅನುಭವಿಸಿದ ಕಷ್ಟಗಳನ್ನು ನೆನಿನೆನಿಸಿ ತಮ್ಮ ಅದೃಷ್ಟವನ್ನು ದೂಷಿಸಹತ್ತಿಹರು. ತಾವು ಮಗನದೆಸೆಯಿಂದ ಮಾಡಿದ ವ್ರತ–ನೇಮಗಳು ನಿರರ್ಥಕವಾದವೆಂದು ಹಳಹಳಿಸಹತ್ತಿದರು. ಈ ಪರಿಸ್ಥಿತಿಯಿರುವಾಗಲೆ ನರಹರಿಗೆ ಏಳನೆಯ ವಯಸ್ಸು ಪ್ರಾಪ್ತವಾಯಿತು. ಉಪನಯನ ಕಾಲವೊದಗಿತು, ಇವನಿಗ ಗಾಯತ್ರಿ ಮಂತ್ರೋಪದೇಶವಾಗಬೇಕು. ಹುಟ್ಟಾ ಮೂಕನಾದ ಇವನಿಗೆ ಅದೆಂತು ಉಪನಯನ? ಅದೆಂತು ಮಂತ್ರೋಪದೇಶ? ಎಂದು ತಾಯಿ–ತಂದೆಗಳು ಆ ಮಗನನ್ನು ಮುಂದಿರಿಸಿಕೊಂಡು ಚಿಂತೆಮಾಡಹತ್ತಿದರು, ಆಗ ನರಹರಿಯು ತನ್ನ ತಾಯಿಯನ್ನು ತಟ್ಟಿ ಒಳಕ್ಕೆ ಹೋದನು, ಒಂದು ಕಬ್ಬಿಣದ ಕಂಬಿಯನ್ನು ತಾಯಿಯ ಕೈಯಿಂದ ತರಿಸಿಅದನ್ನು ತನ್ನ ಅಮೃತದೃಷ್ಟಿಯಿಂದ ನೋಡಿದನು, ಕೂಡಲೇ ಆ ಕಬ್ಬಿಣವು ಬಂಗಾರವಾಯಿತು, ತಾಯಿ ನೋಡಿ ಚಕಿತಳಾದಳು. ತನ್ನ ಗಂಡನನ್ನು ಕರೆದು ತೋರಿಸಿದಳು. ಆಗ

ಅವರಿಗೆ ತಮ್ಮ ಮಗನು ಸಾಮಾನ್ಯನಲ್ಲ. ಸಾಕ್ಷಾತ್ ದೇವನೇ ಎಂದು ನಂಬಿ ಅವನಿಗೆ ನಮಸ್ಕರಿಸಿದರು. ಈ ಸಂಗತಿಯನ್ನು ಅವರು ಗೌಪ್ಯವಾಗಿ ಇಟ್ಟುಕೊಂಡು ಮಗನ ಉಪನಯನದ ಸಿದ್ಧತೆ ನಡೆಯಿಸಿದರು. ಜನರೆಲ್ಲ– 'ಇವರು ಮೂಕನ ಮುಂಜೀ ಮಾಡಿ ಅವನಿಗೆ ಗಾಯತ್ರಿ ಉಪದೇಶ ಹೇಗೆ ಮಾಡುವರೋ ಏನೋ' ಎಂದು ಧಿಕ್ಕಾರ ನುಡಿಗಳನ್ನಾಡಹತ್ತಿದರು. ಆದರೂ ತಾಯಿ–ತಂದೆಗಳು ಒಳ್ಳೆ ಹರ್ಷದಿಂದ ಹಂದರ ಹಾಕಿಸಿದರು, ಆಪ್ತೇಷ್ಟರನ್ನು ಕರೆಯಿಸಿದರು, ಸಾಮಾನ ಸಿದ್ಧತೆ ಮಾಡಿದರು. ಮಾಧವನು ಮುಂಜಿಯ ಮುಹೂರ್ತ ಗೊತ್ತುಪಡಿಸಿ ವಿದ್ವಾನ್ ಬ್ರಾಹ್ಮಣರನ್ನೂ ಇನ್ನಿತರ ಬ್ರಾಹ್ಮಣರನ್ನೂ ಆಮಂತ್ರಿಸಿದನು.

**ಉಪನಯನ ವಿಧಿಯ ಅಂಗಗಳಾದ ಚೌಲಕರ್ಮ, ಸಹಭೋಜನ, ಯಜ್ಞೋಪವೀತಧಾರಣ, ಮೌಂಜೀ ಬಂಧನಗಳಾದವು.** ಇವೆಲ್ಲ ಸಂದರ್ಭಗಳಲ್ಲಿ ವಟುವಿನ ಮುಖದಿಂದ ಒಂದೂ ಶಬ್ದ ಹೊರಡಲಿಲ್ಲ. ನಂತರ ತಂದೆಯು ಗಾಯತ್ರಿ ಮಂತ್ರೋಪದೇಶ ಮಾಡಿದನು. ಅದು ಗುಪ್ತವಾಗಿ ನಡೆಯುವ ವಿಧಿಯಾದುದರಿಂದ ಯಾರೂ ಆಕ್ಷೇಪವೆತ್ತಲಿಲ್ಲ. ಉಳಿದೆಲ್ಲ ವಿಧಿ ನಡೆದಾಗ 'ಮೂಕನ ವ್ರತಬಂಧ' ಎಂದು ಅಣಕವಾಡುತ್ತಲಿದ್ದರು. ಇಷ್ಟಾದ ನಂತರ— ಮಾತೃ ಭಿಕ್ಷೆ ನಡೆಯಿತು. ವಟುವಿನ ತಾಯಿಯು ಭಿಕ್ಷೆ ನೀಡಲು ಮುಂದೆ ಬಂದು— 'ಈ ಭಿಕ್ಷೆಯನ್ನು ಸ್ವೀಕರಿಸಿ ಋಗ್ವೇದವನ್ನು ಉಚ್ಚರಿಸು' ಎಂದು ಭಿಕ್ಷೆ ಹಾಕಿ ಆಶೀರ್ವದಿಸಿದಳು. ಕೂಡಲೆ ವಟುವು ಜೋಳಿಗೆಯಲ್ಲಿ ಭಿಕ್ಷೆಯನ್ನು ಹಾಕಿಸಿಕೊಂಡು ಋಗ್ವೇದ ಮಂತ್ರವನ್ನು ಉಚ್ಚ

ಸ್ವರದಿಂದ ಪಠಿಸಹತ್ತಿದನು. ಸಮಗ್ರ ಏಳು ವರ್ಷಗಳ ವರೆಗೆ ಮಾತಾಡದೆ ಮೌನವಾಗಿದ್ದ ಬಾಲಕನು ಋಗ್ವೇದ ಮಂತ್ರ ಪಠಿಸುವದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು! ಇದು ವಟುವಿಗೆ ಪ್ರಥಮ ಭಿಕ್ಷೆ ಯಾಯಿತು. ನಂತರ ತಾಯಿಯು ಆವನಿಗೆ ದ್ವಿತೀಯ, ತೃತೀಯ ಭಿಕ್ಷೆಗಳನ್ನು ಹಾಕಿದಳು. ಆಗಲೂ ವಟುವು ಕ್ರಮವಾಗಿ ಯಜುರ್ವೇದ–ಸಾಮವೇದ ಮಂತ್ರವನ್ನು ಉಚ್ಚರಿಸಿದನು. ಎಲ್ಲರೂ ದಂಗಾದರು. 'ಇವನು ಕಾರಣಿಕ ಪುರುಷನು ಹಾಗು ದೇವನ ಅವತಾರಿಯು' ಎಂದು ಎಲ್ಲರೂ ಮಾತಾಡಹತ್ತಿದರು.

ಇಷ್ಟಾದ ಬಳಿಕ ವಟು ನರಹರಿಯು ತಾಯಿಯನ್ನು ಕುರಿತು— 'ತಾಯಿ! ನೀನು ನನಗೆ 'ಭಿಕ್ಷೆ ಬೇಡು' ಎಂದು ಉಪದೇಶ ಮಾಡಿದಿ, ನಿನ್ನ ವಚನವು ಮಿಥ್ಯೆಯಲ್ಲ, ನಾನು ಭಿಕ್ಷೆಗಾಗಿ ಹೊರಡುವೆನು' ಎಂದು ಸಿದ್ಧನಾಗಿ ನಿಂತನು. ಅದನ್ನು ನೋಡಿ ತಾಯಿಯು ವ್ಯಥೆಪಡಹತ್ತಿದಳು. ಆಕೆ ಮಗನನ್ನು ಕುರಿತು— 'ಮಗನೇ! ನಿನ್ನಿಂದ ನಾವು ರಕ್ಷಣೆಯಾಗುವ ಆಸೆ ತಾಳಿದ್ದೆವು. ಈಗ ನಮ್ಮನ್ನು ಬಿಟ್ಟು ಹೋಗುವಿ–' ಇತ್ಯಾದಿಯಾಗಿ ನುಡಿದು ತನ್ನ ಅಸಮ್ಮತಿ ತೋರಿಸಿದಳು. ಆದರೂ ಅವನು ತಾಯಿಯನ್ನು ಕುರಿತು— 'ನಾನು ಸನ್ಯಾಸಿಯು, ಸಂಸಾರದಿಂದ ಅಲಿಪ್ತನು. ತೀರ್ಥಯಾತ್ರೆಗೆ ಸಂಚರಿಸುವೆನು. ನನ್ನಿಂದ ಮುಂದೆ ಹಲವು ಕಾರ್ಯಗಳಾಗಬೇಕಾಗಿದೆ. ಇದನ್ನೆಲ್ಲ ಗೌಪ್ಯವಾಗಿಟ್ಟುಕೊಂಡು ತಪಸ್ಸಿಗಾಗಿ ನನಗೆ ಹೊರಡಲು ಅಪ್ಪಣೆ ಕೊಡು' ಎಂದನು, ಆದರೂ ತಾಯಿಯು ಕೇಳದೆ ಅವನನ್ನು ಕುರಿತು—

'ಮಗನೇ ಚಿಕ್ಕ ಪ್ರಾಯದಲ್ಲಿ ತಪಸ್ಸು ಆಚರಿಸಬೇಕೆಂದು ಅದಾವ ಶಾಸ್ತ್ರದಲ್ಲಿ ಹೇಳಿದೆ?

ಧರ್ಮಶಾಸ್ತ್ರಕ್ಕನುಸರಿಸಿ ಕ್ರಮವಾಗಿ ನಾಲ್ಕೂ ಆಶ್ರಮಗಳನ್ನು ಆಚರಿಸಬೇಕು. ಅಂದರೆ ಮೊದಲು ಹನ್ನೆರಡು ವರುಷಗಳನ್ನು ಬ್ರಹ್ಮಚರ್ಯಾಶ್ರಮದಲ್ಲಿ ಕಳೆದು ನಂತರ ಗೃಹಸ್ಥಾಶ್ರಮಿಯಾಗಬೇಕು. ಈ ಆಶ್ರಮವು ಹೆಚ್ಚಿನ ಪುಣ್ಯ ಹಾಗು ಸುಖದಾಯಕವಾಗಿರುವದು. ಈ ಆಶ್ರಮ ಮುಗಿದ ಮೇಲೆ ವಾನಪ್ರಸ್ಥ-ಸನ್ಯಾಸಗಳನ್ನು ಸ್ವೀಕರಿಸಬೇಕು. ಗೃಹಸ್ಥಾಶ್ರಮದಲ್ಲಿ ಯಜ್ಞಾದಿ ಕರ್ಮ ಸಾಧಿಸಿಕೊಂಡು ಸನ್ಯಾಸ ಸ್ವೀಕರಿಸುವದು ನ್ಯಾಯವು. ಇದನ್ನು ಬಿಟ್ಟು ಈ ಚಿಕ್ಕತನದಲ್ಲಿ ಸನ್ಯಾಸ ಸ್ವೀಕರಿಸುವದು ಅಗ್ರಾಹ್ಯವು. ಇಂದ್ರಿಯಗಳನ್ನೆಲ್ಲ ತೃಪ್ತಿಗೊಳಿಸಿ ಮನೋವಾಸನೆಯನ್ನು ಪೂರೈಸಬೇಕು ಬಳಿಕ ತಪಸ್ಸಿನ ಮಾರ್ಗ ಹಿಡಿಯಬೇಕು" ಎಂದು ಹೇಳಲು ನರಹರಿಯು ತನ್ನ ತಾಯಿಗೆ ತತ್ವೋಪದೇಶ ಮಾಡಹತ್ತಿದನು" ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

---o---

# ೧೨ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು ನರಹರಿಯು ತಾಯಿಗೆ ಬೋಧಿಸಿದ ತತ್ವೋಪದೇಶ ಹೇಳಹತ್ತಿದನು.

"ಶ್ರೀಗುರು ನರಹರಿಯು ತಾಯಿಯನ್ನು ಕುರಿತು— 'ತಾಯಿ ! ಇನ್ನು ಹೊರಡುವದಕ್ಕೆ ನಮಗೆ ಅಪ್ಪಣೆ ಕೊಡು. ಈ ಶರೀರವು ಅನಿತ್ಯವಾದದ್ದು, ಅದಕ್ಕೆ ಜೀವಿತ್ವದ ಭರವಸೆಯಿಲ್ಲ. ಚಿರಂಜೀವನು ಮಾತ್ರ ದೇಹ ವೈಭವವನ್ನು ನೆಚ್ಚಬಹುದು. ಈ ದೇಹವು ಕ್ಷಣಭಂಗುರವಾದದ್ದು. ಯಾವದೂ ಸ್ಥಿರವಿಲ್ಲ, ಶರೀರವು ಗಟ್ಟಿಮುಟ್ಟ ಇರುವವರೆಗೆ ಪುಣ್ಯಮಾರ್ಗದಲ್ಲಿ ಸುತ್ತಾಡಬೇಕು. ಮೃತ್ಯುವನ್ನು ಗೆಲ್ಲಲು ಸಾಮರ್ಥ್ಯವಿದ್ದವನು ಶರೀರವು ನಿತ್ಯವೆಂದು ತಿಳಿಯುವನು. ಆಯುಷ್ಯವು ಸತತವೂ ಕಡಿಕಡಿಮೆಯಾಗುತ್ತಲೇ ಇರುವದು. ಇದನ್ನರಿತು ಪೂರ್ವವಯಸ್ಸಿನಲ್ಲಿಯೇ ಧರ್ಮಸಂಗ್ರಹಿಸಿಕೊಳ್ಳಬೇಕು. ರವಿರಥದ ಗತಿಯಂತೆ ಆಯುಷ್ಯವು ಕ್ಷೀಣವಾಗುತ್ತ ಹೋಗುವದು. ಮಾನವನು ಅಲ್ಪಾಯುಷಿಯು. ಜೀವನು ಸುರಸವಾಗಿರುವಾಗಲೇ ಧರ್ಮಗಳಿಸಿಕೊಳ್ಳಬೇಕು. ಶರೀರವು ಸ್ಥಿರವಲ್ಲವೆಂದ ಮೇಲೆ ಅದಕ್ಕೆ ಸಂಬಂಧಿಸಿದ ಯೌವನಾದಿ ಸ್ಥಿತಿ–ಗತಿಗಳೂ ಅಸ್ಥಿರವು. ದೇಹಕ್ಕೆ ಮೃತ್ಯುವಿರುವದೆಂದ ಮೇಲೆ ದೇಹದಮೇಲೆ ವಿಶ್ವಾಸ ವಿಡುವದೇಕೆ ? ಶರೀರವು ಎಂದು ಬೀಳುವದೆಂಬವರ ಲೆಕ್ಕವು ಯಮನಿಗೇ ಗೊತ್ತು. ಪ್ರವಾಹ ಜಲವು ಸಾಗರ ಸೇರಿದ ನಂತರ ಹಿಂದಿರುಗದಂತೆ ಕಳೆದು ಹೋದ ಆಯುಷ್ಯವು ಮತ್ತೆ ಬರಲಾರದು. ಇದು ತಿಳಿದರೂ ಪುಣ್ಯಮಾಡದ ಮಾನವನು ಪಶುಸಮಾನನು. ಪುಣ್ಯವನ್ನಾರ್ಜಿಸದ ದಿವಸವು ನಿರರ್ಥಕ ದಿನವೆಂದು ತಿಳಿಯು

ಬೇಕು. ಮೊಸಳೆಯು ಮನುಷ್ಯನನ್ನು ಎಳೆದೊಯ್ದು ಭಕ್ಷಿಸುವಂತೆ ವಾರ್ಧಿಕ್ಯವು ಶರೀರವನ್ನು ಭಕ್ಷಿಸುವದು. ಆದ್ದರಿಂದ ಬುದ್ಧಿವಂತನು ತರುಣನಿರುವಾಗಲೇ ಪುಣ್ಯಮಾಡಬೇಕು. ಯಮನು ತನ್ನ ಮನಬಂದಂತೆ ವರ್ತಿಸುವ ಹಟವಾದಿಯು. ಯಮನಿಗೆ ಬೆದರದ ಅಮರನು ಸುಭಟನು. ಸಂಸಾರವು ಸ್ವಪ್ನಸದೃಶವು, ಮಿಂಚಿನ ಮಿನುಕು ತೋರಿ ಮರೆಯಾಗುವಂತೆ ದೇಹವು ಗುಪ್ತವಾಗುವದು, ಸ್ಥಿರವಾಗಿ ಉಳಿಯುವದಲ್ಲ."

ಈ ಪ್ರಕಾರ ನರಹರಿಯು ತಾಯಿಗೆ ತತ್ತ್ವೋಪದೇಶ ಮಾಡಿದನು. ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು. ಮಗನ ಬೋಧೆ ಶ್ರವಣ ಮಾಡಿ ತಾಯಿಯು ಅವನಿಗೆ ನಮಸ್ಕರಿಸಿದಳು. ಆಕೆ ಮಗನನ್ನು ಕುರಿತು— "ನನಗೆ ನಾಲ್ವರು ಮಕ್ಕಳಾಗುವರೆಂದು ನೀನು ಗತಜನ್ಮದಲ್ಲಿ ಹೇಳಿರುವಿ. ನಿದಾನ ಒಂದು ಕೂಸು ನನ್ನಿಂದ ಜನಿಸುವ ವರೆಗಾದರೂ ನೀನು ಇಲ್ಲಿ ಇರು. ನಂತರ ನಿನಗೆ ಹೋಗಲು ಅಪ್ಪಣೆ ಕೊಡುವೆ. ಇದು ನಿಶ್ಚಯವು" ಎಂದು ಹೇಳಿದಳು. ಮತ್ತು ಆಕೆಯು— 'ಮಗನೇ! ಇದಕ್ಕೂ ಮೀರಿ ನೀನು ಹೋದ ಪಕ್ಷದಲ್ಲಿ ನಾನು ಪ್ರಾಣಕೊಡುವೆನು, ನೀನು ನಮ್ಮ ಮಗನಲ್ಲ. ನಮ್ಮ ಕುಲದೇವತೆಯೆಂದು ಭಾವಿಸಿರುವೆವು" ಎಂದಳು. ಆ ಮಾತಿಗೆ ನರಹರಿಯು ನಗುತ್ತ— "ಅಡ್ಡಿಯಿಲ್ಲ, ನಿನಗೆ ಇಬ್ಬರು ಮಕ್ಕಳು ಹುಟ್ಟುವದು ನಿಶ್ಚಯವು. ಅದುವರೆಗೆ ಇಲ್ಲಿ ಇರುವೆನು. ಆ ನಂತರ ನಾನು ನಿನ್ನ ಅಪ್ಪಣೆ ಕೇಳದೆ ಹೋಗುವೆನು. ಒಂದೇ ವರ್ಷ ಮಾತ್ರ ಇರುವೆನು" ಎಂದು ಹೇಳಿ ಗುರುವು ಹೊರಡುವದನ್ನು ಬಿಟ್ಟು ಮನೆಯಲ್ಲಿ ಇರಹತ್ತಿದನು. ತಾನು ಏಳು ವರ್ಷದ ಬಾಲಕನಾದರೂ ಶಿಷ್ಯವರ್ಗಕ್ಕೆ ವೇದಾಭ್ಯಾಸ ಹೇಳುತ್ತ

ತಾನು ತೆರಳುವ ಕಾಲ ನಿರೀಕ್ಷಿಸಹತ್ತಿದನು. ಹೀಗಿರಲು ಅಲ್ಪ ಕಾಲದಲ್ಲಿ ಅವನ ತಾಯಿಯು ಗರ್ಭಿಣಿಯಾದಳು. ಆಕೆಯ ಆನಂದಕ್ಕೆ ಎಣೆಯಿಲ್ಲದಾಯಿತು. ನವಮಾಸ ಪೂರ್ಣವಾಗಲು ಆವಳು ಅವಳಿ-ಜವಳಿ ಗಂಡು ಮಕ್ಕಳನ್ನು ಹಡೆದಳು. ಗುರುಗಳ ಆಶೀರ್ವಚನ ಸತ್ಯವಾಯಿತು.

ಅಂಬೆಗೆ ಈ ಮಕ್ಕಳು ಹುಟ್ಟಿ ಹದಿನೈದು ತಿಂಗಳಾದವು. ಒಂದು ದಿನ ತಾಯಿಯು ಕೂಸುಗಳನ್ನಾಡಿಸುತ್ತ ಕುಳಿತಿದ್ದಳು. ನರಹರಿಯು ಅಲ್ಲಿಗೆ ಬಂದು— 'ತಾಯಿ! ನಿನ್ನ ಇಚ್ಛೆ ಸಫಲವಾಯಿತು. ಪೂರ್ಣಾಯುಷಿ ಮಕ್ಕಳು ಹುಟ್ಟಿದವು. ಇನ್ನೂ ಇಬ್ಬರು ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ನಿನಗೆ ಹುಟ್ಟುವರು. ನಿಮ್ಮ ವಾಸನೆ ಪೂರ್ಣವಾದಂತಾಯಿತು. ಇನ್ನು ನನಗೆ ನಿರೋಪ ಕೊಡಬೇಕು" ಎಂದನು. ತಾಯಿ-ತಂದೆಗಳು ಸಂತೋಷದಿಂದ ನಮಸ್ಕಾರ ಮಾಡಿ— "ಸ್ವಾಮಿ! ನಮಗೆ ಸ್ವರೂಪಜ್ಞಾನ ತಿಳಿಯದು. ಮಾಯಾಮೋಹದಿಂದ ನಿನ್ನ ಲಕ್ಷಣ-ಮಹಿಮೆಗಳನ್ನು ನಾವು ತಿಳಿಯಲಿಲ್ಲ. ಮಗನೆಂಬ ಮೋಹದಿಂದ ನಿನಗೆ ಬಿರುನುಡಿಗಳನ್ನಾಡಿದೆವು. ಊಟ-ಉಪಚಾರಗಳನ್ನು ಅಲಕ್ಷಿಸಿದೆವು, ನಮ್ಮನ್ನು ಕ್ಷಮಿಸಬೇಕು" ಎಂದು ಬೇಡಕೊಳ್ಳಹತ್ತಿದರು. ಮತ್ತು ಅವರು— "ಸ್ವಾಮಿ! ನೀನು ನಮ್ಮ ವಂಶೋದ್ಧಾರಕನು. ನಮ್ಮ ಪ್ರದೋಷ ಪೂಜೆಯು ಫಲಿಸಿತು, ಇನ್ನು ನಮಗೇನು ಗತಿ? ಇನ್ನು ಮುಂದೆ ನಿನ್ನ ದರ್ಶನ ನಮಗೆ ದುರ್ಲಭವೇ?" ಎಂದು ಕೇಳಲು ನರಹರಿಯು— "ಚಿಂತೆ ಬೇಡ. ನೀವು ನನ್ನನ್ನು ಸ್ಮರಿಸಿದಾಗಲೇ ನಾನು ನಿಮ್ಮ ಬಳಿಯಲ್ಲಿ ಇರುವೆನು" ಎಂದು ಅವರಿಗೆ ಭರವಸೆ ನೀಡಿದನು. ಮತ್ತೂ ಆತನು—

"ನಿಮಗೆ ಇನ್ನೂ ಮೂರು ಮಕ್ಕಳಾಗುವವು, ನಿಮ್ಮ ಮನೆಯಲ್ಲಿ ದೀನತೆಯು ಪ್ರವೇಶಿಸಲಾರದು, ತಾಯಿ! ನೀನು ಜನ್ಮಾಂತರದಲ್ಲಿ ಪ್ರದೋಷ ಪೂಜೆ ಮಾಡಿದ್ದರಿಂದ ನಿನ್ನ ಮನೆಯಲ್ಲಿ ಸಕಲ ಸಂಪತ್ತು ಸ್ಥಿರವಾಗಿಯೇ ಉಳಿಯುವದು. ಆ ಪೂಜೆಯಿಂದ ನಿಮಗೆ ಇಹಲೋಕದಲ್ಲಿಯ ಸೌಖ್ಯವೂ ಪರಲೋಕದಲ್ಲಿಯ ಗತಿಯೂ ನಿಶ್ಚಯವು. ನಿಮಗೆ ಪುನರ್ಜನ್ಮವಿಲ್ಲ. ನೀವು ಶಂಕರನನ್ನು ಆರಾಧಿಸಿದ್ದುದರಿಂದಲೇ ನಾನು ಅವತಾರ ತಾಳಬೇಕಾಯಿತು. ನಿಮ್ಮ ವಾಸನೆ ಪೂರ್ಣವಾಯಿತು. ನನಗೆ ನಿರೋಪ ಕೊಡಿಸಿ. ಇನ್ನು ಮೂವತ್ತು ವರ್ಷಗಳಿಗೆ ನಾನು ನಿಮಗೆ ದರ್ಶನ ಕೊಡುವೆನು. ಈಗ ನಾನು ಬದರೀವನಕ್ಕೆ ಹೋಗಿ ಸಿದ್ಧರ ದರ್ಶನ ಪಡೆಯುವೆನು" ಎಂದು ಹೇಳಿ ನಿರೋಪ ಸ್ವೀಕರಿಸಿದನು. ನಂತರ ಶ್ರೀಗುರು ನರಹರಿಯು ಅಲ್ಲಿಂದ ಹೊರಟನು. ತಾಯಿ-ತಂದೆಗಳೂ ಗ್ರಾಮವಾಸಿಗಳೂ ಬೀಳ್ಕೊಡಲು ಬಂದರು. ಚಿಕ್ಕವಯಸ್ಸಿನ ಬಾಲಕನು ತಪಸ್ಸಿಗೆ ಹೊರಟಿದುದು ಎಲ್ಲರಿಗೂ ಆಶ್ಚರ್ಯವಾಯಿತು. ನಿಜವಾಗಿಯೂ ಈತನು ಬಾಲಕನಲ್ಲ ಸಾಕ್ಷಾತ್ ಶಂಕರನು ಎಂದು ಎಲ್ಲರೂ ನುಡಿಯಹತ್ತಿದರು. ಎಲ್ಲರೂ ಆ ಗುರುವಿಗೆ ನಮಸ್ಕರಿಸಿದರು, ಸ್ತುತಿಸಿದರು, ಗ್ರಾಮದಿಂದ ಕೆಲ ದೂರ ಹೋಗಿ ಬೀಳ್ಕೊಟ್ಟು ಹಿಂದಿರುಗಿದರು. ತಾಯಿ-ತಂದೆ ಇವರಿಬ್ಬರು ಮಾತ್ರ ಮೋಹವಶರಾಗಿ ಇನ್ನಿಷ್ಟು ಮುಂದೆ ಹೋದರು. ಆಗ ಗುರುವು ಅವರಿಗೆ ನಿಲ್ಲ ಹೇಳಿದನು. ಮತ್ತು ಅವರಲ್ಲಿಯ ಮೋಹನಿವಾರಣೆಗಾಗಿ ಅವರಿಗೆ ತನ್ನ ನಿಜರೂಪ ತೋರಿಸಿದನು. ತಾಯಿ-ತಂದೆಗಳು ಸಾಕ್ಷಾತ್ ತ್ರಯಮೂರ್ತಿಯ ಸ್ವರೂಪ ಕಂಡರು. ತಮ್ಮ ಪುಣ್ಯ ಹೆಚ್ಚಿನದೆಂದು ಭಾವಿಸಿ ಆನಂದ ಹೊಂದಿದರು. ಮತ್ತು ಅವರು ಶ್ರೀಗುರುವಿನ ಪುನರ್ದರ್ಶನ ಅಪೇಕ್ಷಿಸಿ ನಮಸ್ಕರಿಸಿದರು. ಗುರುವು ಅವರಿಗೆ ಅಭಯ

ನೀಡಿ ಮುಂದೆ ಸಾಗಿದನು. ತಾಯಿ–ತಂದೆಗಳು ಹಿಂದಿರುಗಿದರು. ತಮ್ಮ ಮನೆಗೆ ಬಂದು ಸೇರಿದರು.

ಶ್ರೀವರದಮೂರ್ತಿ ನರಹರಿ ಗುರುವು ಹಾಗೇ ಉತ್ತರ ಪಂಥದಿಂದ ಸಾಗಿದನು. ಬದರೀವನಕ್ಕೆ ತಲುಪಿದನು, ಅಲ್ಲಿಂದ ಆನಂದ ಕಾನನ ಸೇರಿ ವಾರಾಣಸಿ ಕ್ಷೇತ್ರಕ್ಕೆ ಬಂದನು. ವಾರಾಣಸಿಯು ಅವಿಮುಕ್ತ ಕ್ಷೇತ್ರವು, ವಿಶ್ವೇಶ್ವರನ ಸ್ಥಾನವು. ತ್ರೈಲೋಕ್ಯದಲ್ಲಿ ಅನುಪಮ್ಯವಾಗಿದೆ. ಶ್ರೀಗುರು ಶಿರೋಮಣಿಯು ಅಲ್ಲಿ ನಿಂತು ಅನುಷ್ಠಾನ ಮಾಡಿದರು, ವಿಶ್ವೇಶ್ವರ ದರ್ಶನದಿಂದ ಆತ್ಮಾರಾಮನನ್ನು ಆರಾಧಿಸಿದರು. ಈ ಪ್ರಕಾರ ಕೆಲ ದಿನ ಕಳೆದು ಅಷ್ಟಾಂಗಯೋಗ ಸಹಿತ ತಪಸ್ಸು ಮಾಡಿದರು. ಆ ಕಾಶಿಯಲ್ಲಿ ಅದೆಷ್ಟೋ ಜನ ತಪಸ್ವಿಗಳಿದ್ದರು. ಅವರು ಹೊಸದಾಗಿ ಬಂದ ಶ್ರೀಗುರುವನ್ನು ನೋಡಿದರು. ಬಾಲತಪಸಿಯೆಂದು ಆಶ್ಚರ್ಯ ಪಟ್ಟರು. ಎಲ್ಲರೂ ಇವರ ಹತ್ತಿರ ಬಂದು ದರ್ಶನಪಡೆಯಹತ್ತಿದರು. ಆ ತಪಸ್ವಿಗಳಲ್ಲಿ 'ಕೃಷ್ಣ ಸರಸ್ವತಿ' ಎಂಬ ಹೆಸರಿನ ವೃದ್ಧ ಸನ್ಯಾಸಿಯಿದ್ದನು. ಅವನು ಈ ಬಾಲ ಸನ್ಯಾಸಿಯನ್ನು ಸ್ನೇಹಭಾವದಿಂದ ನಿರೀಕ್ಷಿಸುತ್ತಿದ್ದನು. ಕೃಷ್ಣಸರಸ್ವತಿಯು ಇನ್ನಿತರ ಎಲ್ಲ ತಪಸ್ವಿಗಳನ್ನು ಕುರಿತು— ''ಯತಿಗಳೇ! ಈ ಗುರು ನರಹರಿಯನ್ನು ನೀವು ಮಾನವ ಬ್ರಹ್ಮಚಾರಿಯೆಂದು ತಿಳಿಯಬೇಡಿರಿ. ನಿಜವಾಗಿಯೂ ಇವರು ಅವತಾರಿಕನೂ ಅತಿತಾಪಸಿಯೂ ಆಗಿರುವನು. ಇವನು ವಿಶ್ವವಂದ್ಯನಾಗಿ ತೋರುವನು. ನಾವೆಲ್ಲರು ಇವನಿಂದ ವಯಸ್ಸಿನ ಹಿರಿಯರಾದರೂ ಇವನಿಗೆ ವಂದಿಸಬೇಕು. ಮತ್ತು ಒತ್ತಾಯದಿಂದ ಇವನಿಗೆ ಸನ್ಯಾಸ ದೀಕ್ಷೆಯನ್ನು ಕೊಡಿಸಬೇಕು. ಕೇವಲ ಪರೋಪಕಾರಾರ್ಥವೆಂದೇ ಇವನಿಗೆ ಸನ್ಯಾಸ ದೀಕ್ಷೆ ಸ್ವೀಕರಿಸುವದಕ್ಕೆ ನಾವು ಇವನಿಗೆ

ಹೇಳಿಕೊಳ್ಳಬೇಕು" ಎಂದು ಹೇಳಿ ಎಲ್ಲ ತಪಸ್ವಿಗಳನ್ನು ಕೂಡಿಕೊಂಡು ಶ್ರೀಗುರು ನರಹರಿ ಗುರುಗಳು ಇರುವಲ್ಲಿಗೆ ಬಂದರು. ಅವರನ್ನು ವಂದಿಸಿದರು. 'ನೀವು ಸನ್ಯಾಸ ಸ್ವೀಕರಿಸಿ ನಮ್ಮನ್ನು ಉದ್ಧರಿಸಬೇಕು. ಹಾಗು ನಮ್ಮ ಪೂಜೆಯನ್ನು ಮನ್ನಿಸಬೇಕು' ಎಂದು ಪ್ರಾರ್ಥಿಸಿದರು. ಮತ್ತು ಅವರು— ಶ್ರೀಶಂಕರಾಚಾರ್ಯರಿಂದ ಪ್ರಸ್ಥಾಪಿತ ಸನ್ಯಾಸ ಮಾರ್ಗಸಿದ್ಧಾಂತವನ್ನು ನೀವೇ ಎತ್ತಿ ಹಿಡಿಯಬೇಕು. ಕಲಿ ಪ್ರಾಬಲ್ಯದಿಂದ ಈ ಮಾರ್ಗವು ಕುಂಮತ್ತ ಹೋಗಿದೆ. ನೀವು ಈ ಆಶ್ರಮವನ್ನು ಉದ್ಧರಿಸಿದರೆ ಲೋಕೋಪಕಾರವಾಗುವದು" ಎಂದು ಎಲ್ಲರೂ ಕೈಮುಗಿದು ತಮ್ಮ ಹವಣಿಕೆ-ಬೇಡಿಕೆಗಳನ್ನು ತಿಳಿಸಿದರು. ಗುರುಗಳು ಅವರೆಲ್ಲರ ಇಚ್ಛೆಯನ್ನು ಮನ್ನಿಸಿ ವೃದ್ಧರಾದ ಕೃಷ್ಣಸರಸ್ವತಿ ಸ್ವಾಮಿಯವರಿಂದ ಸನ್ಯಾಸ ದೀಕ್ಷೆಯನ್ನು ಅಂಗೀಕರಿಸಿಕೊಂಡರು. ಹಾಗು ಅಂದಿನಿಂದ 'ನರಸಿಂಹ ಸರಸ್ವತಿ' ಎಂಬ ಅಭಿದಾನದಿಂದ ಪ್ರಸಿದ್ಧತೆ ಹೊಂದಿದರು."

ನಾಮಧಾರಕನು ಸಿದ್ಧಮುನಿಯನ್ನು ಕುರಿತು— "ಸ್ವಾಮಿ ಕೃಷ್ಣಸರಸ್ವತಿಯವರ ಮೊದಲಿನ ಗುರುಗಳಾರು? ಈ ಗುರುಪೀಠ ಪೀಳಿಗೆ ಎಂತಿರುವದು?" ಎಂದು ಕೇಳಲು ಸಿದ್ಧಮುನಿಯು— "ನಾಮಧಾರಕಾ! ಗುರುಪೀಠದ ಆದ್ಯಗುರುವು. ಶ್ರೀಶಂಕರನು, ತದನಂತರ ವಿಷ್ಣು-ಬ್ರಹ್ಮ ಇವರು ಕ್ರಮವಾಗಿ ದ್ವಿತೀಯ-ತೃತೀಯ ಗುರುಗಳಾದರು. ಈ ತ್ರಯಮೂರ್ತಿಗಳ ತರುವಾಯದ ಗುರುಕ್ರಮವೆಂತಿರುವದೆಂದರೆ— ಬ್ರಹ್ಮನ ತರುವಾಯದ ಗುರುವಸಿಷ್ಠರು, ಅಲ್ಲಿಂದ ಶಕ್ತಿಯು, ಪರಾಶರರು, ವ್ಯಾಸರು, ಶುಕ್ರಾಚಾರ್ಯರು, ನಂತರ ಗೌಡಪಾದರು, ಗೋವಿಂದಾಚಾರ್ಯರು, ಆಮೇಲೆ ಶ್ರೀಮಚ್ಛಂಕರಾಚಾರ್ಯರು.

ತದನಂತರ ವಿಶ್ವರೂಪಾಚಾರ್ಯ ಜ್ಞಾನಬೋಧಗಿರಿಯಾಚಾರ್ಯ, ಸಿಂಹಗಿರಿಯಾಚಾರ್ಯ, ಈಶ್ವರತೀರ್ಥರು, ನೃಸಿಂಹತೀರ್ಥರು, ವಿದ್ಯಾತೀರ್ಥರು, ಶಿವತೀರ್ಥರು, ಭಾರತೀತೀರ್ಥರು ಹೀಗೆ ಗುರುಪೀಠ ನಡೆದ ನಂತರ ಮುಂದೆ ವಿದ್ಯಾರಣ್ಯ, ಶ್ರೀಪಾದಮುನಿ, ವಿದ್ಯಾತೀರ್ಥ ಇವರ ತರುವಾಯ— ಮಲಯಾನಂದ, ದೇವತೀರ್ಥ, ಸರಸ್ವತೀವೃಂದ. ಬಳಿಕ ಸರಸ್ವತೀಯಾದವೇಂದ್ರ, ಹೀಗೆ ಗುರುಪೀಠ ನಡೆದುಬಂದಿತು. ಈ ಸರಸ್ವತಿ ಯಾದವೇಂದ್ರರ ಶಿಷ್ಯರೇ 'ಕೃಷ್ಣಸರಸ್ವತಿ' ಇವರು. ಈ ಕೃಷ್ಣಸರಸ್ವತಿಯರ ಸನ್ಯಾಸಾವಧಿಕಾಲವು ಹೆಚ್ಚು. ಆದ್ದರಿಂದಲೇ ಈಗ ಅವರು ಎಲ್ಲ ಸನ್ಯಾಸಿಗಳಲ್ಲಿ ವರಿಷ್ಠರೆನ್ನಿಸುತ್ತಿದ್ದರು. ಇವರಿಂದಲೇ ಶ್ರೀಗುರುನಾಥರು ಆಶ್ರಮಸ್ವೀಕರಿಸಿ ಸನ್ಯಾಸ ಮಾರ್ಗಸ್ಥಾಪನೆಯ ಕಾರ್ಯವನ್ನೆತ್ತಿ ಹಿಡಿದರು. ಇವರೇ 'ನೃಸಿಂಹಸರಸ್ವತಿ ಗುರುವರ್ಯರು. ಕಾಶೀನಗರದಲ್ಲಿಯ ಎಲ್ಲ ವಿದ್ವಾಂಸರು ಸಮಸ್ತ ವೇದಗಳ ಅರ್ಥವನ್ನು ಹೇಳುತ್ತಲಿದ್ದ ಇವರನ್ನು ವಂದ್ಯರೆಂದು ನಿಶ್ಚಿತಭಾವನೆತಾಳಿದರು. ಕಾಶಿಯಲ್ಲಿ ಇವರು ಇದ್ದಾಗ ಇವರ ಕೀರ್ತಿಯು ವಿಸ್ತರಿಸಿತು. ಬಹು ಜನರು ಆ ವಾರಣಾಸಿಗೆ ಹೋಗಿ ಶ್ರೀ ನೃಸಿಂಹಸರಸ್ವತಿಯವರ ಸೇವೆಕೈಕೊಳ್ಳುತ್ತಲಿದ್ದರು.

ಬಳಿಕ ಗುರುಗಳು ಕಾಶಿಯಿಂದ ಹೊರಟರು. ಶಿಷ್ಯರೊಂದಿಗೆ ಬದರಿಗೆ ಬಂದರು, ಮೇರುಗಿರಿಯನ್ನು ಬಲಮಾಡಿಕೊಂಡು ಪ್ರದಕ್ಷಿಣೆ ಹಾಕಿ ನವಖಂಡ ಪೃಥ್ವಿಯನ್ನೂ ಎಲ್ಲ ತೀರ್ಥಗಳನ್ನೂ ಸುತ್ತಾಡಿದರು. ಹೀಗೆ ಶಿಷ್ಯಸ್ತೋಮದೊಡನೆ ಪೃಥ್ವಿಪ್ರದಕ್ಷಿಣೆ ಮಾಡಿ ಗಂಗಾಸಾಗರಕ್ಕೆ ಬಂದರು, ಅಲ್ಲಿಂದ ತಟಾಕಯಾತ್ರೆ, ಮುಗಿಸಿ ಪ್ರಯಾಗಕ್ಕೆ ಬಂದರು. ಆ ಪ್ರಯಾಗದಲ್ಲಿ ಶ್ರೀಗುರುಗಳು ಇರುತ್ತಿರುವಾಗ ಅಲ್ಲಿಗೆ 'ಮಾಧವ'

ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ಬಂದನು. ಗುರುಗಳು ಆ ಮಾಧವ ಬ್ರಾಹ್ಮಣನಿಗೆ ಬ್ರಹ್ಮಜ್ಞಾನವನ್ನು ಉಪದೇಶಮಾಡಿದರು, ಹಾಗು ಅವನಿಗೆ ಚತುರ್ಥಾಶ್ರಮದ ದೀಕ್ಷೆ ಕೊಟ್ಟರು. ಅವನಿಗೆ 'ಮಾಧವ ಸರಸ್ವತಿ' ಎಂದು ಹೆಸರನ್ನಿಟ್ಟು ಅವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು."

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

## ೧೩ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು— "ಸ್ವಾಮಿ! ನೀವು ಧರ್ಮಾರ್ಥವನ್ನು ಬೋಧಿಸಿದಿರಿ. ಅದರಿಂದ ನನ್ನ ಸ್ವಾರ್ಥವೇ ಹೆಚ್ಚಾಯಿತು. ನನ್ನಲ್ಲಿ ಪರಮಾರ್ಥ ಜನ್ಮಿಸಿತು. ಹಾಗು ಗುರುಭಜನೆಯ ರುಚಿಯು ನಿರಂತರ ಸ್ಥಿರಗೊಂಡಿತು. ಪ್ರಯಾಗದಲ್ಲಿ 'ಮಾಧವ ಸರಸ್ವತಿ' ಯತಿಗೆ ದೀಕ್ಷೆ ನೀಡಿದ ನಂತರ ಮುಂದೇನು ಸಂಗತಿಯೊದಗಿತು?" ಹೇಳುವದಾಗಬೇಕು ಎನ್ನಲು ಸಿದ್ಧಮುನಿಯು— "ನಾಮಧಾರಕಾ! ಗುರುಗಳು ಮಾಧವಸರಸ್ವತಿಗೆ ಸನ್ಯಾಸ ದೀಕ್ಷೆ ಕೊಟ್ಟ

ಬಳಿಕ ಕೆಲವು ದಿವಸಗಳ ವರೆಗೆ ಆ ಪ್ರಯಾಗದಲ್ಲಿಯೇ ಇದ್ದರು. ಈ ಅವಧಿಯಲ್ಲಿ ಅವರಿಗೆ ಬಹು ಜನ ಶಿಷ್ಯರಾದರು. ಅವರಲ್ಲಿ ಇವರಿಂದ ದೀಕ್ಷೆ ಪಡೆದ ಮಾಧವ ಸರಸ್ವತಿಯೇ ಮುಖ್ಯನು. ಇವನ ಹೊರತು ಉಳಿದ ಶಿಷ್ಯರದೊಂದು ಗುಂಪು ಇದ್ದಿತು. ಅವರು ಯಾರೆಂದರೆ— ಬಾಲಸರಸ್ವತಿ, ಕೃಷ್ಣಸರಸ್ವತಿ, ಉಪೇಂದ್ರ ಮಾಧವ ಸರಸ್ವತಿ, ಸದಾನಂದ ಸರಸ್ವತಿ, ಜ್ಞಾನಜ್ಯೋತಿ ಸರಸ್ವತಿ, ಹಾಗು ಸಿದ್ಧನೆನ್ನಿಸುವ ನಾನೊಬ್ಬನು. ಈ ಏಳೂ ಜನರು ಶ್ರೀಗುರುಗಳ ಪ್ರೀತಿಗೆ ಪಾತ್ರರಾಗಿದ್ದೆವು. ಗುರುಗಳು ಈ ಸಪ್ತಶಿಷ್ಯರಿಂದೊಡಗೂಡಿ ದಕ್ಷಿಣಾಪಥದ ತೀರ್ಥಾಟನ ಕೈಕೊಂಡರು. ಮಾರ್ಗದಲ್ಲಿಯ ಸಮಸ್ತ ಕ್ಷೇತ್ರಗಳನ್ನು ಪವಿತ್ರಗೊಳಿಸಿ ಗುರುಗಳು ತಮ್ಮ ಪೂರ್ವಾಶ್ರಮದ ಗ್ರಾಮವಾದ ಕರಂಜನಗರಕ್ಕೆ ಬಂದಿಳಿದರು. ತಾಯಿ–ತಂದೆಗಳಿಗೂ ನಾಲ್ವರು ಸಹೋದರ ಹಾಗು ಒಬ್ಬ ಸಹೋದರೆಗೂ ದರ್ಶನಕೊಟ್ಟರು. ಗ್ರಾಮವಾಸಿಗಳು ಒಟ್ಟಾಗಿ ಬಂದು ಗುರುಮೂರ್ತಿಯ ದರ್ಶನ ಪಡೆದು ಆನಂದಹೊಂದಿದರು. ಎಲ್ಲರಿಂದಲೂ ಗುರುಗಳು ಪೂಜೆ–ಭಕ್ತಿಗಳನ್ನು ಸ್ವೀಕರಿಸಿದರು. ತಾಯಿಯು ಗುರುಗಳ ಪೂಜೆ ಮಾಡುತ್ತಿರುವಾಗ ಆಕೆಗೆ ಶ್ರೀಪಾದ ಯತಿಗಳ ಸ್ಮರಣೆಯುಂಟಾಯಿತು. ತನಗುಂಟಾದ ಪೂರ್ವ ಜನ್ಮದ ಸ್ಮೃತಿಯನ್ನು ಆಕೆ ಗಂಡನಿಗೆ ಹೇಳಿದಳು. ಇಬ್ಬರೂ ಶ್ರೀಗುರುಗಳ ಹಿಂದಿನ ಹಾಗು ಇಂದಿನ ಅವತಾರಗಳನ್ನು ಹೃದಯದಿಂದ ಕಾಣುತ್ತ ನಮಸ್ಕರಿಸಿದರು. ಗುರುಗಳು ಅವರಿಗೆ ಸನ್ಯಾಸತ್ವ ಮಹತ್ವ ಹೇಳಿ— 'ಸನ್ಯಾಸಿಯ ದೀಕ್ಷೆಯನ್ನು ಕೈಕೊಂಡವನ ಮನೆತನದ ನಾಲ್ವತ್ತೆರಡು ಪೀಳಿಗೆಗಳು ಉದ್ಧೃತವಾಗುವವು. ಇದಕ್ಕನುಸರಿಸಿ ನಾನು ಸನ್ಯಾಸಿಯಾದುದರಿಂದ ನಿಮ್ಮ ವಂಶವು ಪೂರ್ಣ ಉದ್ಧಾರವಾಯಿತು' ಎಂದು ಹೇಳಿದರು. ಮತ್ತು ಅವರು—

ನಿಮ್ಮ ಪುತ್ರರು ಶತಾಯುಗಳಾಗುವರು, ಅಷ್ಟೈಶ್ವರ್ಯ ಭೋಗಿಗಳಾಗುವರು, ನೀವು ಮಕ್ಕಳು ಮೊಮ್ಮಕ್ಕಳನ್ನು ಕಂಡು ಕಾಶೀ ಕ್ಷೇತ್ರದಲ್ಲಿ ಇಹಜನ್ಮ ತೀರಿಸಿಕೊಳ್ಳುವಿರಿ. ಆ ಕಾಶೀ ಪಟ್ಟಣವು ಮುಕ್ತಿಸ್ಥಾನವೆನ್ನಿಸಿದೆ, ನೀವು ಎಷ್ಟು ಮಾತ್ರವೂ ಚಿಂತೆ ಮಾಡಬೇಡಿರಿ' ಎಂದು ಹೇಳಿದರು. ಬಳಿಕ ಅವರ ಪೂರ್ವಾಶ್ರಮದ ಸಹೋದರಿಯಾದ ರತ್ನಾಯಿಯು ಬಂದು ನಮಸ್ಕರಿಸಿ— ನನ್ನನ್ನು ಉದ್ಧರಿಸಿರಿ, ಭವಸಾಗರದಲ್ಲಿ ಸಂಸಾರ ಮಾಯೆಯಿಂದ ಬಳಲುತ್ತಿರುವೆ. ನಾನೂ ತಪಕ್ಕಾಗಿ ಹೋಗುವೆನು" ಎಂದೆನ್ನಲು ಗುರುಗಳು— "ರತ್ನಾಯಿ! ಸ್ತ್ರೀಯಳಿಗೆ ಪತಿಸೇವೆಯಿಂದ ಮೋಕ್ಷಪದ ಪ್ರಾಪ್ತವಾಗುವದು ಈ ನಿನ್ನ ವಿಚಾರವು ಸರಿಯಲ್ಲ" ಎಂದು ಹೇಳಿದರು. ಮತ್ತೆ ಆಕೆಯು— "ಗುರುಸ್ವಾಮಿಯೆ! ನನ್ನ ಪ್ರಾರಬ್ಧವೆಂತಿರುವದು?" ಎಂದು ಪ್ರಶ್ನೆ ಮಾಡಲು ಗುರುಗಳು— "ರತ್ನಾಯಿ! ಗತಜನ್ಮದಲ್ಲಿ ನೀನು ಗೋಮಾತೆಯನ್ನು ಒದೆದಿ. ನೆರೆ ಮನೆಯ ಗಂಡಹೆಂಡಿರಲ್ಲಿ ಕಲಹವನ್ನುಂಟು ಮಾಡಿದಿ. ಈ ದೋಷಗಳಿಗಾಗಿ ನೀನು ಈ ಜನ್ಮದಲ್ಲಿ ಅನೇಕ ಪೀಡೆಗಳಿಗೆ ಒಳಗಾಗುವಿ. ಆಕಳನ್ನು ಒದೆದುದರ ಪರಿಣಾಮವಾಗಿ ನಿನಗೆ ನಿನ್ನ ಇಳಿವಯಸ್ಸಿನಲ್ಲಿ ಮೈ ತುಂಬಾ ಬಿಳುಪಿನ ರೋಗ ಅಂಟುವದು. ಸತಿ–ಪತಿಯರಲ್ಲಿ ಜಗಳ ಹಚ್ಚಿದ ನೀನು ಈ ಜನ್ಮದಲ್ಲಿ ನಿನ್ನ ಗಂಡನಿಂದ ಅಗಲಬೇಕಾಗುವದು. ಅಂದರೆ ನಿನ್ನ ಗಂಡನು ಬೈರಾಗಿಯಾಗಿ ಹೋಗುವನು. ಈ ಪೂರ್ವ ವಯದಲ್ಲಿಯೇ ನಿನಗೆ ಸುಖ. ಅಪರ ವಯಸ್ಸಿನಲ್ಲಿ ಮೇಲೆ ಹೇಳಿದಂಥ ಪೀಡೆಗಳನ್ನು ಅನುಭವಿಸುವಿ— ನಿನ್ನ ದೇಹವು ನಾಶವಾದಮೇಲೆ ನನ್ನ ದರ್ಶನವು ನಿನಗಾಗುವದು ಆಗ ನಿನ್ನ ಪಾಪಗಳು ದಗ್ಧವಾಗಿ ಹೋಗುವವು. ನನ್ನ ಭೆಟ್ಟಿಯು ನಿನಗೆ ಅದಾವಲ್ಲಿ ಆಗುವದೆಂದರೆ— ದಕ್ಷಿಣ ದೇಶದಲ್ಲಿ ಭೀಮಾನದಿಯು

ಹರಿದಿದೆ, ಅದರಲ್ಲಿ ಪಾಪವಿನಾಶವೆಂಬ ತೀರ್ಥವಿರುವದು. ನಿನಗೆ ದುರವಸ್ಥೆಯೊದಗಿದ ಕೂಡಲೆ ನೀನು ಅಲ್ಲಿಗೆ ಹೋಗು. ಅಲ್ಲಿಯೇ ಅಮರಜಾ ಸಂಗಮದ ಹತ್ತಿರ ಗಾಣಗಾಪುರ ಎಂಬ ಪ್ರಸಿದ್ಧ ಸ್ಥಾನವಿದೆ." ಇಷ್ಟೆಲ್ಲವನ್ನು ಗುರುಗಳು ರತ್ನಾಯಿಗೆ ಹೇಳಿದರು. ಹಾಗು ತಾವು ಶಿಷ್ಯರಿಂದೊಡಗೂಡಿ ದಕ್ಷಿಣ ಕಡೆಗೆ ಸಾಗಿದರು ಪ್ರಸಿದ್ಧವಾದ ತ್ರ್ಯಂಬಕ ಕ್ಷೇತ್ರಕ್ಕೆ ಬಂದಿಳಿದರು. ಆ ತ್ರ್ಯಂಬಕ ತೀರ್ಥದಲ್ಲಿಯೇ ಗೌತುಮಿ (ಗೋದಾವರಿ) ನದಿಯ ಉಗಮವಾಗಿದೆ. ಗುರುಗಳು ಅಲ್ಲಿಂದ ನಾಸಿಕ ಕ್ಷೇತ್ರಕ್ಕೆ ಬಂದರು. ಅಲ್ಲಿಯ ತೀರ್ಥ ಮಹಿಮೆ ಪುರಾಣ ಪ್ರಸಿದ್ಧವಿದೆ. ಆ ಗೌತುಮಿ ನದಿಯ ಮಹಿಮೆ ದ್ಯೋತಕವಾದ ಕಥೆ ಯಾವುದೆಂದರೆ—

"ಗೌತುಮಿ ತೀರ್ಥದಿಂದ ಜಲವು ಬಹಿರ್ಾಣವವಾಗಿ ಬ್ರಹ್ಮಾಂಡವನ್ನು ಮೀರಿ ಮೇಲಕ್ಕೆ ಪುಟಿಯುತ್ತಿತ್ತು. ಒಮ್ಮೆ ಪುಟಿದ ನೀರು ಕೆಳಕ್ಕೆ ಬರುತ್ತಿರಲೇ ಇಲ್ಲ. ಜಟಾಮುಕುಟ ಧಾರಿಯಾದ ಸರ್ವೇಶ್ವರನು ಚಿಮ್ಮಿ ಬಂದ ಜಲಧಾರೆಯನ್ನು ಹಿಡಿಹಿಡಿದು ತನ್ನ ಜಡೆಯಲ್ಲಿ ಸಂಗ್ರಹಿಸಿಕೊಳ್ಳುತ್ತಿದ್ದನು. ಹೀಗಾಗಿ ಗೌತುಮಿಯ ಜಲವು ಭೂಲೋಕದ ವರೆಗೆ ದುರ್ಮಿಳವಾಗಹತ್ತಿತು. ಇದರ ಬಗೆಗೆ ಎಲ್ಲ ಋಷಿಗಳು ಕೂಡಿ ವಿಚಾರ ಮಾಡಿದರು. ಏನೊಂದು ಬಗೆಯಿಂದ ಗೌತುಮಿ ಬಹಿರಾರ್ಣವ ಧಾರೆಯನ್ನು ಭೂಮಂಡಲಕ್ಕೆ ತಿರುಗಿಸಬೇಕು. ಈ ಕ್ರಿಯೆಯು ಗೌತುಮ ಋಷಿಯಿಂದಲೇ ಸಾಧ್ಯ' ಎಂದು ನಿಶ್ಚಯಿಸಿದರು. ಗೌತುಮ ಋಷಿಗೆ ಪ್ರತ್ಯಕ್ಷ ಹೇಳಿ ಅವನನ್ನು ಈ ಕ್ರಿಯೆಗೆ ಪ್ರೇರೇಪಿಸುವದು ಯಾರಿಗೂ

ಸಾಧ್ಯವಿರಲಿಲ್ಲ. ಕಡೆಗೆ ಅವರೆಲ್ಲರು ಒಂದು ಯೋಜನೆ ಮಾಡಿದರು. ಅದರಿಂದಲೇ ಗೌತುಮಿಯು ಭೂಲೋಕಕ್ಕೆ ಹಿಂದಿರುಗಿದಳು. ನಾಮಧಾರಕಾ! ಆ ಋಷಿಗಳ ಯೋಜನೆಯು ಪೂರ್ವಾಪರ ಕಥೆಯು ಎಂತಿರುವದೆಂದರೆ— 'ಗೌತುಮನು ತನ್ನ ಅನುಷ್ಠಾನದ ಆಶ್ರಮದ ಹತ್ತಿರ ಭತ್ತವನ್ನು ಬೆಳೆಯಿಸಿದ್ದನು. ಉಳಿದ ಋಷಿಗಳು ದರ್ಭೆಯಿಂದ ಒಂದು ಆಕಳವನ್ನು ರಚಿಸಿದರು. ಗೌತುಮನ ಭತ್ತದ ಬೆಳೆಯನ್ನು ಭಕ್ಷಿಸುವದಕ್ಕೆಂದು ಆ ಆಕಳನ್ನು ಗೌತುಮನ ಗದ್ದೆಯಲ್ಲಿ ಒಯ್ದಿರಿಸಿದರು. ಆಗ ಆ ಋಷಿಯು ಅನುಷ್ಠಾನ ಮಗ್ನನಾಗಿದ್ದನು. ಹಿಂದಿನಿಂದ ಕಣ್ತೆರೆದು ನೋಡಿದನು. ಸಿಟ್ಟಾದನು. ಕೂಡಲೆ ಒಂದು ದರ್ಭೆಯನ್ನು ಬೀಸಿ ಆಕಳಿಗೆ ಒಗೆದನು. ಆ ದರ್ಭೆಯು ಶಸ್ತ್ರಸ್ವರೂಪದ್ದಾಗಿ ನೆಟ್ಟನೆ ಸಾಗಿ ಆ ಆಕಳಿಗೆ ತಾಗಿತು. ಅದರಿಂದ ಆಕಳು ಸತ್ತುಬಿದ್ದಿತು! ಆಗ ಗೌತುಮನು— 'ಹಾಯ್ ಹಾಯ್! ನನಗೆ ಗೋಹತ್ಯ ದೋಷ ಒದಗಿತಲ್ಲ! ಎಂದು ಹಳಹಸಿದನು. ಈ ದೋಷ ನಿವಾರಣೆ ಹೇಗಾಗುವದೆಂದು ಉಳಿದ ಋಷಿಗಳನ್ನು ಕೇಳಿದನು. ಅವರು— 'ಬ್ರಹ್ಮಾಂಡ ಮಿಕ್ಕಿ ಪುಟಿಯುತ್ತಿದ್ದ ಬಹಿರಾರ್ಣವ 'ಉದಕವನ್ನು ಕೈಲಾಸಪತಿಯಿಂದೆ ಹಿಂದಿರುಗಿಸಿ ಭೂಮಂಡಲಕ್ಕೆ ತಂದರೆ ಈ ದೋಷ ದೂರಾಗುವದೆಂದು ಹೇಳಿದರು.

ಗೌತುಮನಿಗೆ ಋಷಿಗಳ ವಿಚಾರವು ಸಯುಕ್ತಿಕವೆನ್ನಿಸಿತು. ಕೂಡಲೇ ಅವನು ಶಿವನನ್ನು ಉದ್ದೇಶಿಸಿ ಒಂದು ಸಾವಿರ ವರ್ಷ ತಪಸ್ಸು ಮಾಡಿದನು. ಅದರಿಂದ ಕೈಲಾಸಪತಿಯು ಪ್ರಸನ್ನನಾದನು. ಗೌತುಮನು ತನ್ನ ಇಚ್ಛೆಯನ್ನು ಅವನಿಗೆ ತಿಳಿಸಿದನು. ಶಿವನು ಅವನ ಬಯಕೆಯಂತೆ ಗೌತುಮಿ ಗಂಗೆಯನ್ನು

ಭೂಮಂಡಲಕ್ಕೆ ಹಿಂದಿರುಗಿಸಿದನು."

ನಾಮಧಾರಕಾ ಗೌತುಮನ ಪ್ರಯತ್ನದಿಂದ ಭೂಮಂಡಲಕ್ಕಿಳಿದ ಗೌತುಮಿ ತೀರ್ಥದ ಮಹಿಮೆಯು ಸಾಮಾನ್ಯವೇ? ಇದನ್ನರಿತೇ ಗುರುಗಳು ಅಲ್ಲಿಗೆ ಬಂದರು. ಗೌತುಮಿತಟಾಕ ಯಾತ್ರೆಯನ್ನು ತೀರಿಸಿಕೊಂಡರು. ನಂತರ ಲೋಕಾನುಗ್ರಹಾರ್ಥ ಭೂಮಂಡಲ ಸುತ್ತಾಡಿದರು.

ಗೌತುಮಿ ತೀರ್ಥದಿಂದ ಗುರುಗಳು 'ಮಂಜರಿಕಾ' ತೀರ್ಥಕ್ಕೆ ಬಂದರು. ಅಲ್ಲಿ 'ಮಾಧವಾರಣ್ಯ' ಎಂಬ ಹೆಸರಿನ ಮುನಿಯಿದ್ದನು. ಅವನು ಸತತವೂ 'ನರಸಿಂಹ' ನನ್ನು ಮನಸಿನಿಂದ ಪೂಜಿಸುತ್ತಿದ್ದನು. ಶ್ರೀಗುರುಗಳು ಅಲ್ಲಿಗೆ ಹೋಗಲು ಆ ಮುನಿಯು ಕಂಡನು. ಅವನ ದೃಷ್ಟಿಗೆ ಗುರುಗಳು ಅವನ ಮಾನಸ ಮೂರ್ತಿಯಾದ 'ನೃಸಿಂಹ' ನಂತೆಯೇ ಕಂಡರು. ಇದು ಆ ಮಾಧವಾರಣ್ಯನಿಗೆ ಆತ್ಯಾಶ್ಚರ್ಯವೆನ್ನಿಸಿತು. ಹಾಗು ಅವನಲ್ಲಿ ಗುರುಗಳ ಬಗೆಗೆ ಪ್ರಬಲಭಕ್ತಿಯುತ್ಪನ್ನವಾಯಿತು. ಸ್ತುತಿ–ಸ್ತೋತ್ರ ಹಾಡಿದನು. ಶ್ರೀಗುರುಗಳು ಆವನ ಭಕ್ತಿಗೆ ಮೆಚ್ಚಿ— "ಮಾಧವಾರಣ್ಯ ! ನಿನಗೆ ಮಂತ್ರಸಿದ್ಧಿಯಾಯಿತು, ನಿಶ್ಚಯವಾಗಿಯೂ ನೀನು ಸದ್ಗತಿಹೊಂದುವಿ, ಬ್ರಹ್ಮಲೋಕ ಸೇರುವಿ" ಎಂದು ವರವಾಕ್ಯ ನುಡಿದು ಅಲ್ಲಿಂದ ಹೊರಟರು. ನೆಟ್ಟಗೆ ಮುಂದೆ ಸಾಗಿ 'ವಾಸರ ಬ್ರಹ್ಮೇಶ್ವರ' ಎಂಬಲ್ಲಿಗೆ ಹೋದರು. ವಾಸರ ಬ್ರಹ್ಮವು ಗಂಗೆಯ ತಟದಲ್ಲಿದೆ.

ಆ ಗಂಗೆಯಲ್ಲಿ ಗುರುಗಳು ಶಿಷ್ಯರೊಡನೆ ಸ್ನಾನಮಾಡುತ್ತಿದ್ದರು. ಆಗ ಅಲ್ಲಿಗೆ ಹೊಟ್ಟೆಶೂಲೆಯಿದ್ದ ಬ್ರಾಹ್ಮಣನೊಬ್ಬನು ಬಂದನು. ನದಿಯಲ್ಲಿ ಮುಳುಗಿ ಸಾಯುವದೇ ಅವನ ಉದ್ದೇಶವಿತ್ತು. ಅವನು ಗುರುಗಳನ್ನು ನೋಡಿರಲಿಲ್ಲ. ಹೊಟ್ಟೆಗೆ ದೊಡ್ಡ ಕಲ್ಲು ಕಟ್ಟಿಕೊಂಡು ಪ್ರವಾಹ ಮಧ್ಯಕ್ಕೆ ಸಾಗಿದನು. ಗುರುಗಳು ತಾವು ಸ್ನಾನ ಮಾಡುವಲ್ಲಿಂದಲೇ ಅವುನನ್ನು ಕಂಡರು, ಅವನ ಹವಣಿಕೆ ತಿಳಿದರು, ಕೂಡಲೆ ತಮ್ಮ ಶಿಷ್ಯರನ್ನು ಕಳಿಸಿ ಅವನನ್ನು ದಂಡೆಗೆ ಎಳೆತರಿಸಿದರು, ಪ್ರಾಣಕೊಡುವ ಕಾರಣ ಕೇಳಿದರು, ಅವನು ತನಗಾದ ಉದರ ವ್ಯಥೆಯ ಪೀಡೆಯನ್ನು ವಿವರಿಸಿ ಹೇಳಿದನು. ಅದಕ್ಕೆ ಗುರುಗಳು ಅವನಿಗೆ— 'ಆತ್ಮಹತ್ಯೆಯು ಮಹಾದೋಷವು, ನಿನ್ನ ಹೊಟ್ಟೆಶೂಳೆಗೆ ನಾವು ಔಷಧಕೊಡುವೆವು ತಡೆ' ಎಂದು ಅವನೊಡನೆ ಮಾತಾಡುತ್ತಿರುವಷ್ಟರಲ್ಲಿ ಆ ಊರಿನ ಅಧಿಕಾರಿಯು ಸ್ನಾನಕ್ಕೆಂದು ಅಲ್ಲಿಗೇ ಬಂದನು. ಅವನು ಗುರುಗಳನ್ನು ಕಂಡು 'ಇವರೊಬ್ಬ ಮಹಾತ್ಮರು' ಎಂದು ಬಗೆದು ಗುರುಗಳಿಗೆ ನಮಸ್ಕರಿಸಿದನು, ಗುರುಗಳು ಅವನನ್ನು ನಿನ್ನ ಹೆಸರು ಏನು? ನಿಮ್ಮ ಊರಾವುದು? ಇತ್ಯಾದಿಯಾಗಿ ಕೇಳಲು ಆ ಗೃಹಸ್ಥನು— 'ನಾನು ಕೌಂಡಿಣ್ಯ ಗೋತ್ರದ ಆಪಸ್ತಂಭ ಶಾಖೆಯ ಬ್ರಾಹ್ಮಣನು, ಸಾಯಂದೇವ ಎಂಬ ಹೆಸರು ನನಗಿರುವದು ದಕ್ಷಿಣದಲ್ಲಿಯ 'ಕಡಗಂಚಿ' ಗ್ರಾಮವು ನನ್ನ ವಾಸಸ್ಥಳವು. ಕೇವಲ ಹೊಟ್ಟೆಯಪಾಡಿಗಾಗಿ ಇತ್ತ ಕಡೆಗೆ ಬಂದು ಒಂದು ವರ್ಷವಾಯಿತು. ಇಲ್ಲಿಯವನೊಬ್ಬನ ಆಧಿಪತ್ಯಕ್ಕೊಳಗಾದ ಈ ಊರಿಗೆ ನಾವು ಗ್ರಾಮಾಧಿಕಾರಿಯಾಗಿ ಬಂದಿರುವೆನು" ಎಂದು ಹೇಳಿದನು. ಹಾಗು ತನಗೆ ಗುರುದರ್ಶನದಿಂದಾದ ಆನಂದವನ್ನು ಅವರೆದುರು ವ್ಯಕ್ತಪಡಿಸಿ, 'ತನ್ನನ್ನು ಅನುಗ್ರಹಿಸಬೇಕು' ಎಂದು ಕೈಮುಗಿದು ನಿಂತನು. ಗುರು

ಗಳು ಅವನ ನಿಶ್ಚಲ ಭಕ್ತಿಯನ್ನು ತಿಳಿದು ಅವನನ್ನು ಕುರಿತು— "ಸಾಯಂದೇವ! ಇವನೊಬ್ಬ ಹೊಟ್ಟೆ ಶೂಲೆಯಿದ್ದ ಬ್ರಾಹ್ಮಣನು, ಇವನ ರೋಗ ನಿವಾರಣೆಗೆ ಔಷಧ ಕೊಡುವೆವೆಂದು ಹೇಳಿರುವೆವು. ಇವನನ್ನು ನೀನು ಭೋಜನಕ್ಕೆ ಆಮಂತ್ರಿಸು" ಎಂದು ಹೇಳಿ ಆ ಬ್ರಾಹ್ಮಣನನ್ನು ತೋರಿಸಿದರು. ಸಾಯಂದೇವನು– ಗುರುಗಳೆ! ಈ ಬ್ರಾಹ್ಮಣನಷ್ಟೇ ಏಕೆ? ನೀವು ನನ್ನಲ್ಲಿ ಶಿಷ್ಯರೊಡನೆ ಬಂದು ಭಿಕ್ಷೆ ಸ್ವೀಕರಿಸಬೇಕು" ಎಂದು ಆಮಂತ್ರಣ ಕೊಡಲು ಗುರುಗಳು 'ತಥಾಸ್ತು' ಎಂದರು. ಬಳಿಕ ಎಲ್ಲರೂ ಕೂಡಿ ಸಾಯಂದೇವನಲ್ಲಿಗೆ ಹೋದರು. ಕುಳಿತರು. 'ಗುರ್ವಾಗಮನ' ಎಂದು ಸಾಯಂದೇವನು ಧರ್ಮಪತ್ನಿ 'ಜಾಖಾಯಿ' ಯಿಂದ ಅಡುಗೆ ಮಾಡಿಸಿದನು, ಭೋಜನ ಪಾತ್ರೆಗಳನ್ನು ಹಾಕಿದನು, ರಂಗವಲ್ಲಿ ಮುಂತಾದವುಗಳಿಂದ ಭೋಜನ ಪಂಕ್ತಿಯು ಶೋಭಿಸುತ್ತಿತ್ತು. ಸಾಯಂದೇವನು ಗುರುಗಳನ್ನು ಸ್ವಾಗತಿಸಿ ಭೋಜನಪೀಠದ ಮೇಲೆ ಕುಳ್ಳಿರಿಸಿದನು, ತನ್ನ ಹೆಂಡತಿಯಿಂದ ಕೂಡಿಕೊಂಡು ಗುರು ಪೂಜೆ ಮಾಡಿದನು. ಆಮೇಲೆ ಉಳಿದ ಬ್ರಾಹ್ಮಣರನ್ನು ಯಥಾವತ್ತಾಗಿ ಪೂಜಿಸಿದನು. ತದನಂತರ ಜಾಖಾಯಿಯು ಭೋಜನ ಸಾಮಗ್ರಿಗಳನ್ನು ತಂದು ವ್ಯವಸ್ಥಿತವಾಗಿ ಬಡಿಸಿದಳು. ಗುರುಗಳು ಉದರಶೂಲೆಯ ಬ್ರಾಹ್ಮಣನನ್ನು ತಮ್ಮ ಎದುರಿನಲ್ಲಿಯೇ ಭೋಜನಕ್ಕೆ ಕುಳ್ಳಿರಿಸಿಕೊಂಡರು. ಗುರುಗಳು ಮೊದಲು ಮಾಡಿ ಎಲ್ಲರ ಭೋಜನಕ್ಕೆ ಆರಂಭವಾಯಿತು. ಷಡ್ರಸಯುಕ್ತ ಪದಾರ್ಥಗಳೆಲ್ಲವನ್ನು ಭುಂಜಿಸಿ ಎಲ್ಲರೂ ತೃಪ್ತಿಹೊಂದಿದರು. ಗುರುಗಳು ಉದರ ಶೂಲೆಯ ಬ್ರಾಹ್ಮಣನಿಗೆ ಕರಿದ ಪದಾರ್ಥಗಳನ್ನು ಹೆಚ್ಚಾಗಿ ನೀಡಿಸಿದರು. ಏನೊಂದು ಸಂಶಯವಿಲ್ಲದೆ ಆ ಬ್ರಾಹ್ಮಣನು ಉಂಡನು, ತೇಗಿದನು. ಅದರೊಡನೆ ಅವನ ಹೊಟ್ಟೆಶೂಲೆಯೆಲ್ಲವೂ ಮಾಯವಾಗಿಬಿಟ್ಟಿತು.

ಎಲ್ಲರ ಭೋಜನವಾಯಿತು, ತಾಂಬೂಲಾದಿಗಳ ಸತ್ಕಾರವಾಯಿತು, ಗುರುಗಳು ಸಾಯಂದೇವ ದಂಪತಿಗಳನ್ನು ಆಶೀರ್ವದಿಸಿ ತಾವು ಇಳಿದುಕೊಂಡಲ್ಲಿಗೆ ಹೋದರು. ಉದರ ವ್ಯಥೆಯ ಬ್ರಾಹ್ಮಣನು ಗುರುಕೃಪೆಯಿಂದ ಗುಣಹೊಂದಿ ತನ್ನ ಊರಿಗೆ ಹೋದನು" ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

## ೧೪ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನಿಗೆ ಶ್ರೀಗುರುಗಳ ಮಹಿಮೆಯನ್ನು ಮುಂದುವರಿಸಿ ಹೇಳಹತ್ತಿದನು.

ನಾಮಧಾರಕಾ! ಉದರವ್ಯಥೆಯ ಬ್ರಾಹ್ಮಣನು ತನ್ನ ಊರಿಗೆ ಹೋದನಂತರ ಗುರುಗಳು ಸಾಯಂದೇವನನ್ನು ಕುರಿತು— "ಸಾಯಂದೇವ! ನಿನ್ನ ಭಕ್ತಿಗೆ ಮೆಚ್ಚಿದೆವು. ನಿನ್ನ ಮೇಲೆ ನನ್ನ ಪ್ರೀತಿಯು ಉತ್ಪನ್ನವಾಗಿದೆ. ವಂಶಪರಂಪರೆಯಾಗಿ ನಿನ್ನ ವಂಶಜರು ನಮ್ಮ ಭಕ್ತರಾಗಿ ವರ್ತಿಸಬೇಕೆಂದು ಇಚ್ಛಿಸುವೆನು" ಎಂದೆನ್ನಲು ಸಾಯಂದೇವನು— ಶ್ರೀ ಗುರುಗಳೆ! ನೀವು ತ್ರಿಮೂರ್ತಿಯ ಅವತಾರಿಕರು. ಅವಿದ್ಯಾ ಮಾಯೆಯಿಂದ ಮಾನವರಂತೆ ನಮಗೆ ತೋರುವಿರಿ. ಭಕ್ತೋದ್ಧಾರಕ್ಕಾಗಿಯೇ ಈ ರೂಪದಿಂದ ಅವತರಿಸಿರುವಿರಿ. ನಮ್ಮ ವಂಶಪರಂಪರೆಯಾಗಿ ನಮಗೆ ನಿಶ್ಚಿತ ಭಕ್ತಿಯನ್ನು ದಯಪಾಲಿಸಬೇಕು.

ಇಹ ಸೌಖ್ಯ ಹಾಗು ಪರಗತಿಯನ್ನು ನಮಗೆ ಕೊಡಬೇಕು. ಗುರುವೆ! ನಾನು ಈ ಗ್ರಾಮದ ಅಧಿಪತಿ ಯವನನ ದ್ವಾರದಲ್ಲಿ ನಿಂತು ಸೇವೆ ಮಾಡುತ್ತಿರುವನು. ನಮ್ಮ ಅಧಿಪತಿ ಆ ಯವನನು ಬಹು ಕ್ರೂರನೂ ಸಂತಾಪಿಯೂ ಆಗಿರುವನು. ಅವನು ಪ್ರತಿವರುಷ ಒಬ್ಬೊಬ್ಬ ಬ್ರಾಹ್ಮಣನನ್ನು ಚಿತ್ರಹಿಂಸೆಯಿಂದ ವಧೆ ಮಾಡುವನು. ಆ ದುರ್ದಿನವು ನಾಳಿನ ದಿನವಾಗಿದೆ. ಹಾಗು ಅವನಿಗೆ ಬ್ರಾಹ್ಮಣನಾದ ನಾನೇ ಬಲಿ ಬೀಳಬೇಕಾಗಿದೆ. ಅದಕ್ಕೆಂತಲೇ ಅವನು ಈ ದಿನವೇ ನನಗೆ ಮುನ್ಸೂಚನೆ ಕಳಿಸಿರುವನು. ನಾಳಿನ ದಿನ ನಾನು ಅವನನ್ನು ಕಾಣಹೋಗದೆ ಗತ್ಯಂತರವಿಲ್ಲ. ಅವನ ಭೆಟ್ಟಿಯು ನನಗೆ ಪ್ರಾಣಸಂಕಟವು" ಎಂದು ಉಸುರ್ಗರೆದು ಹೇಳಿದನು. ಗುರುಗಳು ಸಾಯಂದೇವನ ಚಿಂತಾಯುಕ್ತ ನುಡಿಗಳನ್ನು ಕೇಳಿ-- 'ಬಾ! ಸಾಯಂದೇವ! ಇಲ್ಲಿ ಬಾ! ಎಂದು ಮುಂದಕ್ಕೆ ಕರೆದು ಅವನ ಮಸ್ತಕದ ಮೇಲೆ ತಮ್ಮ ವರದಹಸ್ತ ವನ್ನಿಟ್ಟರು. ಅವರು-- 'ಸಾಯಂದೇವ! ನಿಶ್ಚಿಂತೆ ತಾಳು, ಬೆದರಬೇಡ, ನಿರ್ಭೀತಿಯಿಂದ ನೀನು ಆ ಯವನನ ಬಳಿಗೆ ಹೋಗು. ಸಂತೋಷದಿಂದ ಹಿಂದಿರುಗಿ ಬರುವಿ, ನೀನು ಬರುವವರೆಗೆ ನಾವು ಇಲ್ಲಿಯೇ ಇರುವೆವು ನಂತರ ಇಲ್ಲಿಂದ ಮುಂದೆ ಸಾಗುವೆವು. ನೀನೂ ನಮ್ಮ ನಿಜವಾದ ಭಕ್ತನು. ವಂಶಪರಂಪರೆ ಅಭೀಷ್ಟೆಗಳು ನಿಮಗೆ ಪೂರೈಸಲ್ಪಡುವವು. ನಿನ್ನ ಸಂತತಿ ವರ್ಧಿಸುವದು. ಪುತ್ರ-ಪೌತ್ರ ಸುಖವನ್ನು ಅನುಭವಿಸುವಿ. ನಿನ್ನ ಮನೆಯಲ್ಲಿ ಸಿರಿಯು ಸದಾವಸಿಸುವದು'' ಎಂದು ವರವಾಕ್ಯ ನುಡಿದರು.

ಸಾಯಂದೇವನು ಗುರುಗಳ ವರವಾಕ್ಯಗಳನ್ನು ಸ್ಮರಿಸಿಕೊಳ್ಳುತ್ತ ಮರುದಿನ ಆ ಯುವನನ ಮನೆಗೆ ಹೋದನು. ಆಗ ಆ ಕ್ರೂರನು ಸಂತಪ್ತನಾಗಿ ಕುಳಿತಿದ್ದನು. ಸಾಯಂದೇವನು ಅವನನ್ನು ಕಂಡು

ಹೆದರಿದವನೂ ಗುರುಸ್ಮರಣೆಯೊಂದಿಗೆ ಅವನೆದುರು ಕೈಕಟ್ಟಿಕೊಂಡು ನಿಂತನು. ಮೃತ್ಯುವಿನ ಭಯವನ್ನೆಣಿಸದ ಅವನಿಗೆ ಆ ಯುವನಿಂದ ಭಯವೇನು?

ಸಾಯುಂದೇವನು ನಿಂತುದುದನ್ನು ಆ ಯುವನನು ದುರದುರನೆ ನೋಡಿದನು. ಒಮ್ಮೆಲೇ ಅವನ ತಲೆ ತಿರುಗಿದಂತಾಗಿ ಅವನು ಆಸನದಿಂದೆದ್ದು ಒಳಕ್ಕೆ ಹೋದನು. ಸಾಯುಂದೇವನು ನಿಂತಲ್ಲಿಯೇ ನಿಂತನು.

ಯುವನನು ಒಳಕ್ಕೆ ಹೋದ ಕೂಡಲೆ ವಿಚಿತ್ರವಾಯಿತು. ಆ ಯುವನನಿಗೆ ತಡೆಯಲಾರದಂಥ ನಿದ್ರೆ ಬಂದಿತು. ಮಲಗಿದನು. ಗಾಢ ನಿದ್ರೆ ಹತ್ತಿತು. ಅವನಿಗೆ ತನ್ನ ಶರೀರದ ಪರಿವೆಯೇ ಉಳಿಯಲಿಲ್ಲ. ಕೆಲ ನಿಮಿಷಗಳ ಮೇಲೆ ಅವನಿಗೆ ಎದೆಯಲ್ಲಿ ಅಸಹ್ಯವಾದ ಉರುಪು ಹುಟ್ಟಿತು. ಪೂರ್ಣ ಎಚ್ಚರಾದನು. ಅವನಿಗೆ ಪ್ರಾಣಾಂತಿಕ ವ್ಯಥೆಯು ಆಗಹತ್ತಿತು. ಮೈಮೇಲಿನ ಸ್ಮೃತಿ ತಪ್ಪಿ ಬಡಬಡಿಸಹತ್ತಿದನು ಅವನು ತನ್ನ ಮುಖದಿಂದ— 'ಅಯ್ಯೋ! ಶಸ್ತ್ರಗಳ ಹೊಡೆತವನ್ನು ಸಹಿಸಲಾರೆನು! ನನ್ನ ಅವಯವಗಳು ಕತ್ತರಿಸಿಬೀಳುವವು. ಒಬ್ಬ ಬ್ರಾಹ್ಮಣನಿಂದ ನನಗೆ ಈ ದುಃಸ್ಥಿತಿಯು ಒದಗಿದೆ' ಎಂದು ಒದರಿಚೀರಾಡಹತ್ತಿದನು. ಈ ಸ್ಥಿತಿಯಲ್ಲಿ ಅವನು ಕೆಲ ನಿಮಿಷ ಕಳೆದ ನಂತರ ಅವನಿಗೆ ಪೂರ್ಣ ಪ್ರಜ್ಞೆಯುಂಟಾಯಿತು. ತಾನು ಹೊರಕ್ಕೆ ನಿಲ್ಲಿಸಿದ ಸಾಯುಂದೇವನ ಮುಂದೆ ಓಡಿ ಬಂದನು. ಅವನ ಪಾದಗಳ ಮೇಲೆ ಉರುಳಾಡಿ— "ಸ್ವಾಮಿ! ನೀವು ಶೀಘ್ರವಾಗಿ ಇಲ್ಲಿಂದ ಹೋಗಿರಿ" ಎಂದು ಕೈಮುಗಿದು ಹೇಳಿಕೊಂಡನು. ಹಾಗು ಆಗಲೇ ಒಳಗಣಿಂದ ವಸ್ತ್ರಭೂಷಣಗಳನ್ನು ತಂದು ಸಾಯುಂದೇವನಿಗೆ ಕೊಟ್ಟು— ಬ್ರಾಹ್ಮಣಾ! ಶೀಘ್ರ ಹೋಗು, ಇಲ್ಲಿ ನೀನು ನಿಂತರೆ ನನ್ನ ಪ್ರಾಣ ಹೋಗುವದು, ದಯಮಾಡಬೇಕು'

ಎಂದು ಬಾಯ್ದೆರೆದು ಹೇಳುತ್ತಿರುವಾಗಲೇ ಸಾಯಂದೇವನು ಇನ್ನೊಂದು ಮಾತಾಡದೆ ಆ ಯವನನ ಮನೆಯಿಂದ ಹೊರಬಿದ್ದನು. ನೆಟ್ಟನೆ ಗಂಗಾತಟಾಕದಲ್ಲಿಳಿದ ಶ್ರೀ ಗುರುಗಳ ಬಳಿಗೆ ಬಂದನು. ನಾಷ್ಟಾಂಗವಾಗಿ ವಂದಿಸಿದನು. ಗುರುಗಳಿಗೆ ಯವನನ ಮನೆಯಲ್ಲಿ ವರ್ತಿಸಿದ್ದನ್ನು ಶ್ರುತಪಡಿಸಿದನು. ಗುರುಗಳು ತಮಗಾದ ಸಂತೋಷವನ್ನು ಮತ್ತೊಮ್ಮೆ ಅವನ ಮಸ್ತಕದ ಮೇಲೆ ತಮ್ಮ ಹಸ್ತವನ್ನಿಟ್ಟು ವ್ಯಕ್ತಪಡಿಸಿದರು.

ನಂತರ ಶ್ರೀಗುರುಗಳು ದಕ್ಷಿಣಯಾತ್ರೆಗೆ ಹೊರಟರು. ಅವರೊಡನೆ ಸಾಯಂದೇವನೂ ಹೊರಡಲು ಸಿದ್ಧನಾದನು. ಗುರುಗಳು ಅವನನ್ನು ತಡೆದು— 'ಸಾಯಂದೇವ ! ಇನ್ನು ನಿನಗೆ ಭಯ-ಚಿಂತೆಗಳಿಲ್ಲ. ಕಾರಣನಿಮಿತ್ತ ನಾವು ದಕ್ಷಿಣಪಥಕ್ಕೆ ಹೋಗುವೆವು, ಇನ್ನು ಹದಿನೈದು ವರುಷಕ್ಕೆ ನಿನಗೆ ದರ್ಶನ ಕೊಡುವೆವು. ನಾವು ನಿನ್ನ ಗ್ರಾಮ ಕಡಗಂಚಿಯ ಸಮೀಪದಲ್ಲಿಯೇ ವಾಸವಾಗುವೆವು. ನೀನು, ನಿಮ್ಮವರೆಲ್ಲರಿಂದ ಕೂಡಿಕೊಂಡು ನಾವು ಇರುವಲ್ಲಿಗೆ ಬಂದು ಭೆಟ್ಟಿಯಾಗು. ಇಂದಿಗೆ ನಿನ್ನ ಅರಿಷ್ಟಗಳೆಲ್ಲ ದೂರಾದವು. ನಿಶ್ಚಿಂತೆಯಿಂದಿರು" ಎಂದು ಹೇಳಿ ಗುರುಗಳು ವಾಸರಬ್ರಹ್ಮೇಶ್ವರದಿಂದ ಹೊರಟರು. ಆರೋಗ್ಯಭವಾನೀ ಕ್ಷೇತ್ರವಾಗಿದ್ದ ವೈಜನಾಥಕ್ಕೆ ಬಂದರು. ಅಲ್ಲಿಯೇ ಗುಪ್ತವಾಗಿ ಇರಹತ್ತಿದರು."

ನಾಮಧಾರಕನು— "ಸಾಮಿ ! ಶ್ರೀಗುರುಗಳನ್ನು ಬೆಂಬಳಿಸಿ ತೀರ್ಥಾಟನ ಮಾಡುತ್ತಲಿದ್ದ ಶಿಷ್ಯರೆಲ್ಲಿ ಉಳಿದರು? ಗುರುಗಳು ಗುಪ್ತರಾಗಿ ವೈಜನಾಥದಲ್ಲಿ ಉಳಿದರೆಂದ ಮೇಲೆ ಆ ಶಿಷ್ಯರು ವೈಜನಾಥದಿಂದ ಹಿಂದಿರುಗಿರಬೇಕಲ್ಲವೇ? ಎಂದು ಕೇಳಿದನು. ನಾಮಧಾರಕನಿಗೆ ಸಿದ್ಧಮುನಿಯು ಉತ್ತರ ಹೇಳಿದುದು ಮುಂದಿನ ಅಧ್ಯಾಯದಲ್ಲಿ ವರ್ಣಿಸಿದೆ.

# ೧೫ನೆಯ ಅಧ್ಯಾಯ

ಶ್ರೀಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು—

"ನಾಮಧಾರಕ ! ಶ್ರೀಗುರುಗಳು ವೈಜನಾಥ ಕ್ಷೇತ್ರಕ್ಕೆ ಬಂದರು. ಅಲ್ಲಿ ಅವರು ಗೌಪ್ಯವಾಗಿ ಇರುವ ಮೊದಲು ಶಿಷ್ಯರನ್ನು ಕರೆದು— 'ಇನ್ನು ನಾವು ಕೆಲವೊಂದು ಕಾರಣದಿಂದ ಇಲ್ಲಿ ರಹಸ್ಯವಾಗಿ ಇರಬೇಕಾಗಿದೆ. ಕಾಮ್ಯಾರ್ಥವಾಗಿ ಬರುವ ಜನರ ವರ್ದಳದಿಂದ ನಮಗೆ ಇಷ್ಟೋದ್ದೇಶದ ಕ್ರಿಯೆಗೆ ಬಾಧೆ ಬರಹತ್ತಿದೆ. ಆದುದರಿಂದ ಕೆಲ ದಿನ ಈ ಕ್ರಮ ಸಾಗಿಸುವೆವು. ಸನ್ಯಾಸತ್ವ ಸ್ವೀಕರಿಸಿದ ಮೇಲೆ ಅವರಿಗೆ ಇಂಥ ಸ್ಥಳವೇ ವಾಸಕ್ಕೆ ಯುಕ್ತವೆಂದು ನಿರ್ದಿಷ್ಟವಿಲ್ಲ, ಆದರೂ ತೀರ್ಥಾಟನೆಯು ಅವರಿಗೆ ಮಹತ್ವ. ಆದ್ದರಿಂದ ನೀವು ನಮ್ಮ ಅಜ್ಞಾತದ ಅವಧಿಯಲ್ಲಿ ತೀರ್ಥ ಸಂಚಾರಕ್ಕೆ ಹೊರಡಿರಿ. ಈ ಪುಣ್ಯಭೂಮಿಯಲ್ಲಿರುವ ತೀರ್ಥ-ಕ್ಷೇತ್ರಗಳನ್ನು ನೀವು ಆಚರಿಸುವ ಕ್ರಮ ಹೇಳುವೆನು. ಅದರಂತೆ ನೀವು ಸುತ್ತಾಡಿ ಬಹುಧಾನ್ಯ ಸಂವತ್ಸರಕ್ಕೆ ಶ್ರೀಶೈಲಕ್ಕೆ ಬಂದುಬಿಡಿರಿ. ಅಲ್ಲಿ ನಾನು ನಿಮಗೆ ದರ್ಶನಕೊಡುವೆನು. ಈಗ ನೀವು ಇಲ್ಲಿಂದ ಹೊರಡಿರಿ. ಈ ಬ್ರಹ್ಮಾಂಡ ಗೋಲದಲ್ಲಿ **ಕಾಶೀಕ್ಷೇತ್ರವು** ತೀರ್ಥರಾಜವೆಂದು ಹೆಸರು ಹೊಂದಿದೆ. ಮೊದಲು ಅಲ್ಲಿಗೆ ಹೋಗಿ ಗಂಗಾಭಾಗೀರಥಿಯ ಸ್ನಾನವಾಚರಿಸಿ ಪುಣ್ಯಫಲ ಪಡೆಯಿರಿ. ಅಲ್ಲಿಂದ ನೀವು **ಸರಸ್ವತಿ** ತೀರ್ಥದ ಸ್ನಾನಮಾಡಿರಿ. ತದನಂತರ **ವರುಣಾನದಿ, ಕುಶಾವರ್ತ, ವಿಪಾಶಕಾ, ವೇಣಿ, ಶರಾವತಿ, ಮರುದ್ವೃಧಾ, ಅಸಕ್ನಿ ಮಧುಮತಿ, ಘೃತವತಿ** ಈ ನದಿಗಳ ತಟಾಕಯಾತ್ರೆಮಾಡಿರಿ.

ಬಳಿಕ ಜಗದ್ವಿಖ್ಯಾತವಾದ **ದೇವನದಿಯ** ಯಾತ್ರೆ ಮುಗಿಸಿರಿ. ಈ ಯಾತ್ರೆಯಿಂದ ಬ್ರಹ್ಮಹತ್ಯಾದಿ ದೋಷ ದೂರಾಗಿ ಪಾವಿತ್ರ್ಯತೆಯೊದಗುವದು. ನಂತರ ನೀವು **ಚಂದ್ರಭಾಗ, ರೇವತಿ, ಶರಯೂ, ಗೋಮತಿ, ವೇದಿಕಾ, ಕೌಶಿಕಿ, ಮಂದಾಕಿನಿ** ಇವೆಲ್ಲ ಪುಣ್ಯ ನದಿಗಳಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಳ್ಳಿರಿ. ಬಳಿಕ **ಸಹಸ್ರವಕ್ತ್ರ, ಪೂರ್ಣಾ, ಬಾಹುದಾ, ತ್ರಿವೇಣಿ** ಈ ನದಿ ಸಂಗಮ ಸ್ನಾನ ಮಾಡಿರಿ. ಪುಣ್ಯದಾಯಕ **ಸೇತುಬಂಧರಾಮೇಶ್ವರ, ಶ್ರೀರಂಗ, ಪದ್ಮನಾಭ, ಪುರುಷೋತ್ತಮ, ನೈಮಿಷಾರಣ್ಯ, ಪುಷ್ಕರತೀರ್ಥ, ವೈರೋಚನಿ,** ಇವೆಲ್ಲ ನದಿತೀರ್ಥಗಳನ್ನು ಆಚರಿಸಿರಿ. ಇಷ್ಟಾದ ಮೇಲೆ **ಬದರೀನಾರಾಯಣತೀರ್ಥ, ನಂದೀತೀರ್ಥ, ಕುರುಕ್ಷೇತ್ರ** ಇವುಗಳಲ್ಲಿ ಸ್ನಾನಮಾಡಿ ಶ್ರೀಶೈಲ ಯಾತ್ರೆಗಾಗಿ ಹೊರಡಿರಿ. ಅಲ್ಲಿ **ಮಹಾಲಯ**ತೀರ್ಥದಲ್ಲಿ ಪಿತೃತರ್ಪಣ ನೀಡಿರಿ. ಅದರಿಂದ ನಾಲ್ವತ್ತೆರಡು ಜನ್ಮಗಳ ಉದ್ಧಾರವಾಗುವದು. **ಕೇದಾರತೀರ್ಥ, ಪುಷ್ಕರತೀರ್ಥ, ಕೋಟಿತೀರ್ಥ, ನರ್ಮದಾತೀರ್ಥ, ಮಾತೃಕೇಶ್ವರ, ಕುಬ್ಜತೀರ್ಥ. ಕೋಕಾಮುಖಿತೀರ್ಥ,** ಇವೆಲ್ಲವು ವಿಶಿಷ್ಟ ತೀರ್ಥಗಳು. **ಪ್ರಸಾದತೀರ್ಥ, ವಿಜಯತೀರ್ಥ, ಚಂದ್ರನದಿತೀರ್ಥ, ಗೋಕರ್ಣ, ಶಂಖಕರ್ಣ,** ಇವುಗಳಲ್ಲಿ ಸ್ನಾನವನ್ನಾಚರಿಸುವದು ಮಹತ್ವವು. **ಅಯೋಧ್ಯೆ, ಮಥುರೆ, ಕಾಂಚಿ, ದ್ವಾರಾವತಿ, ಗಯೆ** ಈ ಸ್ಥಳಗಳೆಲ್ಲ ಪುಣ್ಯಕ್ಷೇತ್ರಗಳು. **ಶಾಲಿಗ್ರಾಮತೀರ್ಥ, ಶಂಬಲಗ್ರಾಮ** ಇವು ಮುಕ್ತಿದಾಯಕ ಕ್ಷೇತ್ರಗಳು. **ಗೋದಾವರಿ** ತಟಾಕ ಯಾತ್ರೆಯ ಮಹಿಮೆಯು ವಾಜಪೇಯ ಯಜ್ಞಫಲಕ್ಕೆ ಸಮವಿರುವದು. ಸವ್ಯಾಪಸವ್ಯವಾಗಿ ಮೂರು ಬಾರಿ ಈ ಯಾತ್ರೆ ಮುಗಿಸಬೇಕು. **ಭೌಮೇಶ್ವರತೀರ್ಥ, ಮಂಜರಾಸಂಗಮತೀರ್ಥ** ಇವು

ಪ್ರಯಾಗಕ್ಕೆ ಸಮ ಪುಣ್ಯ ತೀರ್ಥಗಳೆನ್ನಿಸುವವು. **ಕುಶತೀರ್ಥ**ದಲ್ಲಿ ತರ್ಪಣಕೊಡಬೇಕು. ಹೀಗೆ ತಟಾಕಯಾತ್ರೆಯನ್ನಾಚರಿಸುತ್ತ **'ಗೋದಾವರಿ-ಸಮುದ್ರಸಂಗಮ'** ತೀರ್ಥಕ್ಕೆ ಬರಬೇಕು. ಅಲ್ಲಿಂದ **ತುಂಗಭದ್ರಾತೀರ, ಪಂಪಾಸರೋವರ, ಹರಿಹರಕ್ಷೇತ್ರ, ಭೀಮರಥಿನದಿ, ಮಾತುಲಿಂಗಕ್ಷೇತ್ರ ಗಾಣಗಾಪುರಕ್ಷೇತ್ರ,** ಇವುಗಳ ಯಾತ್ರೆ ಮುಕ್ತಾಯಗೊಳಿಸಿಕೊಳ್ಳಿರಿ. ಗಾಣಗಾಪುರದ ಬಳಿಯಲ್ಲಿ ಮನೋಹರವಾದ ಎಂಟು ತೀರ್ಥಗಳಿರುವವು. ಅವುಗಳಲ್ಲಿಯು **ಕೋಟಿತೀರ್ಥವು** ಅಮರಜಾ ಸಂಗಮದಲ್ಲಿರುವದು, ಅಲ್ಲಿಯೇ ಕಲ್ಪವೃಕ್ಷವೆನ್ನಿಸಿದ ಅಶ್ವತ್ಥ ಮರವಿರುವದು. ಆ ಅಶ್ವತ್ಥದ ಎದುರಿನಲ್ಲಿಯೇ **ನೃಸಿಂಹ ತೀರ್ಥ**ವಿರುವದು. ಅದರ ಉತ್ತರ ನಿಟ್ಟಿಗೆ **ವಾರಾಣಸಿತೀರ್ಥ**ವಿದೆ. ಅಲ್ಲಿಂದ ಪೂರ್ವಕ್ಕೆ **ಪಾಪವಿನಾಶಿ** ತದನಂತರ **ರುದ್ರಪಾದತೀರ್ಥ** ಇವು ಇರುವವು. ಇದಲ್ಲದೆ **ಚಕ್ರತೀರ್ಥ, ಕೇಶವದೇವತೀರ್ಥ, ವಿನಾಯಕತೀರ್ಥ,** ಇವೆಲ್ಲವು ಕೋಟಿತೀರ್ಥಕ್ಕಿಂತಲೂ ಹೆಚ್ಚಿನವು. ಗಂಧರ್ವಭುವನದಲ್ಲಿ **ಕಲ್ಲೇಶ್ವರ ದೇವಸ್ಥಾನ**ವಿದೆ. ಈ ಸ್ಥಾನವು ಅನುಪಮವಾಗಿರುವದು. ಗಂಧರ್ವಭುವನವೇ **ಗಾಣಗಾಪುರವು.** ಅದು ಸಿದ್ಧಭೂಮಿಯಾಗಿದೆ. ಅಲ್ಲಿ ಅನುಷ್ಠಾನ ಮಾಡುವದರಿಂದ ಸದ್ಯಃ ಫಲ ದೊರಕುವದು. **ಕಾಕಿಣಿ** ಸಂಗಮವು ಮನೋಹರವಾದುದು. **ಭೀಮಾತೀರಕ್ಷೇತ್ರ** ಹೆಸರಾದದ್ದು, ಪುಣ್ಯಸ್ವಭಾವದಿಂದ **ಅನಂತ ತೀರ್ಥವು** ಪ್ರಯಾಗಕ್ಕೆ ಸಮವಾಗಿದೆ. **ತುಂಗಭದ್ರಾ-ವರದಾ, ಮಲಾಪಹಾರಿ, ನಿವೃತ್ತಿ** ಈ ಸಂಗಮಗಳಲ್ಲಿ ಸ್ನಾನಮಾಡುವದರಿಂದ ಮಹಾಪಾತಕಗಳೆಲ್ಲ ನಾಶವಾಗುವವು. ಶಿಷ್ಯರೆ! ಗುರುವು ಸಿಂಹ ರಾಶಿಗೆ ಪ್ರವೇಶಿಸಿದಾಗ ಎಲ್ಲ ತೀರ್ಥಗಳು ಸಂತುಷ್ಟತೆ ತಾಳುವವು. ಹಾಗು ಅವೆಲ್ಲವು ಭಾಗೀರಥಿಯಲ್ಲಿ

ಬಂದು ಐಕ್ಯತೆ ಹೊಂದುವವು. ಕನ್ಯಾಗತದಲ್ಲಿ ಕೃಷ್ಣೆಗೂ, ತುಲಾಗತದಲ್ಲಿ ತುಂಗಭದ್ರೆಗೂ ಭಾಗೀರಥಿಯು ಪ್ರವೇಶ ಮಾಡುವಳು, ಸೂರ್ಯನು ಕರ್ಕರಾಶಿಗೆ ಬರಲು **ಮಲಾಪಹಾರಿ-ಕೃಷ್ಣೆಯು** ಸಂಗಮದಲ್ಲಿ ಸ್ನಾನ ಮಾಡಲು ಬ್ರಹ್ಮಹತ್ಯೆಯ ದೋಷ ದೂರಾಗುವದು. **ಭೀಮಾ-ಕೃಷ್ಣೆ**ಯ ಸಂಗಮದಲ್ಲಿ ಸ್ನಾನ ಮಾಡಲು ಆ ಮಾನವನು ಮುಂದಿನ ಏಳು ಜನ್ಮಗಳವರೆಗೂ ಬ್ರಾಹ್ಮಣನಾಗಿಯೇ ಜನ್ಮಿಸುವನು. **ತುಂಗಾ-ಭದ್ರಾ** ಸಂಗಮ ಸ್ನಾನವೂ ನಿವೃತ್ತಿ ಸಂಗಮ ಸ್ನಾನವೂ ಉತ್ತರೋತ್ತರ ಫಲದಾಯಕಗಳು. **ಪಾತಳಗಂಗೆಯ** ಸ್ನಾನ, **ಮಲ್ಲಿಕಾರ್ಜುನ** ದರ್ಶನಗಳಿಂದ ಪುನರ್ಜನ್ಮವಿಲ್ಲ. **ಲಿಂಗಾಲಯ, ಕೃಷ್ಣಾ-ಸಮುದ್ರಸಂಗಮ, ಕಾವೇರಿಸಂಗಮ, ತಾಮ್ರಪರ್ಣಿನದಿ, ಕೃತಮಾಲಾನದಿ, ಪಯಸ್ವಿನಿನದಿ, ಭವನಾಶಿನಿನದಿ ಸಮುದ್ರಸ್ಕಂಧದರ್ಶನ, ಶೇಷಾದ್ರಿಕ್ಷೇತ್ರ,—ಶ್ರೀರಂಗನಾಥ,—ಪದ್ಮನಾಭ,—ಶ್ರೀಮದನಂತ,** ಇವುಗಳಲ್ಲಿಯ ಅರ್ಚನೆ **ತೂಣಾರ್ಮಲಕ್ಷೇತ್ರ, ಕುಂಭಕೋಣ, ಕನ್ಯಾಕುಮಾರಿ, ಮತ್ಸ್ಯತೀರ್ಥ, ಪಕ್ಷಿತೀರ್ಥ, ರಾಮೇಶ್ವರ, ಧನುಷ್ಯಕೋಟಿ, ಕಾವೇರಿತೀರ್ಥ, ಪುರುಷೋತ್ತಮ, ಚಂದ್ರಕುಂಡ, ಕೊಲ್ಹಾಪುರಮಹಾಲಕ್ಷ್ಮಿ** ಇವೆಲ್ಲವು ಮಹತ್ವದ ಹಾಗು ಪುಣ್ಯದಾಯಕಗಳು. ನೀವು ಅಲ್ಲಲ್ಲಿಯ ಸ್ನಾನಾದಿಗಳನ್ನು ತೀರಿಸಿ ಐದು ದಿನಗಳಿಗಿಂತ ಒಂದೆಡೆಯಲ್ಲಿ ಹೆಚ್ಚಿಗೆ ನಿಲ್ಲದೆ ಮುಂದೆ ಸಾಗಿರಿ. ಕೊಲ್ಹಾಪುರವು 'ದಕ್ಷಿಣಕಾಶಿ' ಎಂದು ಪ್ರಖ್ಯಾತವಿದೆ. ಅದರ ಹತ್ತಿರದಲ್ಲಿಯೇ 'ಜೊಲ್ಹಾ' ಗ್ರಾಮದಲ್ಲಿ ಶ್ರೀ ನರಸಿಂಹದೇವನಿರುವನು. ಆ ದೇವನು ಪ್ರತ್ಯಕ್ಷ ಪರಮಾತ್ಮ-ಸದಾಶಿವನು. ಕೃಷ್ಣಾತೀರದ ಖಿಲವಡಿಯಲ್ಲಿ ಶಕ್ತಿದೇವಿ ಭುವನೇಶ್ವರಿಯ ವಾಸವಿದೆ. ಅಲ್ಲಿ ತಪಮಾಡಿದವನು ಈಶ

ನಾಗುವನು. ಶಿಷ್ಯರೆ! ಇನ್ನೂ ಹೇಳುವದೇನಂದರೆ— ವರುಣಾಸಂಗಮದಲ್ಲಿ ಮನೋಭಾವದಿಂದ ಸ್ನಾನ ಮಾಡಿ ಅಲ್ಲಿಯ ಮಾರ್ಕಂಡೇಶ್ವರನನ್ನು ಪೂಜಿಸಿರಿ, ಕೃಷ್ಣಾತೀರದಲ್ಲಿ ಋಷ್ಯೇಶ್ವರನ ಆಶ್ರಮವು ಶ್ರೇಷ್ಠವಿದೆ. ಅಲ್ಲಿಯ ಸ್ನಾನದಿಂದ ಜ್ಞಾನಪ್ರಾಪ್ತಿಯಾಗುವದು. ಮುಂದೆ ಅದೇ ಕೃಷ್ಣೆಯ ಪ್ರವಾಹದತೀರದಲ್ಲಿ 'ಅಮರಾಪುರ' ವು ಪ್ರಖ್ಯಾತವಾಗಿದೆ. ಅದು ಕೃಷ್ಣಾ-ಪಂಚಗಂಗಾ ಸಂಗಮದಲ್ಲಿದ್ದು ಪ್ರಯಾಗಕ್ಕಿಂತಲೂ ಮಿಗಿಲಾದ ಫಲದಾಯಕ ಸ್ಥಾನವಾಗಿದೆ. ಅನುಪಮ್ಯ ಕ್ಷೇತ್ರವೆನ್ನಿಸಿದೆ. ಇಲ್ಲಿ ಸಕಲ ಮುನಿಗಳು ತಪಸ್ಸಿದ್ಧಿ ಪಡೆಯುವರು. ಇಲ್ಲಿ ಮೂರು ದಿನ ಅನುಷ್ಠಾನ ಮಾಡಲು ಇಚ್ಛಿತ ಫಲಪ್ರಾಪ್ತವಾಗುವದು. ಹಾಗು ತೀವ್ರವೇ ಪರಮಾರ್ಥ ಲಭಿಸುವದು. **ಯುಗಾಲಯ** ತೀರ್ಥವು ಶ್ರೇಷ್ಠವಿದೆ. ಅದರಂತೆ **ಕೂರ್ಪಾಲಯ**ವಿದೆ. **ಭಗವತಿ**ಯು ವಿಶ್ವಾಮಿತ್ರನ ತಪಸ್ಸಿನ ಸ್ಥಾನವು. ಕೃಷ್ಣೆಯು ಉತ್ತರವಾಹಿನಿಯಾಗಿ ಪ್ರವಹಿಸಿದಲ್ಲಿ **ಶ್ವೇತಶೃಂಗ**ವಿರುವದು. ಕಪಿಲಋಷಿಯು ಇಲ್ಲಿ ತಪಮಾಡಿದನು, ಶ್ರೀವಿಷ್ಣುವೂ ಗಾಯತ್ರಿಯೂ ಅವನಿಗೆ ಪ್ರಸನ್ನರಾದರು. ಶಿಷ್ಯರೆ! ಇನ್ನೂ ಎಷ್ಟೋ ಮಹತ್ವದ ತೀರ್ಥಗಳಿರುವವು. **ಕೇದಾರೇಶ್ವರ, ಪೀಠಾಪುರ (ದತ್ತಾತ್ರಯ)**ಸ್ಥಾನ ಸಪ್ತರ್ಷಿಗಳು ಬಹು ದಿವಸ ತಪಸ್ಸುಮಾಡಿದ **ಮಣಿಗಿರಿ,** ಕಲ್ಯಾಣನಗರದ **ವೃಷಘಾದ್ರಿ,** ನರಸಿಂಹನ ಸ್ಥಾನವಾದ **ಅಹೋಬಲ** ಇವೆಲ್ಲವು ಮಹತ್ವದ ಕ್ಷೇತ್ರಸ್ಥಾನಗಳಾಗಿವೆ. ಭೂಮಿಯ ಮೇಲಿರುವ ಈ ಸಮಸ್ತ ತೀರ್ಥಗಳನ್ನು ಆಚರಿಸಿರಿ. ರಜಸ್ವತಿಯರು ವಾಗ ಸ್ನಾನವನ್ನಾಚರಿಸಿದರೆ ದೋಷವು. ಕರ್ಕಸಂಕ್ರಮಣದಿಂದ ಎರಡು ತಿಂಗಳ ಕಾಲವನ್ನು ಬಿಟ್ಟು ತೀರ್ಥವನ್ನು ಆಚರಿಸಿರಿ. ನದೀತೀರ ವಾಸಿಗಳಿಗೆ ಮಾತ್ರ ದೋಷವಿಲ್ಲ. ಅದರೊಳಗೂ ನದಿಯ ಸ್ನಾನವು

ರಜಸ್ವತಿಯು ಮೂರು ದಿನ ಪರಿಯಂತ ತ್ಯಾಜ್ಯವು. ಭಾಗೀರಥಿ, ಗೌತಮಿ, ಚಂದ್ರಭಾಗೆ, ಸಿಂಧು ನರ್ಮದೆ, ಶರಯೂ ಈ ನದಿಗಳ ಸ್ನಾನವನ್ನು ಆ ಮೂರು ದಿನ ಬಿಟಬೇಕು. ಎಲ್ಲ ನದಿಗಳಿಗೂ ಗ್ರೀಷ್ಮರ್ತುವಿನಲ್ಲಿ ಹತ್ತು ದಿವಸ ರಜಸ್ವತಿ ದೋಷವಿರುವದು. ವಾಪಿ-ಕೂಪ-ತಡಾಗಗಳಲ್ಲಿಯ ಸ್ನಾನವನ್ನು ಒಂದು ದಿನ ಬಿಡಬೇಕು. ಹೊಸ ನೀರು ಬಂದ ದಿನವೇ ರಜಸ್ವತಿಯು ದೋಷವು. ಆದ್ದರಿಂದ ಆ ದಿನ ಸ್ನಾನವು ವರ್ಜ್ಯವು.

ಶಿಷ್ಯರೇ! ತೀರ್ಥಗಳನ್ನೂ ಅವುಗಳ ಪುಣ್ಯ ಫಲಗಳನ್ನೂ ಸಾಮಾನ್ಯವಾಗಿ ನಿಮಗೆ ತಿಳಿಸಿದೆವು. ನೀವು ಪ್ರತ್ಯಕ್ಷ ಕಂಡ ತೀರ್ಥಗಳಲ್ಲಿ ವಿಧಿಪೂರ್ವಕ ಸ್ನಾನವನ್ನು ಆಚರಿಸಿರಿ" ಎಂದು ಗುರುಗಳು ಹೇಳಿದರು.

ನಾಮಧಾರಕ! ಶಿಷ್ಯರು ಗುರುಗಳಿಗೆ ನಮಸ್ಕರಿಸಿ ಅವರ ಅಪ್ಪಣೆಯೊಂದಿಗೆ ತೀರ್ಥಾಟನೆಗೆ ಹೋದರು. ಶ್ರೀಗುರುಗಳು ಕೆಲ ದಿನ ಆ ವೈಜನಾಥದಲ್ಲಿ ಗೌಪ್ಯವಾಗಿ ಉಳಿದರು" ಎಂದು ಸಿದ್ಧಮುನಿಯು ಹೇಳಿದನು.

—o—

# ೧೬ ನೆಯ ಅಧ್ಯಾಯ

ಶ್ರೀ ಗಣೇಶ—ಶಾರದಾ—ಗುರುಭ್ಯೋನಮಃ ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು ಶ್ರೀ ಗುರುಗಳ ಚರಿತ್ರೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ—

“ನಾಮಧಾರಕ ! ಶ್ರೀ ಗುರುಗಳು ಶಿಷ್ಯರಿಗೆಲ್ಲ ಭೂಮಿಯ ಮೇಲಿನ ತೀರ್ಥಗಳನ್ನೂ ಅವುಗಳ ಮಹತ್ವವನ್ನೂ ತಿಳಿಸಿ ಅವರನ್ನು ತೀರ್ಥಾಟನಕ್ಕೆ ಕಳಿಸಿದರು. ತಾವು ಆ ವೈಜನಾಥದಲ್ಲಿಯೇ ಗೌಪ್ಯವಾಗಿ ಉಳಿದರು. ಅವರ ಸೇವೆಗೆಂದೇ ನಾನೊಬ್ಬ ಶಿಷ್ಯನು ಮಾತ್ರ ಅವರ ಸನ್ನಿಧಿಯಲ್ಲಿ ಉಳಿದೆನು. ಮುಂದೆ ಒಂದು ವರುಷದವರೆಗೂ ವೈಜನಾಥದಲ್ಲಿ ಗುರುಗಳು ಇದ್ದರು.

ಶ್ರೀ ಗುರುಗಳು ಅಲ್ಲಿ ಇರುವಾಗ ಒಬ್ಬ ಬ್ರಾಹ್ಮಣನು ಬಂದು ಗುರುಪಾದಗಳಿಗೆ ವಂದಿಸಿ— “ಸ್ವಾಮಿ ! ನಾನು ಬಹುದಿವಸ ತಪಶ್ಚರ್ಯೆ ಮಾಡಿದರೂ ನನ್ನ ಮನವು ಸ್ಥೈರ್ಯಗೊಳ್ಳಲೊಲ್ಲದು. ಅದರಿಂದ ನನಗೆ ಜ್ಞಾನದ ಮಾರ್ಗವು ಕಟ್ಟಾಗಿ ಬಿಟ್ಟಿದೆ. ಜ್ಞಾನವಿಲ್ಲದ ತಪವು ವ್ಯರ್ಥ ಎಂದು ಹೇಳುವಂತೆ ನನ್ನ ತಪಸ್ಸಿನ ಗತಿಯಾಯಿತು. ನಾನು ಗುರು ಸೇವೆ ಬಹುದಿವಸ ಮಾಡದಿದ್ದುದಕ್ಕೆ ಹೀಗಾಗಿರಬಹುದು. ಗುರುವೇ ! ನೀನು ತಾರಕನು ಈ ನಂಬಿಗೆಯಿಂದ ಇಲ್ಲಿಗೆ ಬಂದೆನು ನನಗೆ ಉಪದೇಶಮಾಡಬೇಕು”. ಎಂದನು ಆ ಬ್ರಾಹ್ಮಣನ ಮಾತಿಗೆ ಗುರುಗಳು ನಕ್ಕು— “ಏಲೋ ನೀನು ಇದುವರೆಗೆ ಗುರುವಿಲ್ಲದೆ ಮುನಿಯು ಹೇಗಾದಿ ? “ ಎಂದು ಕೇಳಲು ಆ ಬ್ರಾಹ್ಮಣನು ಕಣ್ತುಂಬಾ ನೀರು ತಂದುಕೊಂಡು— ? ಗುರುರಾಯನೆ ! ನನಗೆ ಒಬ್ಬ ಗುರುವು ದೊರಕಿದ್ದನು. ಅವನು ಯಾವಾಗಲೂ ಬಿರುನುಡಿಗಳಿಂದ ನನ್ನನ್ನು ಧಿಕ್ಕರಿಸುತ್ತಿದ್ದನು. ನಾನು ಕೂಡಲಾರದ ಕೆಲಸವನ್ನು ಮಾಡುವದಕ್ಕೆ ಹೇಳುತ್ತಿದ್ದನು. ನನಗೆ ವೇದಶಾಸ್ತ್ರಾದಿಗಳ ಅಭ್ಯಾಸು ಹೇಳಲಿಲ್ಲ. ‘ನಿನ್ನ ಅಂತಃಕರಣವು ಇನ್ನೂ ಸ್ಥಿರವಿಲ್ಲ’ ಎಂದು ಮೇಲಿಂದಮೇಲೆ ನುಡಿಯುತ್ತಿದ್ದನು. ಅದರಿಂದ ಅವನು ಹೇಳಿದ ಕೆಲಸವನ್ನು ನಾನು ಮಾಡುತ್ತಿರಲಿಲ್ಲ. ಅದಕ್ಕಾಗಿ ಅವನು ಸಿಟ್ಟಿಗೇಳುವನು. ಇದರಂತೆ ಕೆಲ ದಿನ ಕಳೆದವು.

ಮುಂದೊಂದು ದಿನ ನಾನೇ ಆ ಗುರುವನ್ನು ಧಿಕ್ಕರಿಸಿ ಅವನ ಆಶ್ರಮದಿಂದ ಹೊರಬಿದ್ದೆನು" ಎಂದು ಹೇಳಿದನು. ಗುರುಗಳು ಅವನ ವೃತ್ತಾಂತಕೇಳಿ— "ಎಲೋ ಬ್ರಾಹ್ಮಣಾ ನೀನು ಆತ್ಮಘಾತಕಿಯು. ನಿನ್ನ ಮೂಗನ್ನು ನೀನೇ ಕೊಯ್ದುಕೊಂಡು ಅನ್ಯರಿಗೆ ಅಪಶಕುನ ಮಾಡಿದಂತಾಯಿತು. ನಿನ್ನ ಗುಣ ನಿನಗೇ ತಿಳಿಯುವದಿಲ್ಲವೆಂದ ಮೇಲೆ ನಿನಗೆ ಜ್ಞಾನವೆಂತುಬರುವದು ? ಮಂದಮತಿಯಾದ ನೀನು ಗುರುದ್ರೋಹ ಕಟ್ಟಿಕೊಂಡಿ, ನಿನ್ನ ಗುರುವಿನ ಗುಣದೋಷಗಳನ್ನು ನೀನು ಹರ್ಷದಿಂದ ಹೇಳುತ್ತಿರುವಿಯೆಂದಮೇಲೆ ನಿನಗೆ ಜ್ಞಾನವುಂಟಾಗುವದು ಸಾಧ್ಯವಿಲ್ಲ. ನಿಧಿಯನ್ನು ಒದ್ದು ಕ್ಷುಧೆ ನಿವಾರಣೆಗಾಗಿ ಪ್ರಯತ್ನಿಸುವ ಮೂರ್ಖನಂತೆ ನೀನಾಗಿರುವಿ." ಎಂದು ಹೇಳಲು ಆ ಬ್ರಾಹ್ಮಣನು "ಗುರುಗಳೆ ! ನಾನು ಅಜ್ಞಾನಿಯು ಗುರುವಿನ ಮಹತ್ವ ನನಗೆ ತಿಳಿಯಲಿಲ್ಲ. ಗುರುವನ್ನು ಅರಿತುಕೊಳ್ಳುವ ಬಗೆ ಹೇಗೆ ? ನನ್ನ ಮನವು ಸ್ಥಿರವಾಗಿ ನನಗೆ ಗುರುಬೋಧೆಯಾಗುವಂತೆ ಕರುಣಿಸಿರಿ" ಎಂದು ಬೇಡಿಕೊಂಡನು ಗುರುಗಳು ಅವನಿಗೆ— "ಮುನಿಯೆ ! ನಿನಗೆ ಗುರುಸೇವೆಯ ವಿಧಾನವನ್ನು ವಿಸ್ತರಿಸಿ ಹೇಳುವೆನು ಕೇಳು. "ತಾಯಿ-ತಂದೆಗಳು ಗುರುಗಳು, ತನಗೆ ಜ್ಞಾನೋಪದೇಶ ಮಾಡುವವನು ಪರಮ ಗುರುವು, ಶಿವ-ಬ್ರಹ್ಮ-ನಾರಾಯಣ ಸ್ವರೂಪರು ಗುರುಗಳು ಈ ಎಲ್ಲ ಗುರುಗಳನ್ನು ಏಕಾಗ್ರಮನದಿಂದ ಸೇವಿಸಬೇಕು. ಇದರ ಸ್ಪಷ್ಟತೆಗಾಗಿ ಒಂದು ಕಥೆ ಹೇಳುವೆನು ಕೇಳು. ಅದಾವುದೆಂದರೆ—

"ದ್ವಾಪರದ ಕೊನೆಯಲ್ಲಿ 'ಧೌಮ್ಯ' ಎಂಬ ಹೆಸರಿನ ಋಷಿಗಳಿದ್ದರು. ಅವರ ಬಳಿಯಲ್ಲಿ ಅರುಣಿ ಪಾಂಚಾಲ, ಬೈಂದ, ಹಾಗು ಉಪಮನ್ಯು ಈ ಮೂವರು ವೇದಾಭ್ಯಾಸ ಮಾಡುತ್ತಿದ್ದರು.

ಒಂದು ದಿನ ಆ ಧೌಮ್ಯಗುರುಗಳು ತಮ್ಮಲ್ಲಿ ಸೇವೆಮಾಡಿಕೊಂಡಿದ್ದ ಮೂವರೂ ಶಿಷ್ಯರ ಅಂತ

ಕರಣವನ್ನು ಒರೆಗೆ ಹಚ್ಚಿ ನೋಡುವ ವಿಚಾರ ಮಾಡಿದರು. ಅದರಂತೆ ಅವರು ತಮ್ಮ ಶಿಷ್ಯ ಅರುಣಿಯನ್ನು
ಕರೆದು— 'ಏಕೋ ನೀನು ನಮ್ಮ ಬತ್ತದ ಗದ್ದೆಗೆ ಹೋಗು. ಹತ್ತಿರದ ಕೆರೆಯ ಕಾಲುವೆಯನ್ನು ಸಾಗಿಸಿ
ಗದ್ದೆಯನ್ನು ನೀರಿನಿಂದ ತೊಯ್ಸಿಸು' ಎಂದು ಹೇಳಲು ಆಗಲೇ ಅರುಣಿಯು ಗದ್ದೆಗೆ ಹೋಗಿ ನೋಡುತ್ತಾನೆ.
ಗದ್ದೆಯು ಎತ್ತರವಾಗಿಯೂ ಕೆರೆಯ ಕಾಲುವೆಯು ಕೆಳಕ್ಕಾಗಿಯೂ ಇದ್ದುದು ಅವನಿಗೆ ಕಂಡು ಬಂದಿತು
ವಿಚಾರಕ್ಕೊಳಗಾದನು ಗದ್ದೆಗೆ ನೀರೇರಿಸುವ ಉಪಾಯ ಕಂಡನು. ಗದ್ದೆಯಿಂದ ಕೆಳಕ್ಕಾಗಿ ಹರಿದು ಹೋಗು
ತ್ತಿರುವ ಕಾಲುವೆಗೆ ತಾನೇ ಅಡ್ಡವಾಗಿ ಮಲಗಿದನು. ಮುಂದೆ ಸಾಗುವ ನೀರು ಅಲ್ಲಿಯೇ ತಡೆದು ನಿಂತಿತು.
ಅಲ್ಪಾವಧಿಯಲ್ಲಿ ಮೇಲಕ್ಕೇರಿ ಆ ನೀರು ಗದ್ದೆಗೆ ಸಾಗಹತ್ತಿತು. ಗದ್ದೆಯೊಳಗೆಲ್ಲ ನೀರು ತುಂಬಿತು.

ರಾತ್ರಿಯಾಯಿತು, ಕತ್ತಲೆಯಾಯಿತು. ಅರುಣನು ಇನ್ನೂ ಗದ್ದೆಯಿಂದ ಬರಲಿಲ್ಲ ಗುರುಗಳು
ಗಡಬಡಿಸಿದರು. ಕೈಯಲ್ಲಿ ದೀವಟಿಗೆ ತೆಕ್ಕೊಂಡು ಗದ್ದೆಗೆ ಹೋದರು. ಗದ್ದೆ ನೀರು ತುಂಬಿತ್ತು ಆದರೆ ಅರು
ಣನು ಗದ್ದೆಯಲ್ಲಿಯೂ ಇಲ್ಲ, ಕೆರೆಯಮೇಲೂ ಇದ್ದಿರಲಿಲ್ಲ ಆಗ ಗುರುಗಳು ಕಳವಳಿಸಿ 'ಅರುಣಾ! ಅರುಣಾ!'
ಎಂದು ದೀರ್ಘ ಧ್ವನಿಯಿಂದ ಕರೆದರು ಅಲ್ಲಿಯೇ ಕಾವಲಿಗೆ ಅಡ್ಡಾಗಿ ಬಿದ್ದಿದ್ದ ಅರುಣನು ಓಗೊಟ್ಟನು ಗುರು
ಗಳು ಅವನನ್ನು ಎಬ್ಬಿಸಿ ಆಶ್ರಮಕ್ಕೆ ಕರೆದೊಯ್ದರು. ಅವರು ಅರುಣನು ಮಾಡಿದ ಸೇವೆಯಿಂದ ಹರ್ಷಿತ
ರಾಗಿ— 'ಅರುಣಾ! ನಿನಗೆ ಸಕಲ ವಿದ್ಯೆಗಳು ಪ್ರಾಪ್ತವಾಗಲಿ' ಎಂದು ವರ ನೀಡಿದರು ಅರುಣನು ವಿದ್ಯಾ
ವಂತನಾದನು. 'ಇನ್ನು ಗೃಹಸ್ಥಾಶ್ರಮ ಹೊಂದಿ ಸುಖದಿಂದ ಬಾಳು' ಎಂದು ಆಶೀರ್ವದಿಸಿ ಗುರುಗಳು ಆತ
ನನ್ನು ಕಳಿಸಿ ಕೊಟ್ಟರು.

ಎರಡನೆಯ ಶಿಷ್ಯ ಬೈಂದನೆಂಬವನು, ಬಳಿಕೊಂದು ದಿನ ಗುರುಗಳು ಬೈಂದನನ್ನು ಕರೆದು—'ನೀನು ಗದ್ದೆಗೆ ಹೋಗಿ ಬತ್ತವನ್ನು ಒಕ್ಕಿ ತಂದುಹಾಕು' ಎಂದು ಅಪ್ಪಣೆಕೊಟ್ಟರು. ಬೈಂದನು ಗದ್ದೆಗೆ ಹೋದನು ಬತ್ತತುಳಿಸಿ ರಾಸೀಮಾಡಿದನು. ಎಲ್ಲ ಭತ್ತವನ್ನು ಚಕ್ಕಡಿಯಮೇಲೆ ಹೇರಿಡನು. ಇದ್ದ ಒಂದು ಕೋಣವನ್ನು ನೊಗದ ಒಂದು ಮಗ್ಗಲಿಗೆ ಕೊರಳು ಕಟ್ಟಿದನು. ಇನ್ನೊಂದು ಮಗ್ಗಲಿನ ನೊಗವನ್ನು ತನ್ನ ಹೆಗಲಿಗೇರಿಸಿಕೊಂಡು ಜತ್ತಿಯಿಂದ ಬಿಗಿದುಕೊಂಡನು. ರಾಸಿ ಹೇರಿದ ಆ ಚಕ್ಕಡಿಯು ಆಶ್ರಮಕ್ಕೆ ಸರಾಗವಾಗಿ ಬರಹತ್ತಿತು. ಆದರೆ ಮಧ್ಯಮಾರ್ಗದಲ್ಲಿ ಕೋಣವೂ ಚಕ್ಕಡಿಯೂ ಹುದಲಿಗೆ ಬಿದ್ದವು, ಬೈಂದನು ಕೊರಳಿಗೆ ಕಟ್ಟಿಕೊಂಡಿದ್ದ ಜತ್ತಿಗೆಯು ಅವನ ಕೊರಳಿಗೆ ಉರ್ಲಾಯಿತು, ಪ್ರಯತ್ನಮಾಡಹತ್ತಿದರೂ ಜತ್ತಿಗೆ ಬಿಚ್ಚಲೊಲ್ಲದು ಹುದುಲಿನಿಂದ ಗಾಡಿಯು ಕಿತ್ತೇಳಲೊಲ್ಲದು.

ರಾಶಿಯ ಬಂಡಿಯು ಹೊತ್ತು ಮುಳುಗಿದರೂ ಬರಲಿಲ್ಲವೆಂದು ಗುರುಗಳು ಹೊಲಕ್ಕೆ ಹೋದರು. ನಡುದಾರಿಯಲ್ಲಿ ಹುದುಲಿಗೆ ಬಿದ್ದ ಚಕ್ಕಡಿ—ಕೋಣಗಳನ್ನೂ ಕುತ್ತಿಗೆಗೆ ಉರ್ಲುಬಿದ್ದಿದ್ದ ಬೈಂದನನ್ನೂ ಕಂಡರು, ಬೈಂದನ ಕೊರಳಿಗೆ ಇದ್ದ ಜತ್ತಿಗೆ ಬಿಚ್ಚಿದರು. ಹಿಂದಿನಿಂದ ತಾವೇ ಆ ಚಕ್ಕಡಿಯನ್ನು ಹೊರಡಿಸಿದರು.

ಬೈಂದನು ಪ್ರಾಣದ ಪರಿವೆಯಿಲ್ಲದೆ ಗುರುಸೇವೆ ಮಾಡಿದನು. ಗುರುಗಳು ಮೆಚ್ಚಿ ಅವನಿಗೆ ಮೇಲಾದ ವರಕೊಟ್ಟು 'ಹೋಗು ಗೃಹಸ್ಥಾಶ್ರಮಿಯಾಗಿ ಸುಖದಿಂದ ಉಪಜೀವಿಸು ಎಂದು ಹರಸಿ ಅಪ್ಪಣೆ ಕೊಟ್ಟು ಕಳಿಸಿದರು.

ಇನ್ನು ಧೌಮ್ಯ ಋಷಿಗಳ ಮೂರನೆಯ ಶಿಷ್ಯನು 'ಉಪಮನ್ಯು' ಎಂಬವನು, ಎಲ್ಲ ಶಿಷ್ಯರಲ್ಲಿ

ಇವನು ಜಡಮತಿಯು, ಆಶ್ರಮದ ಆಕಳುಗಳನ್ನು ಮೇಯಿಸಿಕೊಂಡು ಬರುವ ಕೆಲಸವೇ ಇವನದಾಗಿತ್ತು. ಉಳಿದ ಶಿಷ್ಯರಿಗಿಂತ ಇವನ ಆಹಾರವು ಹೆಚ್ಚಾಗಿದ್ದಿತು. ಆದರಿಂದಲೇ ಇವನಿಗೆ ವಿದ್ಯೆಯು ಲಭಿಸುತ್ತಿರಲಿಲ್ಲ ದನಮೇಯಿಸಲು ಅಡವಿಗೆ ಹೋದಾಗ ತನಗೆ ಹಸಿವೆಯಾದ ಕೂಡಲೆ ದನಹೊಡೆದುಕೊಂಡು ಬಂದೇ ಬಿಡುತ್ತಿದ್ದನು. ಒಂದು ದಿನ ಅವನು ಹಸಿವೆಯನ್ನು ಸಹಿಸದೆ ತೀವ್ರವೇ ಬರಲು ಗುರುಗಳು ಅವನನ್ನು ನೋಡಿ— 'ನೀನು ಹೊತ್ತು ಮುಳುಗುವವರೆಗೂ ದನ ಮೇಯಿಸಿಕೊಂಡು ಬರಬೇಕು' ಎಂದು ಹೇಳಿದರು. ಮರುದಿನದಿಂದ ಅವನು ಅಡವಿಗೆ ಹೋಗಿ ಸುರ್ಯಾಸ್ತದವರೆಗೆ ದನಮೇಯಿಸಹತ್ತಿದ್ದನು. ದನಗಳ ಹೊಟ್ಟೆ ತುಂಬುತ್ತಿತ್ತು. ಆದರೆ ಇವನ ಹೊಟ್ಟೆ ಹಸಿದು ಕಕ್ರಾಂತನಾಗುತ್ತಿದ್ದನು. ತನ್ನ ಹಸಿವೆ ಹಿಂಗಿಸುವದಕ್ಕೆ ಆ ಅಡವಿಯ ಸನಿಹದಲ್ಲಿದ್ದ ನಾಲ್ಕಾರು ಆಶ್ರಮಗಳಿಗೆ ಹೋಗಿ ಭಿಕ್ಷೆಬೇಡಿತಂದು ಉಣ್ಣಹತ್ತಿದನು. ಇದೇ ಕ್ರಮ ಕೆಲದಿನ ನಡೆಯಿತು.

'ಉಪಮನ್ಯುವಿಗೆ ನಮ್ಮ ಆಶ್ರಮದ ಭೋಜನವಿಲ್ಲದಿದ್ದರೂ ಸಶಕ್ತನಾಗಿಯೇ ಇರುವನು' ಎಂಬ ವಿಚಾರದಿಂದ ಗುರುಗಳು ಅವನನ್ನು 'ನಿನ್ನ ಉದರ ನಿರ್ವಾಹ ಹೇಗೆ ?' ಎಂದು ಕೇಳಲು ಅವನು ನಿಜಸಂಗತಿ ಹೇಳಿದನು. ಗುರುಗಳು ನೀನು ಭಿಕ್ಷೆಬೇಡಿದ್ದನ್ನು ಆಶ್ರಮಕ್ಕೆ ತಂದು ಹಾಕು' ಎಂದರು. ಅದರಂತೆ ಅವನು ತನಗೆ ಭಿಕ್ಷೆ ಬಂದುದನ್ನು ತರಹತ್ತಿದನು. ತಾನು ಮತ್ತೆರಡು ಮನೆಗಳ ಭಿಕ್ಷೆಯಿಂದ ಹಸಿವೆ ಹಿಂಗಿಸಿಕೊಳ್ಳಹತ್ತಿದನು. ಗುರುಗಳು ಮೊದಲಿನಂತೆ ಪ್ರತಿಬಂಧಿಸಿ ಎಲ್ಲ ಭಿಕ್ಷೆಯನ್ನು ಆಶ್ರಮಕ್ಕೆ ತರಿಸಹತ್ತಿದರು. ನಂತರ ಅವನು ಕ್ಷುಧೆನಿವಾರಣೆಗಾಗಿ ಆಕಳು ಕರುಗಳು ಮೊಲೆಯುಣ್ಣುವಾಗ ಹೆಚ್ಚಾಗಿ ಒಸರುವ ಹಾಲನ್ನು ಸೇವಿಸಹತ್ತಿದನು. ಮತ್ತೂ ಅವನು ಸಶಕ್ತನಾಗಿ ಉಳಿದುದಕಾರಣಕೇಳಿ ಗುರುಗಳು "ಕರುಗಳು ಬಿಟ್ಟಹಾಲು ಸೇವಿಸ

ಕೂಡದು" ಎಂದು ಕಟ್ಟಪ್ಪಣೆಮಾಡಿದರು. ಮುಂದೆ ಅವನು ಅಡವಿಯಲ್ಲಿ ಎಕ್ಕೆಯಹಾಲನ್ನು ದ್ರೋಣದಲ್ಲಿ ಹಿಡಿದುಕೊಂಡು ಸೇವಿಸಹತ್ತಿದನು. ಒಂದು ದಿನ ಈ ಹಾಲು ಕುಡಿಯುವಾಗ ಕಣ್ಣಲ್ಲಿ ಬಿದ್ದು ಕೂಡಲೆ ಅವನ ಕಣ್ಣು ಕುರುಡಾದವು. ಆಕಳುಗಳು ಅಡವಿಯಲ್ಲಿ ಸಿಕ್ಕ ಸಿಕ್ಕ ಕಡೆಗೆ ಹೋಗಹತ್ತಿದವು. ಕಣ್ಣಿಲ್ಲದ ಉಪಮನ್ಯುವು ಆಕಳುಗಳನ್ನು ಶೋಧಿಸಲು ಕಾಲಾಡಿಸುತ್ತ ಅಡವಿಯಲ್ಲಿ ಸಾಗಿದನು ಹೋಗಹೋಗುತ್ತ ಆಳವಾದ ಗರ್ತದಲ್ಲಿ ಬಿದ್ದನು.

ಆಕಳುಗಳು ತಮ್ಮನ್ನು ನಿಯಂತ್ರಿಸುವವನಿಲ್ಲದ್ದರಿಂದ ಸಿಕ್ಕಾಪಟ್ಟೆಯಾಗಿ ಓಡಾಡಹತ್ತಿದವು ರಾತ್ರಿಯಾಯಿತು ಉಪಮನ್ಯುವು ಬರಲಿಲ್ಲ. ಗುರುಗಳು ಅವನ ಶೋಧಕ್ಕಾಗಿ ಅಡವಿಗೆ ಹೋದರು, ಆಕಳುಗಳು ಸಿಕ್ಕಸಿಕ್ಕಲ್ಲಿ ನಿಂತಿರುವದನ್ನು ನೋಡಿದರು. ಉಪಮನ್ಯುವು ಕಾಣಲಿಲ್ಲ. ಗುರುಗಳು ಚಿಂತೆಗೊಳಗಾದರು ದೊಡ್ಡದನಿಯಿಂದ ಆ ಉಪಮನ್ಯುವನ್ನು ಒದರಿದನು. ಅವನು ಬಿದ್ದ ತೆಗ್ಗಿನಿಂದ 'ಓ' ಎಂಬ ಉತ್ತರಬಂದಿತು, ಹೋಗಿನೋಡಿದರು ದುರವಸ್ಥೆಗೀಡಾದ ಅವನನ್ನು ಮೇಲಕ್ಕೆ ತೆಗೆದರು, ಅವನ ಗುರುಭಕ್ತಿಗೆ ಮೆಚ್ಚಿದರು, ಅವನಿಗೆ ಅಶ್ವಿನೀಕುಮಾರರನ್ನು ಸ್ಮರಿಸಹೇಳಿದರು. ಅದರಂತೆ ಅವನು ಸ್ಮರಿಸಲು ಅವನ ಕಣ್ಣು ಕಾಣಿಸಹತ್ತಿದವು ಗುರುವಿಗೆ ನಮಸ್ಕರಿಸಿದನು. ಧೌಮ್ಯಋಷಿಗಳು ಅವನಿಗೆ ಮೇಲ್ತರದ ವರನೀಡಿ ಗೃಹಸ್ಥಾಶ್ರಮ ಕೈಕೊಳ್ಳು ಎಂದು ಹೇಳಿ ಬೀಳ್ಕೊಟ್ಟರು.

ಈ ಉಪಮನ್ಯು ಮುಂದೆ ಕೀರ್ತಿವಂತನಾದನು. ಬಹು ಜನ ಶಿಷ್ಯರು ಇವನಲ್ಲಿ ವೇದಾಭ್ಯಾಸ ಮಾಡಿದರು. ಅವರಲ್ಲಿ 'ಉತ್ತಂಕ'ನೆಂಬ ಶಿಷ್ಯನು ಹೆಸರಾದವನು. ಅವನು ಗುರುದಕ್ಷಿಣೆಗಾಗಿ ಪಾತಾಳದ ಶೇಷನಿಂದ

ಕುಂಡಲಗಳನ್ನು ತಂದನು. ಜನಮೇಜಯರಾಜನು ಸರ್ಪಯಜ್ಞ ನಡೆಯಿಸಿದಾಗ ಈ ಉತ್ತಂಕನೇ ಅಧ್ವರ್ಯು ನಾಗಿ ಸರ್ಪಗಳನ್ನು ಸಂಹಾರ ಮಾಡಿಸಿದನು, ಇಂದ್ರನನ್ನು ಮೊರೆಹೊಕ್ಕ ತಕ್ಷಕನನ್ನು ಅವನಿಂದ ಬಿಡಿಸಿ ತರಿಸಿದನು

ಬ್ರಾಹ್ಮಣ ಮುನಿಯೆ ! ಗುರುಕೃಪೆಯ ಸಾಮರ್ಥ್ಯ ಈ ಪ್ರಕಾರವಿರುವದು. ನಿನ್ನಂಥ ಗುರು ದ್ವೇಷಕನಿಗೆ ನರಕವಲ್ಲದೆ ಸದ್ಗತಿಸಿಗಲಾರದು. ಗುರುವಿನನ್ನು ಸಂತುಷ್ಟಗೊಳಿಸಿದವನಿಗೆ ಜ್ಞಾನಲಭಿಸುವದು. ಇನ್ನು ನೀನು ಹೀಗೆ ವ್ಯರ್ಥ ತಿರುಗಾಡಬೇಡ. ನಿನ್ನ ಆ ಗುರುವಿನ ಬಳಿಗೇ ಹೋಗು, ಅವನೇ ನಿನ್ನನ್ನು ಉದ್ಧರಿಸುವನು" ಎಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು.

ಶ್ರೀಗುರುಗಳು ಮಾಡಿದ ಉಪದೇಶದಿಂದ ಆ ಬ್ರಾಹ್ಮಣಮುನಿಯಲ್ಲಿ ಜ್ಞಾನೋದಯುವಾಯಿತು. ತನ್ನ ಅಪರಾಧ ಒಪ್ಪಿಕೊಂಡನು, ಮುತ್ತು ಒಡೆದರೆ ಅದು ಮತ್ತೆ ಹೊಂದಿಕೆಯಾಗಲಾರದು ಅದರಂತೆ ನನ್ನ ಸ್ಥಿತಿಯಾಗಿದೆ. ''ಈ ನನ್ನ ಶರೀರವು ನನ್ನ ವೈರಿಯು, ಇದು ಬದುಕಿದ್ದರೆ ಉಪಯೋಗವೇನು ? ನನಗೆ ಜೀವಿತದ ಆಸೆಯಿಲ್ಲ ನಿಶ್ಚಯವಾಗಿ ಪ್ರಾಣಬಿಡುವೆ'' ಎಂದು ಆ ಬ್ರಾಹ್ಮಣಮುನಿಯು ತನ್ನ ಅನುತಪ್ತತೆಯನ್ನು ಪ್ರಕಟಿಸಿದನು ಅದರಿಂದ ಅವನ ಶತಜನ್ಮಗಳ ಪಾಪ ದೂರಾಯಿತು. ಆದರೂ ಅವನು ಪ್ರಾಣ ತ್ಯಾಗಕ್ಕೆ ಸಿದ್ಧನಾದುದನ್ನರಿತು ಗುರುಗಳು— ''ಎಲೋ ಮುನಿಯೆ ! ಚಿಂತೆ ಮಾಡಬೇಡ, ನಿನ್ನ ದುರಿತ ದೋಷಗಳು ದೂರಾದವು, ನಿನ್ನಲ್ಲಿ ವೈರಾಗ್ಯಜನಿಸಿತು, ಇನ್ನು ನೀನು ಗುರುಚರಣವನ್ನು ಸ್ಮರಿಸು !! ಎಂದು ಅಪ್ಪಣೆ ಕೊಡಲು ಆ ಬ್ರಾಹ್ಮಣಮುನಿಯು ಶ್ರೀಗುರುಗಳನ್ನು ಒಳ್ಳೇಭಕ್ತಿಯಿಂದ ನಮಸ್ಕರಿಸಿದನು, ಸ್ತುತಿ

ಮಾಡಿದನು. ಗರುಗಳು ಅವನ ಮಸ್ತಕದ ಮೇಲೆ ತಮ್ಮ ಬಲ ಹಸ್ತವಿರಿಸಿದರು. ಕೊಡಲೆ ಅವನು ಜ್ಞಾನ ಸಂಪನ್ನನಾದನು. ಶ್ರೀ ಗುರುಗಳು ಅವನಿಗೆ— ''ನೀನು ನಿನ್ನ ಗುರುವಿನ ಬಳಿಗೆ ಹೋಗು" ಎಂದು ಹೇಳಲು ಅವನು ತನ್ನ ಗುರುವನ್ನು ಶೋಧಿಸುತ್ತ ಹೋದನು.

ಶ್ರೀಗುರುಗಳು ವೈಜನಾಥಕ್ಕೆ ಬಂದು ಒಂದು ವರ್ಷವಾಯಿತು, ನಂತರ ಅವರು ಶ್ರೀ ಭುವನೇಶ್ವರಿ ಸ್ಥಾನವಾದ 'ಭಿಲ್ಲವಡಿ' ಗ್ರಾಮಕ್ಕೆ ಹೋದರು. ಕೃಷ್ಣೆಯ ಪಶ್ಚಿಮದಂಡೆಯಲ್ಲಿದ್ದ ಔದುಂಬರ ವೃಕ್ಷವಿರುವ ಸ್ಥಾನದಲ್ಲಿ ಶ್ರೀ ಗುರುಗಳು ಗುಪ್ತವಾಗಿಯೇ ಇರಹತ್ತಿದರು."

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೧೭ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ಶ್ರೀಗುರು ಚರಿತ್ರೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ—

"ನಾಮಧಾರಕ ! ಶ್ರೀಗುರುಗಳು ಕೃಷ್ಣಾ ತಟಾಕದ ಭುವನೇಶ್ವರಿಯ ಪಶ್ಚಿಮಕ್ಕಿರುವ ಔದುಂಬರ ವೃಕ್ಷದ ಸಮೀಪದಲ್ಲಿ ಗೌಪ್ಯದಿಂದ ಇರಹತ್ತಿದರು. ಆ ಸ್ಥಾನದಲ್ಲಿ ಚಾತುರ್ಮಾಸವನ್ನು ಅನುಷ್ಠಾನದೊಂ

ದಿಗೆ ಕಳೆದರು. ಭುವನೇಶ್ವರಿ ಸನ್ನಿಧಾನದ ಆ ಸಿದ್ಧ ಸ್ಥಾನವು ಗಹನವಾದದ್ದರಿಂದಲೇ ಗುರುಗಳು ಅಲ್ಲಿ ಇರಹತ್ತಿದರು' ಎಂದು ಹೇಳಲು ನಾಮಧಾರಕನು— 'ಸ್ವಾಮಿ! ಗುರುಗಳು ಅದಾವ ಉದ್ದೇಶದಿಂದ ತಪ ಮಾಡಿದರು? ಹಾಗು ಭಿಕ್ಷೆಯನ್ನೇಕೆ ಕೈಕೊಳ್ಳುವರು? ಎಂದು ಕೇಳಲು ಸಿದ್ಧಮುನಿಯು— 'ದತ್ತಾತ್ರಯ ಮೂರ್ತಿಗಳು ಭಕ್ತ ಜನರ ಅನುಗ್ರಹಕ್ಕಾಗಿ ಭಿಕ್ಷುಕ ವೇಷ ಧರಿಸಿ ತೀರ್ಥಾಟನ ಮಾಡಿದರು. ಭೂಮಿಯ ಮೇಲೆ ಅನುಪಮ ತೀರ್ಥಗಳು ಗುಪ್ತವಾಗಿ ಎಷ್ಟೋ ಇರುವವು. ಗುರುಗಳು ಅವುಗಳಲ್ಲಿ ಸಂಚರಿಸಿ ಪ್ರಕಟಿಸಿದರು. ಇದು ಕೇವಲ ಭಕ್ತಜನೋದ್ಧಾರಕ್ಕಾಗಿ ವರ್ತಿಸಿತು. ಇನ್ನು ಅವರು ಗೌಪ್ಯವಾಗಿರುವ ಉದ್ದೇಶವೇನಂದರೆ— ದಿನದಿನಕ್ಕೂ ಹೆಚ್ಚಾಗುತ್ತಿರುವ ಜನವರ್ದಳವನ್ನು ಕಡಿಮೆ ಮಾಡಿಕೊಳ್ಳುವ ಉದ್ದೇಶವೇ ಅವರದಾಗಿದ್ದಿತು. ಆದರೂ ಅವರ ಆ ಉದ್ದೇಶವು ಕೊನೆಗಾಣಲಿಲ್ಲ. ಮೃಗಮದವನ್ನು ಮುಚ್ಚಿಟ್ಟರೆ ಅದರ ಪರಿಮಳವು ಸುತ್ತಲು ಪಸರಿಸಲಾರದೇ? ಅದರಂತೆಯೇ ಗುರುಗಳ ಸ್ವರೂಪವು ವ್ಯಕ್ತವಾಗಿ ಪ್ರಕಟವಾಯಿತು. ಆ ಮೂಲಕ ಅವರು ವಾಸ್ತವ್ಯದ ಸ್ಥಾನದಲ್ಲಿ ಹಲವು ವಿಚಿತ್ರ ಸಂಗತಿಗಳು ವರ್ತಿಸಿ ಅವರ ಮಹಿಮೆ ಇನ್ನಿಷ್ಟು ವರ್ಧಿಸಿತು. ಅವುಗಳಲ್ಲಿಯ ಒಂದು ಪ್ರಸಂಗವನ್ನು ವಿಸ್ತರಿಸಿ ಹೇಳುವೆನು ಕೇಳು.

"ಕರವೀರಕ್ಷೇತ್ರವಲ್ಲಿ ವೇದಶಾಸ್ತ್ರಸಂಪನ್ನ ಬ್ರಾಹ್ಮಣನೊಬ್ಬನಿದ್ದನು. ಕರ್ಮಮಾರ್ಗದ ಆಚರಣೆಯಲ್ಲಿ ಅವನು ನಿಷ್ಠೆಯುಳ್ಳವನಾಗಿದ್ದನು. ಆ ಬ್ರಾಹ್ಮಣನಿಗೆ ಒಬ್ಬ ಮಗನು ಹುಟ್ಟಿದನು. ಆವನು 'ತಂದೆಯ ಮಗನು' ಇಷ್ಟೇ ಹೊರತು ತಂದೆಯಂತೆ ವಿದ್ವಾಂಸನಾಗಲಿಲ್ಲ. ಮಂದಮತಿಯಾದ ಆ ಮಗನು

ಸ್ನಾನ–ಸಂಧ್ಯಾದಿ ಕ್ರಿಯಾಕರ್ಮವಿರಹಿತನಾಗಿ ಮೂರ್ಖ ಮಾಲಿಕೆಯಲ್ಲಿ ಗಣಿಸಲ್ಪಡಹತ್ತಿದನು. ಪಠಣ ಶಕ್ತಿ, ಗ್ರಹಣಶಕ್ತಿ, ಸ್ಮರಣಶಕ್ತಿಗಳು ಅವನಲ್ಲಿ ಎಷ್ಟುಮಾತ್ರವೂ ಇರಲಿಲ್ಲ. ಊರಿನ ವಿದ್ವಾಂಸರು ಅವನನ್ನು ಹಲವು ಬಗೆಯಿಂದ ಹೀಯಾಳಿಸಹತ್ತಿದರು. ಅವರೆಲ್ಲರು ತನ್ನನ್ನು ಧಿಕ್ಕರಿಸುವದು ಅವನಿಗೆ ಅಸಹನೀಯವಾಯಿತು- ತಾನು ವಿದ್ಯೆ ಕಲಿಯದ್ದಕ್ಕೆ ಪಶ್ಚಾತ್ತಾಪಪಡಹತ್ತಿದನು, ವಿದ್ಯೆಯ ಮಹತ್ವವನ್ನು ಸ್ಮರಣೆಗೆ ತಂದುಕೊಂಡು 'ನಾನು ವಿದ್ಯೆ ಕಲಿಯಲಿಲ್ಲವಲ್ಲ!' ಎಂದು ಹಳಹಳಿಸಹತ್ತಿದನು. ಊರಿನ ಬ್ರಾಹ್ಮಣರು ಸಿಕ್ಕಾಪಟ್ಟೆಯಾಗಿ ಅವನನ್ನು ಕುರಿತು ಹೇಯ ನುಡಿಯಹತ್ತಿದರು ತತ್ಪರಿಣಾಮವಾಗಿ ಅವನಲ್ಲಿ ವೈರಾಗ್ಯವೇ ಹುಟ್ಟಿತು. ಅದೇ ಕಾವಿನಲ್ಲಿ ಅವನು ಊರು–ಮನೆಗಳನ್ನು ಬಿಟ್ಟು ದೂರಿನ ಅರಣ್ಯ ಸೇರಿದನು ತನ್ನ ಅದೃಷ್ಟವನ್ನು ಹಳಿದುಕೊಳ್ಳುತ್ತ ಹಸಿವೆ–ನೀರಡಿಕೆಗಳನ್ನು ತೊರೆದು ಪ್ರಾಣಕೊಡುವ ನಿಶ್ಚಯ ಮಾಡಿಕೊಂಡನು. ಆದರೂ ಅವನು ಮತ್ತೆ ವಿಚಾರಮಾಡಿದನು, ಸಮೀಪದಲ್ಲಿಯ ಭುವನೇಶ್ವರಿ ದೇವಿಯನ್ನು ಕಂಡು ಆಕೆಯೆದುರು ನಿಂತು ಪ್ರಾರ್ಥಿಸಬೇಕು.. ವಿದ್ಯಾದಿಗಳಿಂದ ತನ್ನ ಇಹ ಜನ್ಮ ಸಾರ್ಥಕಮಾಡಿಕೊಳ್ಳಬೇಕು. ಇವೆಲ್ಲವನ್ನು ಮನಸಿನಲ್ಲಿ ತಂದುಕೊಂಡು ನೆಟ್ಟನೆ ಭಿಲ್ಲವಡಿಗೆ ಹೋದನು. ಭುವನೇಶ್ವರಿ ದೇವತೆಯ ದರ್ಶನ ತೆಗೆದುಕೊಂಡನು. ತನ್ನ ಉದ್ದಿಷ್ಟಸಾಧನೆಗಾಗಿ ಸ್ನಾನ–ಸಂಧ್ಯೆ, ಅನ್ನ–ನೀರು, ನಿದ್ರೆ-ಹಸಿವು ಇವುಗಳೇನೊಂದನ್ನು ಮನಸಿನಲ್ಲಿ ತಾರದೆ ಭುವನೇಶ್ವರಿಯ ಮುಂದೆ ಕೈಮುಗಿದುಕೊಂಡು ಅತ್ತಿತ್ತ ಚಲಿಸದೆ ನಿಂತುಬಿಟ್ಟನು. ಒಂದು ದಿನವಾಯಿತು, ಮರುದಿನವು ಹೋಯಿತು, ಮೂರನೆಯ ದಿನವೂ ಪ್ರಾಪ್ತವಾಯಿತು. ದೇವತೆಯು ಪ್ರತ್ಯಕ್ಷಳಾಗಲಿಲ್ಲ ಸ್ವಪ್ನ ಸೂಚನೆ ಸಹ ಆಗಲಿಲ್ಲ. ಆದರಿಂದಾಗಿ ಅವನು ದೇವ

ತಿಯ ಹೇಳಿ ಕುಪಿತನಾಗಿ ಶಸ್ತ್ರದಿಂದ ತನ್ನ ನಾಲಿಗೆಯನ್ನು ಕೊಯ್ದುಕೊಂಡು ಆಕೆಯ ಮುಂದಿಟ್ಟನು. 'ಇದಕ್ಕೂ ಮೀರಿ ನೀನು ಅನುಗ್ರಹಿಸದಿದ್ದರೆ ನನ್ನ ಶಿರಸ್ಸನ್ನೇ ಕೊಯ್ದು ನಿನ್ನ ಪಾದಮೇಲಿರಿಸುವೆನು' ಎಂಬ ಮನದಿಂದ ನಿಶ್ಚಯ ಮಾಡಿಕೊಂಡು ದೇವಿಯ ಮುಂದೇ ಕುಳಿತನು.

ದೇವಿಯು ಆ ಬ್ರಾಹ್ಮಣ ಪುತ್ರನ ನಿರ್ವಾಣ ಸ್ಥಿತಿಯನ್ನೂ ನಿಶ್ಚಿತಮತಿಯನ್ನೂ ನೋಡಿ ಅವನಿಗೆ ಸ್ವಪ್ನದೃಷ್ಟಾಂತದಿಂದ— "ಎಲೈ ಬಾಲಕಾ! ನೀನು ನಮ್ಮ ಮೇಲೆ ಸಿಟ್ಟಾಗಬೇಡ ಕೃಷ್ಣೆಯ ಪಶ್ಚಿಮ ತಟಾಕದಲ್ಲಿದ್ದ ಔದುಂಬರಕ್ಕೆ ಹೋಗು. ಆ ವೃಕ್ಷದ ಸನ್ನಿಧಾನದಲ್ಲಿ ಒಬ್ಬ ಮಹಾ ತಪಸ್ವಿಯಿರುವನು, ಅವನು ಸಾಕ್ಷಾತ್ ಚಂದ್ರಮೌಳಿಯ ಅವತಾರಿಕನು. ಅವನಿಂದಲೇ ನಿನ್ನ ಅಭೀಷ್ಟೆ ಪೂರ್ಣವಾಗುವದು" ಎಂಬ ಸೂಚನೆ ಕೊಟ್ಟಂತಾಯಿತು.

ಮರುದಿನ ಆ ಬ್ರಾಹ್ಮಣ ಪುತ್ರನು ಕನಸಿನಲ್ಲಿ ದೇವತೆಯು ತನಗೆ ಸೂಚಿಸಿದಂತೆ ಔದುಂಬರ ಸನ್ನಿಧಿಗೆ ಬಂದನು ಶ್ರೀ ಗುರುಗಳನ್ನು ಕಂಡನು, ಶಿರಬಾಗಿ ನಮಸ್ಕರಿಸಿದನು. ಮನಸಿನಿಂದ ಗುರುಸ್ತೋತ್ರ ಮಾಡಿದನು.

ಶ್ರೀ ಗುರುಗಳು ಆ ಬ್ರಾಹ್ಮಣ ಪುತ್ರನ ವೃತ್ತವನ್ನೆಲ್ಲ ತಾವೇ ಅರಿತುಕೊಂಡು ಸಂತುಷ್ಟರಾಗಿ ಅವನನ್ನು ತಮ್ಮ ಮುಂದೆ ಕರೆದರು ತಮ್ಮ ವರದ ಹಸ್ತವನ್ನು ಅವನ ತಲೆಯಮೇಲಿಟ್ಟರು, ಕೂಡಲೆ ಅವನ ಛೇದಿತ ಜಿಹ್ವೆಯು ಮೊದಲಿನಂತೆ ಉತ್ಪನ್ನವಾಯಿತು. ಶ್ರೀ ಗುರು ಚರಣದ ಸ್ಪರ್ಶವಾದ ಕೂಡಲೆ ಆ ಬ್ರಾಹ್ಮಣ ಪುತ್ರನಿಗೆ ನಾಲಿಗೆ ಚಿಗಿಯಿತಲ್ಲದೆ ಅವನು ಸಕಲ ವಿದ್ಯಾಪಾರಂಗತನಾದನು. ವೇದಶಾಸ್ತ್ರ ತರ್ಕ

ಭಾಷ್ಯಗಳು ಅವನಿಗೆ ಮುಖೋದ್ಗತವಾದವು.

ನಾಮಧಾರಕನೆ ! ಶ್ರೀ ಗುರು ಮಹಿಮೆ ಅಗಾಧವಾದುದು. ಶ್ರೀ ಗುರುಗಳ ವಾಸವ್ತವಿರುವಲ್ಲೆಲ್ಲ ಇಂಥ ಅವರ ಅದ್ಭುತ ಮಹಿಮೆಗಳೇ ಪ್ರಕಟವಾಗುತ್ತ ಬಂದಿರುವವು" ಎಂದು ಸಿದ್ಧಮುನಿಯು ಹೇಳಿದನು.

—o—

## ೧೮ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ|| ಸಿದ್ಧಮುನಿಯು ನಾಮಧಾರಕನನ್ನು ಕುರಿತು—ನಾಮಧಾರಕನೇ ! ನಿನಗೆ ಭಿಲ್ಲವಡಿ ಸ್ಥಾನ ಮಹಿಮೆಯನ್ನು ಹೇಳಿದೆನು. ಮುಂದಿನ ಚರಿತ್ರೆ ಹೇಳುವೆನು ಕೇಳು.

ಶ್ರೀ ಗುರುಗಳು ಭಿಲ್ಲವಡಿಯಲ್ಲಿ ಸ್ವಲ್ಪ ದಿನವಿದ್ದು ಪ್ರಕಟರಾಗಿ ಮುಂದೆ ಸಾಗಿದರು. 'ದಕ್ಷಿಣ ವಾರಣಾಸಿ' ಎಂದು ಪ್ರಸಿದ್ಧವಾದ ವರುಣಾ ಸಂಗಮಕ್ಕೆ ಬಂದರು ಅಲ್ಲಿಂದ ಮುಂದೆ ಪ್ರಯಾಣ ಬೆಳೆಸಿ ಕೃಷ್ಣಾತಟಾಕದ ತೀರ್ಥಗಳನ್ನು ಪಾವನಗೊಳಿಸುತ್ತ ಪಂಚಗಂಗಾ ಸಂಗಮಕ್ಕೆ ಬಂದರು. ಅಲ್ಲಿ ಅವರು ಹನ್ನೆರಡು ವರುಷಗಳ ದೀರ್ಘಕಾಲ ಕಳೆದರು. ಆ ಸಂಗಮದಲ್ಲಿ ಕಾಶಿ–ಪ್ರಯಾಗಕ್ಕೆ ಸಮಾನ ಪುಣ್ಯ

ದಾಯಕ ಮನೋಹರ ತೀರ್ಥಗಳಿರುವವು. ಕುರವಪುರವು ಕುರುಕ್ಷೇತ್ರಕ್ಕೆ ಸಮಾನವಾದದ್ದೆಂದೆನ್ನಿಸಿದರೂ ಈ ಪಂಚಗಂಗಾ–ಕೃಷ್ಣಾ ಸಂಗಮ ಸ್ಥಾನವು ಕುರವಪುರಕ್ಕಿಂತ ಶ್ರೇಷ್ಠವೆಂದು ಗಣಿಸಲ್ಪಡುತ್ತದೆ. ಅಲ್ಲಿಯ ತೀರ್ಥಗಳು ಅಗಮ್ಯವೆಂದೇ ತಿಳಿದು ಶ್ರೀ ಗುರುಗಳು ಅಲ್ಲಿ ಇರಹತ್ತಿದರು ಪಂಚಗಂಗೆಯು ಪುರಾಣ ಪ್ರಸಿದ್ಧವು. ಶಿವಾ, ಭದ್ರಾ, ಭೋಗಾವತಿ, ಕುಂಭಿ ಹಾಗು ಸರಸ್ವತಿ ಈ ಐದು ನದಿಗಳು ಕೂಡಿ 'ಪಂಚಗಂಗೆ' ಎಂಬ ಪವಿತ್ರ ನದಿಯಾಗಿದೆ. ಈ ನದಿಯು ಕೃಷ್ಣೆಗೆ ಸಂಗಮವಾದ ಸ್ಥಾನದಲ್ಲಿ 'ಅಮರ ಪುರ' ಎಂಬ ಗ್ರಾಮವಿದೆ. ಪ್ರಯಾಗ ಸಂಗಮದಂತೆ ಇದು ಅನುಪಮ ಸ್ಥಾನವಾಗಿದೆ. ಇಲ್ಲಿ ಔದುಂಬರ ವೃಕ್ಷವೂ, ಅಮರೇಶ್ವರ ದೇವಸ್ಥಾನವೂ ಇರುವವು. ಅಮರೇಶ್ವರ ಸನ್ನಿಧಾನದಲ್ಲಿ ಅರವತ್ನಾಲ್ಕು ಯೋಗಿನಿ ಯರಿರುವರು. ಅಲ್ಲಿಯೇ ಶಕ್ತಿತೀರ್ಥವಿದೆ. ಅಮರೇಶ್ವರ ಲಿಂಗವು ವಿಶ್ವನಾಥವೆಂದೂ ಇಲ್ಲಿಯ ಸಂಗಮ ಸ್ಥಾನವು ಪ್ರಯಾಗ ಮಾಘಸ್ನಾನಕ್ಕಿಂತ ಮಿಗಿಲಾದ ಪುಣ್ಯಕರವೆಂದೂ ತಿಳಿಯಲ್ಪಡುತ್ತದೆ. ಈ ಸಂಗಮ ಸ್ಥಾನವಲ್ಲಿ ಎಷ್ಟೋ ತೀರ್ಥಗಳಿರುವವು. ಕೃಷ್ಣೆಯು ಪಶ್ಚಿಮಾಭಿಮುಖವಾಗಿರುವಲ್ಲಿ 'ಶುಕ್ರತೀರ್ಥ' ವಿರುವದು. ಔದುಂಬರ ಸನ್ನಿಧಿಯಲ್ಲಿ ಪಾಪವಿನಾಶಿ, ಕಾಮ್ಯತೀರ್ಥ ಹಾಗು ಸಿದ್ಧವರದತೀರ್ಥ ಎಂಬ ಮೂರು ತೀರ್ಥಗಳಿರುವವು. ಮುಂದೆ ಶಕ್ತಿತೀರ್ಥ, ಅಮರತೀರ್ಥ, ಕೋಟಿತೀರ್ಥ ಇವು ಇರುವವು. ಕೃಷ್ಣೆ ಹಾಗು ವೇಣಿ ನದಿಗಳೂ ಪಂಚಗಂಗೆಯ ಐದು ನದಿಗಳೂ ಕೂಡಿ ಇಲ್ಲಿ ಸಪ್ತ ನದಿಗಳ ಸಮಾಗಮವಾದುದರಿಂದ ಇಲ್ಲಿಯ ಮಹಿಮೆ ಹೆಚ್ಚಿನದು. ಈ ಸ್ಥಾನವು ಸಿದ್ಧಸ್ಥಾನವೆನ್ನಿಸಿದೆ. ಆದ್ದರಿಂದಲೇ ಶ್ರೀ ಗುರುಗಳು ಪ್ರಕಟರಾಗಿ ಇಲ್ಲಿ ಹನ್ನೆರಡು ವರುಷ ಇದ್ದರು.

ಹೀಗೆ ಇರುತ್ತಿರಲು ಶ್ರೀ ಗುರುಗಳು ಭಿಕ್ಷಾರ್ಥವಾಗಿ ಅಮರಪುರದಲ್ಲಿಯ ಒಬ್ಬ ಬ್ರಾಹ್ಮಣನ ಮನೆಗೆ ಹೋದನು. ಆ ಬ್ರಾಹ್ಮಣನು ಸಾತ್ವಿಕನೂ ಸುಶೀಲನೂ ಆಗಿದ್ದನು. ಬಡತನದಲ್ಲಿ ಕಾಲಕ್ಷೇಪ ಮಾಡುತ್ತಿದ್ದನು. ಅವನು ಮನೆಯ ಅಂಗಳದಲ್ಲಿ ಒಂದು ಚಳ್ಳವರೆಯ ಬಳ್ಳಿಯನ್ನು ಬೆಳಸಿದ್ದನು. ಅದರ ಕಾಯಿ-ಬೀಜಗಳಿಂದಲೇ ಆ ಬ್ರಾಹ್ಮಣ ಕುಟುಂಬದ ಉದರನಿರ್ವಾಹವು ತೊಂದರೆಯಿಲ್ಲದೆ ಸಾಗಿದ್ದಿತು. ಶ್ರೀ ಗುರುಗಳು ಆ ಬ್ರಾಹ್ಮಣನ ಮನೆಗೆ ಭಿಕ್ಷೆಗೆ ಹೋಗಲು ಬ್ರಾಹ್ಮಣನು ಅತಿಥಿ ಪೂಜೆ ಮಾಡಿ ಸತ್ಕರಿಸಿದನು. ಚಳ್ಳವರಿಯ ಪಲ್ಯದೊಂದಿಗೆ ಭಿಕ್ಷೆಯ ನೈವೇದ್ಯ ತೋರಿಸಿದನು.

ಬ್ರಾಹ್ಮಣನು ನೀಡಿದ ಭಿಕ್ಷೆ-ಭೋಜನದಿಂದ ಗುರುಗಳು ಸಂತುಷ್ಟರಾದರು 'ಬ್ರಾಹ್ಮಣಾ! ನಿನ್ನ ದಾರಿದ್ರ್ಯ ಗತಿಸಿತು, ಸುಖವಾಗಿ ಇರು' ಎಂದು ವರ ವಾಕ್ಯ ನುಡಿದು ಹೊರ ಹೊರಟರು, ಅವನ ಮನೆಯ ಮುಂದಿನ ಅಂಗಳಕ್ಕೆ ಬಂದರು. ಅಲ್ಲಿ ಚಲ್ಲುವರಿದು ಹಬ್ಬಿದ ಚಳ್ಳವರೆಯ ಬಳ್ಳಿಯನ್ನು ನೋಡಿದರು, ಹಾಗು ಅದರ ಬೊಡ್ಡೆಯನ್ನು ಮುರಿದು ಚೆಲ್ಲಿಕೊಟ್ಟು ಮುಂದೆ ತಾವಿರುವ ಸ್ಥಾನಕ್ಕೆ ಹೋದರು.

ಬ್ರಾಹ್ಮಣನ ಹೆಂಡತಿಯು ಅಂಗಳಕ್ಕೆ ಬಂದು ನೋಡುತ್ತಾಳೆ ಬಳ್ಳಿಯು ಮುರಿದು ಸೀಲ ಬೊಡ್ಡೆಯಿಂದ ಬೇರೆ ಆಗಿ ಬಿದ್ದಿರುವದು, ಅದಕ್ಕಾಗಿ ಅವಳು ವ್ಯಥೆಪಡಹತ್ತಿದಳು ಬ್ರಾಹ್ಮಣನೂ ಮಕ್ಕಳೂ ಅಲ್ಲಿಗೆ ಬಂದರು. 'ನಮ್ಮ ಮನೆಗೆ ಭಿಕ್ಷೆಗೆ ಬಂದ ಯತಿಯೇ ಇದನ್ನು ಮುರಿದು ಹಾಕಿದನು' ಎಂದು ಎಲ್ಲರಿಗೂ ಹೇಳುತ್ತ ದೋಷವಿಟ್ಟು ಒದರಾಡಹತ್ತಿದಳು, ಶಪಿಸಹತ್ತಿದಳು. ಹುಡುಗರೂ ಅಳಹತ್ತಿದರು, ಬ್ರಾಹ್ಮಣನು ತನ್ನ ಹೆಂಡತಿಗೆ ಬುದ್ಧಿ ಹೇಳಿ ಸಮಾಧಾನ ಮಾಡಿದನು. 'ಎಷ್ಟಿತ್ತು ಅಷ್ಟಾಯಿತು ಒಳಕ್ಕೆ

ಹೋಗು' ಎಂದು ಆಕೆಯನ್ನು ಒಳಕ್ಕೆ ಕಳಿಸಿದನು. ಹಾಗು ಮುರಿದ ಬಳ್ಳಿಯನ್ನೆಲ್ಲ ಒಯ್ದು ಸಂಗಮದಲ್ಲಿ ಚೆಲ್ಲಿ ಮನೆಗೆ ಬಂದನು.

ಬಳ್ಳಿಯ ಬೊಡ್ಡೆಯು ಗೂಟದಂತೆ ಮೇಲೆ ಹಾಯ್ದಿತ್ತು. ಬ್ರಾಹ್ಮಣನು ಅದನ್ನು ಅಗಿದು ಚೆಲ್ಲುವದಕ್ಕೆ ಗುದ್ದಲೀ ತಂದನು, ಗುದ್ದಲಿಯ ಒಂದೇ ಹೊಡೆತ ಹಾಕಿದನು, ಖಟ್-ಖಟಲ್ ಎಂಬ ಸಪ್ಪಳವಾಯಿತು. ನೋಡುತ್ತಾನೆ ಆ ಬೊಡ್ಡೆಯ ಕೆಳಗೆ ಸಂಪೂರ್ಣ ಹೊನ್ನುಗಳಿಂದ ತುಂಬಿದ ತಾಮ್ರದ ಕೊಡ! ಆಗ ಅವನ ಹರ್ಷವುಕ್ಕೇರಿತು. ಕೊಡ ಕಡೆಗೆ ಎಬ್ಬಿಸಿಕೊಂಡೊಯ್ದು ಹೆಂಡತಿಯ ಮುಂದಿಟ್ಟನು. ಆಕೆ ದಂಗಾಗಿ 'ಇದೇನು?' ಎಂದು ಕೇಳಲು ಬ್ರಾಹ್ಮಣನು— 'ನಿನ್ನಿಂದ ಭಿಕ್ಷೆ ಸ್ವೀಕರಿಸಿದ ಗುರುಗಳ ಪ್ರಸಾದ' ಎಂದು ಹೇಳಿದನು.

ಆಗ ದಂಪತಿಗಳು 'ನಮ್ಮ ದಾರಿದ್ರ್ಯವು ದೂರಾಯಿತು. ಶ್ರೀ ಗುರುಗಳಿರುವಲ್ಲಿಗೆ ಹೋಗಿ ಈ ಸಂಗತಿಯನ್ನು ಅವರಿಗೆ ತಿಳಿಸೋಣ ಹಾಗು ಅಜ್ಞರಾದ ನಾವು ಅವರನ್ನು ದೂಷಿಸಿದ ಬಗೆಗೆ ಅವರಿಂದ ಕ್ಷಮೆಯನ್ನು ಪಡೆಯೋಣ" ಎಂದು ಅವರು ಔದುಂಬರ ಸನ್ನಿಧಿಗೆ ಹೋದರು. ಸ್ವಾತ್ಮಾನಂದದಲ್ಲಿ ಕುಳಿತಿದ್ದ ಗುರುಗಳನ್ನು ಕಂಡು ಸಾಷ್ಟಾಂಗ ನಮಸ್ಕಾರ ಮಾಡಿದರು. ಹಾಗು ಹೊನ್ನಿನ ಕೊಡ ದೊರೆತುದನ್ನೂ ತಿಳಿಸಿದರು.

ಶ್ರೀ ಗುರುಗಳು— 'ಬ್ರಾಹ್ಮಣಾ! ನಿನ್ನ ಅದೃಷ್ಟ ಪಲ್ಲಟವಾಯಿತು, ನಿನ್ನ ದಾರಿದ್ರ್ಯ ದೂರಾಯಿತು, ಹೊನ್ನಿನ ಕೊಡ ದೊರೆತುದನ್ನು ಪ್ರಕಟಿಸದೆ ಅದನ್ನು ಯೋಗ್ಯ ವಿನಿಯೋಗ ಮಾಡು" ಎಂದು

ಹೇಳಿದರು.

ಬ್ರಾಹ್ಮಣನೂ ಅವನ ಪತ್ನಿಯೂ ಮತ್ತೊಮ್ಮೆ ನಮಸ್ಕರಿಸಿ ತಮ್ಮ ಮನೆಗೆ ಹಿಂದಿರುಗಿದರು. ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

# ೧೯ನೆಯ ಅಧ್ಯಾಯ

ಶ್ರೀಗಣೇಶ–ಶಾರದಾ–ಗುರುಭ್ಯೋನಮಃ॥ ನಾಮಧಾರಕನು ಸಿದ್ಧಮುನಿಗೆ ನಮಸ್ಕರಿಸಿ— 'ಸ್ವಾಮಿ ! ಶ್ರೀ ಗುರು ಚರಿತ್ರೆಯ ಶ್ರವಣಕ್ಕಾಗಿ ನನ್ನ ಹೃದಯವು ಸ್ಫುರಿಸಹತ್ತಿದೆ. ನಿನ್ನ ಕೃಪೆಯಿಂದ ನನ್ನ ಅಂತಃಕರಣವು ಜಾಗ್ರತವಾಯಿತು. ಇನ್ನು ಮುಂದಿನ ಕಥೆಯನ್ನು ಬೋಧಿಸುವದಾಗಬೇಕು" ಎಂದು ಬೇಡಿಕೊಳ್ಳಲು ಸಿದ್ಧಮುನಿಯು—

ನಾಮಧಾರಕನೆ ! ಶ್ರೀ ಗುರುಗಳು ಪುಣ್ಯವೃಕ್ಷವಾದ ಔದುಂಬರ ಸನ್ನಿಧಿಯಲ್ಲಿ ಇರಹತ್ತಿದರು. ವೇದಗಳು ಔದುಂಬರ ವೃಕ್ಷದ ಮಹಿಮೆಯನ್ನು ಕೊಂಡಾಡುತ್ತಿರುವವು. ನಾರಾಯಣನು ನೃಸಿಂಹಾವತಾರದಲ್ಲಿ ಹಿರಣ್ಯಕಶ್ಯಪನ ಹೊಟ್ಟೆ ಸೀಳಿ ವಧಿಸಿದನಲ್ಲವೇ ! ಆಗ ಆ ದೈತ್ಯನ ಜಠರದಲ್ಲಿಯ ಕಾಳಕೂಟ ವಿಷವು ನೃಸಿಂಹನ ನಖಗಳಿಗೆ ಸೇರಿ ಪಸರಿಸಿ ನಖಗಳು ತಪ್ತವಾದವು. ಆ ಉಗ್ರತೆಯನ್ನು ಶಾಂತಪಡಿಸುವದಕ್ಕಾಗಿ ಮಹಾಲಕ್ಷ್ಮೀದೇವಿಯು ಔದುಂಬರದ ಫಲಗಳನ್ನು ತರಿಸಿ ನೃಸಿಂಹನ ಉಗುರುಗಳಿಗೆ ಚುಚ್ಚಿ

ಡನು. ಆದರಿಂದ ಆ ದೇವನು ಶಾಂತನಾದನು. ಹಾಗು ಈ ಶಾಂತತೆಯನ್ನುಂಟುಮಾಡಿದ ಫಲದ ವೃಕ್ಷವಾದ ಔದುಂಬರಕ್ಕೆ ನೃಸಿಂಹನು— ''ನೀನು ಭೂಲೋಕದ ಕಲ್ಪವೃಕ್ಷವಾಗಿ ಸದಾ ಫಲದೊಂದಿಗೆ ಶೋಭಿಸು. ನಿನ್ನ ದರ್ಶನದಿಂದ ಉಗ್ರ ವಿಷವು ಶಾಂತವಾಗಲಿ'' ಎಂದು ವರ ನೀಡಿದನು. ಮತ್ತು ಆತನು ಆ ವೃಕ್ಷಕ್ಕೆ ''ನಿನ್ನನ್ನು ಆರಾಧಿಸುವ ಮಾನವನ ಆಕಾಂಕ್ಷೆ ಈಡೇರಲಿ, ಬಂಜೆಯು ಪುತ್ರವತಿಯಾಗಲಿ, ದರಿದ್ರನು ಸಿರಿವಂತನಾಗಲಿ ನಿನ್ನ ನೆರಳು ಬಿದ್ದ ಜಲದಲ್ಲಿ ಸ್ನಾನ ಮಾಡುವವನಿಗೆ ಭಾಗೀರಥಿ ಸ್ನಾನದ ಪುಣ್ಯ ಲಭಿಸಲಿ, ನಿನ್ನ ನೆರಳಲ್ಲಿ ಕುಳಿತು ಅನುಷ್ಠಾನ ಮಾಡಲು ಅದು ಸಿದ್ಧಿಸಲಿ. ನಿನ್ನನ್ನು ಸೇವಿಸುವವರು ಆಯುರಾರೋಗ್ಯ ಧನ ಸಂಪದ ಪಡೆಯಲಿ, ನಾನು ಮಹಾಲಕ್ಷ್ಮೀಸಹಿತ ನಿನ್ನಲ್ಲಿ ವಾಸವಾಗಿರುವೆನು'' ಎಂದು ಆ ವೃಕ್ಷಕ್ಕೆ ವರವಾಕ್ಯದಿಂದ ಹೇಳಿದನು ಆದರಿಂದ ಆ ವೃಕ್ಷವು ಮಹತ್ವಕೊಂಡಿತು. ಅಷ್ಟರಿಂದಲೇ ತ್ರಿಮೂರ್ತಿ ಅವತಾರ ಶ್ರೀ ಗುರುಗಳು ಸಂಗಮದ ಔದುಂಬ ಸನ್ನಿಧಿಯಲ್ಲಿ ಇರಹತ್ತಿದರು.

ಶ್ರೀ ಗುರುಗಳು ಆ ವೃಕ್ಷ ಸನ್ನಿಧಿಯಲ್ಲಿ ಅಹರ್ನಿಶಿ ಗೌಪ್ಯವಾಗಿ ಇರಹತ್ತಿದರು. ನಿತ್ಯ ಮಧ್ಯಾಹ್ನ ಸಮಯದಲ್ಲಿ ಅಲ್ಲಿ ದೊಡ್ಡ ಸಮಾರಂಭವೇ ಜರಗುತ್ತಿತ್ತು. ಆಗ ಅರವತ್ನಾಲ್ಕು ಯೋಗಿನಿಯರು ಶ್ರೀ ಗುರುಗಳ ಪೂಜೆಗಾಗಿ ಅಲ್ಲಿಗೆ ಬರುವರು. ಸುಗಂಧ ಪರಿಮಳದಿಂದ ಪೂಜಿಸುತ್ತಿದ್ದರು. ಬಳಿಕ ಭೋಜನಕ್ಕಾಗಿ ಆಮಂತ್ರಿಸಿ ಗುರುಗಳನ್ನು ತಮ್ಮ ಸ್ಥಾನಕ್ಕೆ ಕರೆದೊಯ್ದು ಹಿಂದಿನಿಂದ ಔದುಂಬರಕ್ಕೆ ಬಂದು ಕಳಿಸುತ್ತಿದ್ದರು. ಈ ಕ್ರಮವು ಅಲ್ಲಿ ಗುರುಗಳು ವಾಸವಾದಂದಿನಿಂದ ನಡೆದಿತ್ತು. ಯಾರಿಗೂ ಇದು ಗೊತ್ತಿರಲಿಲ್ಲ.

ಗ್ರಾಮನಿವಾಸಿಗಳಿಗೆ ಗುರುಗಳ ಇರುವಿಕೆಯ ಬಗೆಗೆ ವಿಚಾರ ಹುಟ್ಟಿತು. ಊರಲ್ಲಿ ಒಂದು ದಿನವೂ ಭಿಕ್ಷೆಗೆ ಬಾರದ ಇವರು ಇಲ್ಲಿ ಏನು ಮಾಡುತ್ತಿದ್ದಾರೆ? ಇದನ್ನು ಪರೀಕ್ಷಿಸಬೇಕು ಎಂದು ನಿಶ್ಚಯಿಸಿ ಒಬ್ಬ ಮನುಷ್ಯನನ್ನು ನಿರೀಕ್ಷಣೆಗೆಂದು ಅಲ್ಲಿ ಕಾವಲು ಇಟ್ಟರು. ಮಧ್ಯಾಹ್ನ ಸಮಯದಲ್ಲಿ ಆ ಗುರು ಸ್ಥಾನದ ಸುತ್ತಲು ನಡೆದ ಸಮಾರಂಭದ ಗದ್ದಲ ನೋಡಿ ಆ ಕಾವಲಿನ ಮನುಷ್ಯನು ಭಯಗೊಂಡನು. ಅವನು ಹಾಗೇ ಗ್ರಾಮಕ್ಕೆ ಹಿಂತಿರುಗಿ ಹೋಗಿ ತನ್ನನ್ನು ಪ್ರೇರೇಪಿಸಿದವರನ್ನು ಕುರಿತು— "ಶ್ರೀಗುರುಗಳ ಅಂತವನ್ನು ನೋಡುವವನ ಅಂತ್ಯವಾಗುವದರಲ್ಲಿ ಸಂಶಯವಿಲ್ಲ. ಆದ್ದರಿಂದ ಈ ಕೆಲಸಕ್ಕೆ ನಾನು ಒಲ್ಲೆನು' ಎಂದು ಹೇಳಿ ತಾನು ನೋಡಿದ ದೃಶ್ಯವನ್ನು ವರ್ಣಿಸಿ ಹೇಳಿದನು. ಅದನ್ನು ಕೇಳಿ ಎಲ್ಲ ಬ್ರಾಹ್ಮಣರು ಭೀತಿ–ವಿಸ್ಮಯಪಟ್ಟರು.

ಗುರುಗಳು ವಾಸವಾಗಿರುವ ಆ ಸ್ಥಾನದ ಸನಿಹದಲ್ಲಿಯೇ ಒಬ್ಬ ಅಂಬಿಗನ ಹೊಲವಿದ್ದಿತು. ಅಂಬಿಗನು ತನ್ನ ಹೊಲ ಕಾಯುವದಕ್ಕಾಗಿ ದಿನಾಲು ಹೋಗುತ್ತಿದ್ದನು. ಒಂದು ದಿನ ಅವನು ಮಧ್ಯಾಹ್ನ ಸಮಯದಲ್ಲಿ ಹೊಲಕ್ಕೆ ಹೋದಾಗ ಸಹಜವಾಗಿ ಸಂಗಮಕ್ಕೆ ಹೋದನು. ಶ್ರೀ ಗುರುಗಳ ಪೂಜೆಗೆ ಬಂದ ಯೋಗಿನಿಯರು ಅಲ್ಲಿ ನಡೆಯಿಸಿದ ಸಮಾರಂಭವನ್ನು ಕಣ್ಮುಟ್ಟ ಕಂಡು ವಿಸ್ಮಯಗೊಂಡನು. ಆ ಯೋಗಿನಿಯರು ಮಾಡುತ್ತಿರುವ ಪೂಜೆ ನೋಡುತ್ತ ಅಲ್ಲಿಯೇ ಉತ್ಸುಕತೆಯಿಂದ ನಿಂತನು.

ಶ್ರೀ ಗುರುಗಳಿಗೆ ಯೋಗಿನಿಯರು ಮಾಡುತ್ತಿರುವ ಪೂಜೆ–ಆರತಿಗಳು ಮುಗಿದವು. ನಂತರ ಯೋಗಿನಿಯರು ಗುರುಗಳೊಂದಿಗೆ ಗಂಗಾಪ್ರವಾಹದಲ್ಲಿ ಸೇರಿದರು. ಮುಂದೇನು ಚಮತ್ಕಾರ ನಡೆಯುವ

ಕೌತುಕವನ್ನು ನೋಡುವವನ್ನಾಗಿ ಅಂಬಿಗನು ಅವರನ್ನು ಬೆಂಬಳಿಸಿದನು. ಯಾರೂ ನೋಡದಂತೆ ಕಳ್ಳ ಹೆಜ್ಜೆ ಹಾಕುತ್ತ ಅವನೂ ಗಂಗಾಪ್ರವಾಹ ಹೊಕ್ಕನು. ತುಸು ಮುಂದೆ ಹೋಗುವಷ್ಟರಲ್ಲಿ ಪ್ರವಾಹದಲ್ಲಿ ಇಬ್ಭಾಗವಾಗಿ ಮಾರ್ಗ ತೋರಿತು. ಆ ಮಾರ್ಗದಿಂದ ಯೋಗಿನಿಯರೂ ಗುರುಗಳೂ ಮುನ್ನಡೆದರು. ಅಂಬಿಗನೂ ಹಿಂದಿಂದೆ ಅದೇ ದಾರಿಯಿಂದ ನಡೆದನು. ಅವರೆಲ್ಲರು ಕೆಲವಂತರ ಸಾಗಿದ ಮೇಲೆ ಅಮರಾಪತಿಗೆ ಸಮಾನಾದ ಒಂದು ನಗರವು ದಿವ್ಯ ಗೋಪುರಗಳೊಂದಿಗೆ ಕಾಣಿಸಿತು. ಆ ನಗರದ ಸನಿಹಕ್ಕೆ ಹೋಗಲು ನಗರದ ನಾರಿಯರು ಆರತಿ ಹಿಡಕೊಂಡು ಬಂದರು. ಗುರುಗಳಿಗೆ ಆರತಿಯನ್ನು ಬೆಳಗಿ ತಮ್ಮ ಮಂದಿರಕ್ಕೆ ಕರೆದೊಯ್ದರು. ಕುಳ್ಳಿರಿಸಿ ಷೋಡಶೋಪಚಾರಗಳ ಪೂಜೆಯಿಂದ ಸತ್ಕರಿಸಿದರು. ವಿಧವಿಧದ ಪಕ್ವಾನ್ನಗಳ ಭೋಜನ ನೀಡಿ ಶ್ರೀ ಗುರುಗಳನ್ನು ತೃಪ್ತಿಗೊಳಿಸಿದರು. ಅಂಬಿಗನು ಇದೆಲ್ಲವನ್ನು ಕಣ್ಮುಟ್ಟ ನೋಡಿ ಚಕಿತನಾದನು. ಅವನು ಶ್ರೀ ಗುರುಗಳ ಪ್ರಭಾವ ಸ್ಮರಣೆಯಲ್ಲಿ ತಟಸ್ಥನಾಗಿ ನಿಂತಿರುವಾಗ ಗುರುಗಳು ಒಮ್ಮೆಲೆ ಅವನನ್ನು ಕಂಡು— ‘ನೀನೇಕೆ ಇಲ್ಲಿಗೆ ಬಂದಿ?’ ಎಂದು ಕೇಳಿದರು. ಅದಕ್ಕೆ ಅಂಬಿಗನು— ‘ಸಹಜ ತಮ್ಮ ದರ್ಶನಕ್ಕೆ ಬಂದೆನು’ ಎಂದು ನುಡಿದು ನಮಸ್ಕರಿಸಿ— ‘ಶ್ರೀ ಗುರುಸಾಮಿಗಳೆ! ತ್ರಿಮೂರ್ತಿಗಳಾದ ನಿಮ್ಮ ಸ್ವರೂಪ ಜ್ಞಾನವು ಅಜ್ಞಾನಾದ ನನಗೆ ತಿಳಿಯಲಿಲ್ಲ ನನ್ನನ್ನು ಉದ್ಧರಿಸಿರಿ’ ಎಂದು ಪ್ರಾರ್ಥಿಸಿದನು. ಗುರುಗಳು ಅವನಿಗೆ ಶ್ರೇಷ್ಠ ವರಗಳನ್ನು ಕೊಟ್ಟು— “ಗಂಗಾನುಜ! ನೀನು ಇಲ್ಲಿ ಕಂಡ ವೃತ್ತವನ್ನೂ ಸಂಗತಿಗಳನ್ನೂ ಯಾರಿಗೂ ತಿಳಿಸಬೇಡ, ಇದನ್ನು ನೀನು ಪ್ರಕಟಿಸಿದ ದಿನವೇ ನಿನಗೆ ಮುಕ್ತಿ!’ ಎಂದು ಹೇಳಿದರು. ನಂತರ ಗುರುಗಳು ಔದುಂಬರಕ್ಕೆ ಬಂದರು. ಅವ

ರೊಡನೆ ಅಂಬಿಗನೂ ಬಂದನು. ಗುರು ನಿರೋಪ ತೆಗೆದುಕೊಂಡು ತನ್ನ ಹೊಲಕ್ಕೆ ಹೋದನು. ಆಗ ಅವನ ಹೊಲದಲ್ಲಿ ಅವನಿಗೆ ಹೊನ್ನು ತುಂಬಿದ ಕೊಡವು ದೊರೆಯಿತು! ಆನಂದ ಹೊಂದಿದನು! ಅಂದಿನಿಂದ ಅವನು ಸತತವೂ ಗುರು ಸೇವೆಯನ್ನು ಮಾಡಹತ್ತಿದನು. ಅದರಿಂದ ಅವನು ಧನ–ಧಾನ್ಯಗಳಿಂದ ಸಮೃದ್ಧನಾದನು.

ಹೀಗಿರುತ್ತಿರಲು ಮಾಘ ಪೌರ್ಣಿಮೆಯು ಬಂದಿತು. ಆ ಅಂಬಿಗನು ಗುರುಗಳನ್ನು ಕುರಿತು— 'ಸ್ವಾಮಿ! ಪ್ರಯಾಗದಲ್ಲಿ ಮಾಘ ಸ್ನಾನ ಮಾಡಲು ಪುಣ್ಯ ಬರುವದೆಂದು ಕೇಳಿರುವೆನು. ನನಗೆ ಪ್ರಯಾಗ–ಕಾಶಿಗಳ ಮಹತ್ವವೇ ಗೊತ್ತಿಲ್ಲ" ಎಂದೆನ್ನಲು ಗುರುಗಳು— ''ಗಂಗಾನುಜನೇ! ನೀನು ಅಷ್ಟು ದೂರ ಹೋಗುವ ಶ್ರಮಪಡಬೇಡ. ಇಲ್ಲಿರುವ ಪಂಚಗಂಗಾ ಸಂಗಮವೇ ಪ್ರಯಾಗವೆಂದೂ 'ಜೂಗಳ'ವೇ ಕಾಶಿಯೆಂದೂ ಕೊಲ್ಹಾಪುರವೇ ದಕ್ಷಿಣ ಪ್ರಯಾಗವೆಂದೂ ಅರಿತುಕೊಳ್ಳು. ಈ ತ್ರಿಸ್ಥಳಗಳ ಮನೋಹರತೆಯನ್ನು ನಿನಗೆ ಪ್ರತ್ಯಕ್ಷ ತೋರಿಸುವೆನು ಬಾ. ಎಂದು ಅವನನ್ನು ತಮ್ಮ ಸನಿಹಕ್ಕೆ ಕರೆದರು, ಅವನ ಕೈಯಿಂದ ತಾವು ಕುಳಿತ ವ್ಯಾಘ್ರಾಸನದ ಹಿಂದಿನ ಚುಂಗವನ್ನು ಗಟ್ಟಿಯಾಗಿ ಹಿಡಿಸಿಕೊಂಡರು. ಕೂಡಲೇ ಅವರು ಅಂಬಿಗನಿಂದ ಸಹಿತ ಪ್ರಯಾಗಕ್ಕೆ ಬಂದಿಳಿದರು. ಪ್ರಾತಃಕಾಲದಲ್ಲಿ ಸ್ನಾನಮಾಡಿದರು. ನಂತರ ಅವರು ಮಧ್ಯಾಹ್ನಕ್ಕೆ ಕಾಶಿಗೆ ಬಂದಿಳಿದರು. ಅಂಬಿಗನಿಗೆ ವಿಶ್ವೇಶ್ವರನ ದರ್ಶನ ಮಾಡಿಸಿದರು. ಕೂಡಲೆ ಗಯೆಗೆ ಹೋದರು. ಹೀಗೆ ಗುರುಗಳು ಅಂಬಿಗನಿಗೆ ತ್ರಿಸ್ಥಳೀ ಯಾತ್ರೆ ಮಾಡಿಸಿಕೊಂಡು ಸಂಜೆಗೇ ಔದುಂಬರ ಸ್ಥಾನಕ್ಕೆ ಬಂದರು. 'ಇನ್ನು ಮುಂದೆ ಇಲ್ಲಿಂದ ಗುಪ್ತವಾಗುವ

ಹೋಗಿರಿ" ಎಂದು ಗುರುಗಳು ವಿಚಾರಿಸಿ ಅಮರೇಶನನ್ನು ಕೇಳಿ ಅಲ್ಲಿಂದ ಹೊರಟರು.

ಶ್ರೀ ಗುರುಗಳು ಸಂಗಮದಿಂದ ಹೊರಡಲು ಯೋಗಿನಿಯರು ಅವರೆದುರು ಬಂದು ವಿಯೋಗ ದುಃಖವನ್ನು ಪ್ರಕಟಿಸಿದರು. ಶ್ರೀ ಗುರುಗಳು ಅವರನ್ನು ಪರಿ ನೀತಿ ಸಮಾಧಾನ ಪಡಿಸಿದರು. ಅವರು ಆ ಯೋಗಿನಿಯರಿಗೆ— "ಯೋಗಿನಿಯರೆ! ನೀವು ಸದಾ ಔದುಂಬರ ಸ್ಥಾನದಲ್ಲಿ ಇದ್ದು ಬಿಡಿರಿ. ಪಶ್ಚಿಮ ತೀರ ದಲ್ಲಿದ್ದ ಅಮರಪುರವು ನಮ್ಮ ಸ್ಥಾನವು. ಇಲ್ಲಿ ಅನ್ನಪೂರ್ಣೆಯನ್ನು ಇರಿಸುವೆವು. ಇದು ಪ್ರಸಿದ್ಧ ಕ್ಷೇತ್ರ ವಾಗುವದು. ಇಲ್ಲಿಗೆ ಬರುವ ಜನರ ಮನೋವಾಸನೆ ಈಡೇರುವದಕ್ಕೆ ಆಕೆಗೆ ಸಹಾಯಮಾಡಿರಿ. ನಿಮ್ಮನ್ನು ಸಹಿತವಾಗಿ ಇಲ್ಲಿಟ್ಟ ನಮ್ಮ ಪಾದುಕೆಗಳನ್ನೂ ಅನ್ನಪೂರ್ಣೆಯನ್ನೂ ನಿತ್ಯ ಆರಾಧಿಸುವರಿಗೆ ಇಚ್ಛಿತ ಫಲ ಪ್ರಾಪ್ತವಾಗುವದಲ್ಲದೆ ಚತುರ್ವಿಧ ಪುರುಷಾರ್ಥ ಪ್ರಾಪ್ತಿಯಾಗುವದು. ಇಲ್ಲಿರುವ ಪಾಪವಿನಾಶಿ, ಕಾಮ್ಯ ತೀರ್ಥ, ಹಾಗು ಸಿದ್ಧ ತೀರ್ಥಗಳಲ್ಲಿ ಏಳು ಸಾರೆ ಸ್ನಾನ ಮಾಡುವ ಪುತ್ರಾರ್ಥಿ ಸ್ತ್ರೀಯಳು ಅರವತ್ತು ವರ್ಷದ ಬಂಜೆಯಾದರೂ ಸಂತಾನ ಪಡೆಯುವಳು. ಈ ತೀರ್ಥಗಳಲ್ಲಿ ಸೋಮ-ಸೂರ್ಯಗ್ರಹಣಗಳಲ್ಲಿ, ಸಂಕ್ರಮಣ-ಅಮವಾಸ್ಯೆಗಳಲ್ಲಿ, ವ್ಯತೀಪಾತಾದಿ ಪರ್ವಣಿಗಳಲ್ಲಿ ಸ್ನಾನ ಮಾಡಲು ಅನಂತ ಪುಣ್ಯ ಫಲ ಸಿಗುವದು. ಔದುಂಬರ ಪ್ರದಕ್ಷಿಣೆಯಿಂದ ಕುಷ್ಟ ಮೊದಲಾದ ಮಹಾರೋಗಗಳು ದೂರಾಗುವವು." ಈ ಪ್ರಕಾರ ಶ್ರೀ ಗುರುಗಳು ಆ ಯೋಗಿನಿಯರಿಗೆ ಬೋಧಿಸಿದರು.

ನಂತರ ಶ್ರೀ ಗುರುಗಳು ಅಲ್ಲಿಂದ ಭೀಮಾತೀರದಲ್ಲಿದ್ದ ಅನುಪಮವಾದ ಗಾಣಗಾಪುರಕ್ಕೆ ಬಂದರು. ವಿಶ್ವರೂಪನಾದ ಆ ಜಗನ್ನಾಥನು ಎಲ್ಲೆಡೆಯಲ್ಲಿಯೂ ಇರುವವನು. ಔದುಂಬರ ಸ್ಥಾನವು

ಅವರಿಗೆ ಪ್ರೀತ್ಯಾಸ್ಪದವಾದುದರಿಂದ ನಿತ್ಯವೂ ಅಲ್ಲಿ ಇರುವರು. ಆದರೂ ಪ್ರಕಟ ರೂಪದಿಂದ ಗಾಣಗಾಪುರ ವಾಸಿಗಳಾಗಿ ಪ್ರಖ್ಯಾತಿ ಹೊಂದಿದರು.

ಎಂದು ಸಿದ್ಧಮುನಿಯು ನಾಮಧಾರನಿಗೆ ಹೇಳಿದನು.

—o—

# ೨೦ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು ಶ್ರೀ ಗುರು ಚರಿತ್ರೆಯ ಒಂದು ದೃಷ್ಟಾಂತವನ್ನೆತ್ತಿ ಹೇಳಹತ್ತಿದನು.

"ಶಿರೋಳೆ ಗ್ರಾಮದಲ್ಲಿ ಸದಾಚಾರ ಸಂಪನ್ನನೂ ವೇದರತನೂ ಆಗಿದ್ದ ಬ್ರಾಹ್ಮಣನೊಬ್ಬನಿದ್ದನು. ಅವನ ಪತ್ನಿಯು ಸುಶೀಲೆಯೂ ಶಾಂತಳೂ ಆಗಿದ್ದಳು. ಆ ದಂಪತಿಗಳ ಹೊಟ್ಟೆಯಿಂದ ಹುಟ್ಟಿದ ಮಕ್ಕಳು ಬದಕುತ್ತಿರಲಿಲ್ಲ. ಹುಟ್ಟಿದ ಕೂಡಲೇ ಸತ್ತುಹೋಗುತ್ತಿದ್ದವು. ಇದರಂತೆ ಐದು ಮಕ್ಕಳ ಗತಿಯಾಯಿತು! ಹಲವು ದೇವರನ್ನು ಆರಾಧಿಸಿದರೂ ಅವರ ಈ ತೊಂದರೆ ತಪ್ಪಲಿಲ್ಲ. ಬ್ರಾಹ್ಮಣ ಪತ್ನಿಯು ವ್ರತೋಪವಾಸ ಮಾಡಿದಳು. ನಿರರ್ಥಕವಾಯಿತು. ತನಗೆ ಈ ಪುತ್ರ ಶೋಕವುಂಟಾಗಲಿಕ್ಕೆ ಏನಾದರೊಂದು ಬಲವತ್ತರ ಕಾರಣವಿರಬಹುದೆಂದು ಆಕೆ ತರ್ಕಿಸಿದಳು. ಕೂಡಲೆ ಅವಳು ವಿದ್ವಜ್ಜನ

ಬ್ರಾಹ್ಮಣಪತ್ನಿಗೆ ಹೋಗಿ ತನಗೆ ಉಂಟಾಗುವ ನಷ್ಟ ಸಂತತಿಯ ಬಗೆಗೆ ವಿಚಾರಿಸಿದಳು. ಬ್ರಾಹ್ಮಣರು ಆಕೆಗೆ—'ಇವಕ್ಕೆ ನಿನ್ನ ಪ್ರಾಕ್ತನ ದೋಷವೇ ಕಾರಣವಿದೆ. ನೀನು ಪೂರ್ವ ಜನ್ಮದಲ್ಲಿ ಶೌನಕ ಗೋತ್ರದ ಬ್ರಾಹ್ಮಣನಿಂದ ಒಂದು ನೂರು ರೂಪಾಯಿ ಸಾಲ ಪಡೆದಿ, ನಿನ್ನಿಂದ ಆ ಬ್ರಾಹ್ಮಣನ ಋಣ ತೀರಲಿಲ್ಲ ದ್ರವ್ಯ ಲೋಭಿಯಾದ ಬ್ರಾಹ್ಮಣನು ನಿನ್ನಿಂದ ಬರುವ ಹಣ ತನಗೆ ಬಾರದಂತಾದುದನ್ನು ಕಂಡು ನಿನ್ನ ಬಾಗಿಲಲ್ಲಿ ಆತ್ಮಹತ್ಯೆ ಮಾಡಿಕೊಂಡನು. ಅವನೇ ಮುಂದೆ ಪಿಶಾಚ್ಚನಾದನು. ಆ ಪಿಶಾಚಿಯೇ ಈ ಜನ್ಮದಲ್ಲಿ ನಿನ್ನನ್ನು ನಷ್ಟಸಂತತಿಗೆ ಗುರಿ ಮಾಡಿದೆ, ಇನ್ನು ಮುಂದಾದರೂ ಇದೇ ಸ್ಥಿತಿಯು ನಿನಗೆ ಉಳಿಯುವದು'' ಎಂದು ಬ್ರಾಹ್ಮಣರು ಆಕೆಗೆ ಪ್ರಾಕ್ತನ ದೋಷವನ್ನು ವಿವರಿಸಿ ಹೇಳಿದರು. ಆ ಮೇಲೆ ಆಕೆ ಈ ದೋಷ ಪರಿಮಾರ್ಜನೆಗೆ ಉಪಾಯವೇನು? ಎಂದು ಅದೇ ವಿದ್ವಾಂಸರನ್ನು ಕೇಳಲು ಅವರು—'ವಿಪ್ರಪತ್ನಿಯೆ! ಇದರಿಂದ ನಿನಗೆ ಬ್ರಹ್ಮಹತ್ಯೆಯು ಒದಗಿದಂತಾಯಿತು. ಶಾಸ್ತ್ರಗಳಲ್ಲಿ ಇದು ಮಹಾಪಾತಕವೆಂದೂ ಇದಕ್ಕೆ ಏನೊಂದು ಪರಿಮಾರ್ಜನೆಯ ಪರಿಹಾರವಿಲ್ಲೆಂದೂ ಹೇಳಿದೆ. ಆದರೂ ನೀನು ಇಷ್ಟೊಂದು ಮಾಡು. ಆ ಬ್ರಾಹ್ಮಣನ ಅಂತ್ಯಕ್ರಿಯೆಯಾಗಲಿಲ್ಲ. ಋಣ ಪಡೆದ ನೀನು ಅವನ ಉತ್ತರಕ್ರಿಯೆಗೆ ಹಣ ಕೊಡಲಿಲ್ಲ. ಅವನ ದ್ರವ್ಯವನ್ನು ಅಪಹರಿಸಿದ ನೀನು ರೀತಿಗನುಸರಿಸಿ ಅವನ ದಿನಕರ್ಮ ಮಾಡು. ಹಾಗು ಅವನಿಗೆ ಕೊಡತಕ್ಕ ಋಣಭಾರವನ್ನು ಶೌನಕ ಗೋತ್ರಜ ಬ್ರಾಹ್ಮಣರಿಗೆ ಮುಟ್ಟಿಸಿ ಮುಕ್ತಳಾಗು. ಅಂದರೆ ನಿನಗೆ ಒಳಿತಾಗುವದು. ಇದು ಅಲ್ಲದೆ ಕೃಷ್ಣೆಯತೀರದಲ್ಲಿ ನೀನು ಒಂದು ತಿಂಗಳಿನ ವರೆಗೆ ಉಪವಾಸದಿಂದ ಇರಬೇಕು. ಪಂಚಗಂಗಾ ಸಂಗಮದಲ್ಲಿಯ ಔದುಂಬರ ವೃಕ್ಷವನ್ನು ಆರಾಧಿಸಬೇಕು. ಅಲ್ಲಿಯ ತೀರ್ಥಗಳಲ್ಲಿ ಸ್ನಾನಮಾಡಿ ಶ್ರೀ ಗುರು ಪಾದುಕೆಗಳನ್ನು ಪೂಜಿಸಬೇಕು. ಆ ಸ್ಥಾನವು 'ನೃಸಿಂಹ ಸರಸ್ವತಿ ಸ್ವಾಮಿ'

ಗಳೆ ಗುಪ್ತವಾಸ ಕ್ಷೇತ್ರವಾಗಿದೆ. ನೀನು ಇಷ್ಟೊಂದು ಕ್ರಿಯೆಯನ್ನು ಆಚರಿಸಿದ್ದಾದರೆ ನಿಷ್ಪಾಪಳಾಗುವಿ. ಬ್ರಹ್ಮ ಸಂಬಂಧವು ದೂರಾಗುವದು, ನಿನಗೆ ಮಕ್ಕಳ ಸುಖವು ಲಭಿಸುವದು' ಎಂದು ಹೇಳಿದರು.

ಬ್ರಾಹ್ಮಣರ ವಾಕ್ಯ ಕೇಳಿ ಬ್ರಾಹ್ಮಣ ಪತ್ನಿಯು ತನ್ನಲ್ಲಿ ಹಣವಿಲ್ಲೆಂದು ವಿಚಾರಕ್ಕೊಳಗಾದಳು. ಆಕೆ— "ವಿಪ್ರೋತ್ತಮರೆ! ನೀವು ಹೇಳಿದಂತೆ ಉಪವಾಸಾದಿಗಳನ್ನು ಆ ಬ್ರಾಹ್ಮಣನ ಗೋತ್ರಜರಿಗೆ ಕೊಡುವಷ್ಟು ದ್ರವ್ಯವು ನನ್ನಲ್ಲಿಲ್ಲವಲ್ಲ!" ಎಂದಳು. ಅವರು— "ನಿನ್ನಲ್ಲಿ ಹಣವಿಲ್ಲದಿದ್ದರೂ ನೀನು ಅಲ್ಲಿಗೆ ಹೋಗಿ ಸೇವೆ ಮಾಡು ಶ್ರೀ ಗುರುಗಳೇ ನಿನ್ನ ಪಾಪ ದೂರಮಾಡುವರು" ಎಂದು ಹೇಳಲು ಅವಳು ಬ್ರಾಹ್ಮಣರ ವಾಕ್ಯದಂತೆ ಸಂಗಮಕ್ಕೆ ಹೋದಳು. ಬ್ರಾಹ್ಮಣರ ಹೇಳಿಕೆಯಂತೆ ನಡೆದು ಮೂರು ದಿನ ಉಪವಾಸ ಮಾಡಿದಳು. ಅಂದಿನ ದಿನ ಆಕೆಯು ಸ್ವಪ್ನದಲ್ಲಿ ತನಗೆ ಸಾಲ ಕೊಟ್ಟ ಬ್ರಾಹ್ಮಣನನ್ನು ಕಂಡಳು, ಅವನಿಂದ ತನಗೆ ಪುನಃ ಪುನಃ ಪೀಡೆಯಾದಂತೆ ಕನಸು ನೋಡಿದಳು. ಅದೇ ಬ್ರಾಹ್ಮಣನು ತನ್ನನ್ನು ಹೊಡೆಯಲು ಬರಲು ಗುರುಗಳು ಪ್ರಕಟರಾಗಿ ಆ ಬ್ರಾಹ್ಮಣನನ್ನು ಪ್ರತಿಬಂಧಿಸಿದಂತೆಯೂ ಕನಸುಕಂಡಳು. ಅದೇ ಸ್ವಪ್ನದಲ್ಲಿ– "ಗುರುಗಳು— 'ಬ್ರಾಹ್ಮಣ ಪಿಶಾಚಿಯೆ! ನನ್ನ ಭಕ್ತಳಾದ ಈಕೆಯನ್ನು ಕಾಡಬೇಡ. ನಾನು ಹೇಳಿದ ಬಗೆಯಿಂದ ನೀನು ವರ್ತಿಸಿದರೆ ನಿನ್ನ ಪಿಶಾಚತ್ವ ದೂರಾಗುವದು. ಈಕೆಯು ತನ್ನ ಶಕ್ತ್ಯನುಸರಿಸಿ ಕೊಟ್ಟಷ್ಟರಿಂದ ನಿನ್ನ ಸಂತುಷ್ಟತೆಯಾಗಲಿ, ಇದಕ್ಕೆ ನೀನು ಒಪ್ಪದಿದ್ದರೆ ಇಲ್ಲಿಂದ ಹೋಗು, ಈ ನನ್ನ ಭಕ್ತಳನ್ನು ನಾನು ರಕ್ಷಿಸುವೆನು. ಪುನಃ ಈಕೆಗೆ ನೀನು ಉಪದ್ರವಕೊಟ್ಟರೆ ನಾನು ನಿನ್ನನ್ನು ಶಿಕ್ಷಿಸುವೆನು' ಎನ್ನಲು ಪಿಶಾಚಿಯು— "ಸ್ವಾಮಿ! ನಿನ್ನಂತೆಯೇ ಆಗಲಿ, ಇನ್ನು ನಾನು ಈ ಜನ್ಮದಿಂದ

[illegible]" ಎಂದು ಕೇಳಿತು. ಶ್ರೀ ಗುರುಗಳು—"ಪಿಶಾಚ ಬ್ರಾಹ್ಮಣನೆ! ಈಕೆ ಕರ್ಮಮಾಡುವ ಸತ್ಕರ್ಮದ [illegible] ನಿನಗೆ ಗತಿದೊರೆಯುವದು" ಎಂದರು. ಬಳಿಕ ಗುರುಗಳು ಆ ವಿಪ್ರ ಸ್ತ್ರೀಯಳಿಗೆ [illegible] ಅಂತರ್ಧಾನರಾದರು."

ಆ ಪ್ರಕಾರ ಸ್ವಪ್ನ ಕಂಡು ಆ ಸ್ತ್ರೀಯಳು ತಾನೆದ್ದು ಎಚ್ಚತ್ತಳು. ಗುರುನಿರೋಪದಂತೆ ಎಲ್ಲವನ್ನು ನೆರವೇರಿಸಿದಳು. ಪಿಶಾಚ ಬ್ರಾಹ್ಮಣನಿಗೆ ಗತಿದೊರೆಯಿತು.

ಇನ್ನೊಂದು ದಿನದ ಆಕೆಯು ಸ್ವಪ್ನದಲ್ಲಿ— "ಗುರುಗಳು ಆಕೆಯ ಉಡಿಯಲ್ಲಿ ಎರಡು ಫಲಗಳನ್ನು ಹಾಕಿ ನಿನಗೆ ಪುತ್ರರಿಬ್ಬರು ಪ್ರಾಪ್ತರಾಗುವರು. ನಿನ್ನ ಸಂತತಿ ಬೆಳೆಯುವದು" ಎಂದು ಹೇಳಿ ಅದೃಶ್ಯರಾದಂತೆ ಕನಸು ನೋಡಿದಳು.

ಗುರುಗಳು ಹೇಳಿದಂತೆ ಮುಂದೆ ಆಕೆ ಎಲ್ಲವನ್ನೂ ಆಚರಿಸಿದಳು, ಇಬ್ಬರು ಮಕ್ಕಳು ಹುಟ್ಟಿದರು, ಬೆಳೆದು ದೊಡ್ಡವರಾದರು, ಹಿರಿಯ ಮಗನು ಉಪನಯನಕ್ಕೆ ತಕ್ಕವನಾದನು. ತಾಯಿ–ತಂದೆಗಳು ಉತ್ಸಾಹದಿಂದ ಉಪನಯನ ಮಾಡಿದರು. ವ್ರತ ಬಂಧದ ಪೂರ್ವಾಂಗದ ವಿಧಿಗಳು ಮುಗಿದವು. ಪೂರ್ವ ದಿನದ ಮಧ್ಯರಾತ್ರಿಗೆ ಆ ವಟುವಿಗೆ ಧನುರ್ವಾತರೋಗವು ಪ್ರಾದುರ್ಭವಿಸಿತು. ಮುಂದೆ ಮೂರು ದಿನ ಆ ಹುಡುಗನು ಅಂತ್ಯಾವಸ್ಥೆ ಸ್ಥಿತಿಯಲ್ಲಿಯೇ ಬಿದ್ದನು. ತಾಯಿ–ತಂದೆಗಳಿಗೆ ಬಲು ಸಂಕಷ್ಟವಾಗಹತ್ತಿತು! ನಾಲ್ಕನೆಯ ದಿನದ ಸಾಯಂಕಾಲಕ್ಕೆ ಆ ಹುಡುಗನು ಸತ್ತನು. ತಾಯಿಯ ಶೋಕಕ್ಕೆ ಮಿತಿಮೀರಿತು. ಚಿತ್ತಸ್ತೈ ನಿತ್ರಾಣಳಾದಳು. ಆಕ್ರೋಶದಿಂದ ನೆಲಕ್ಕೆ ತಲೆಯನ್ನು ಅಪ್ಪಳಿಸಿಕೊಂಡಳು. ಕಲ್ಲಿನಿಂದ ಎದೆಎದೆ

ಬಡಿದುಕೊಂಡಳು. ನಿರ್ಜೀವಳಾಗಿ ನೆಲಕ್ಕೆ ಬಿದ್ದಳು. ಮತ್ತೆ ಎಚ್ಚರಾಗಿ ಅಳಹತ್ತಿದಳು. ಬ್ರಾಹ್ಮಣನ ಶೋಕವೂ ಹೆಚ್ಚಾಯಿತು. ಅವರಿಬ್ಬರು ತಾವು ಮಕ್ಕಳ ಬಗೆಗೆ ಪಟ್ಟ ಕಷ್ಟಗಳನ್ನೆಲ್ಲ ತೋಡಿಕೊಂಡು ಅಳಹತ್ತಿದರು. ತಾಯಿಯ ದುಃಖ ಸಂತಾಪಗಳಿಗಂತೂ ಮಿತಿಯೇ ಉಳಿಯಲಿಲ್ಲ. ಕೂಡಿದ ಜನವೆಲ್ಲ ಆಕೆಯನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿದರು. ಎಲ್ಲವೂ ವ್ಯರ್ಥವಾಯಿತು. ಸಂತಾಪದ ಭರದಲ್ಲಿ ಅವಳು ತನಗೆ ಸ್ವಪ್ನದಲ್ಲಿ ವರವನ್ನು ನೀಡಿದ ಗುರುಗಳನ್ನೂ ಧಿಕ್ಕರಿಸಿ ನುಡಿದು ಅಳಹತ್ತಿದಳು. ಯಾರು ಹೇಳಿದರೂ ಕೇಳಲೊಲ್ಲಳು. ಇನ್ನು ಪ್ರೇತ ಸಂಸ್ಕಾರಕ್ಕೆ ಹೊತ್ತು ಮೀರುವದೆಂದು ಊರಿನ ಬ್ರಾಹ್ಮಣರು ಹೆಣವನ್ನು ಹೊತ್ತೊಯ್ಯುವದಕ್ಕೆ ಸಿದ್ಧರಾಗಿ ನಿಂತರು. ಆಕೆಯು ಹೆಚ್ಚೆಚ್ಚು ಆಕ್ರೋಶ ಮಾಡುತ್ತ ಶವವನ್ನು ಕೊಡದಾದಳು. ಹೊಟ್ಟೆಗೆ ಅವಚಿಕೊಂಡು ಕುಳಿತಳು. ಮಗನೊಡನೆ ನನ್ನನ್ನೂ ಸುಟ್ಟುಬಿಡಿರಿ ಎಂದು ನುಡಿಯಹತ್ತಿದಳು. ಎರಡು ಪ್ರಹರಗಳಾದವು. ಸಂಸ್ಕಾರಕ್ಕೆ ಶವಕೊಡಲಿಲ್ಲ. ಅಲ್ಲಿ ಬಂದವರೆಲ್ಲ ಆಕೆಗೆ ತಿಳಿ ಹೇಳಿದರೂ ಕೇಳಲಿಲ್ಲ. ಇಷ್ಟರಲ್ಲಿ ಅಲ್ಲಿ ಕೂಡಿದ ಜನಸಂದಣಿಯೊಳಗಿಂದ ಒಬ್ಬ ಬ್ರಹ್ಮಚಾರಿಯು ಆಕೆಯ ಮುಂದೆ ಬಂದು ಆತ್ಮಜ್ಞಾನವನ್ನು **ಹೇಳಹತ್ತಿ**ದನು.

ನಾಮಧಾರಕಾ! "ಮುಂದಿನ **ಸಂಗತಿ**ಯು ಅಪೂರ್ವವಾಗಿ ವರ್ತಿಸಿತು. ಆ ಬ್ರಹ್ಮಚಾರಿಯು ಅವಳಿಗೆ ಜ್ಞಾನ ಬೋಧಿಸಿದನು. ನಿಜವಾಗಿಯೂ ಆತನು ಬ್ರಹ್ಮಚಾರಿಯಲ್ಲ ಆ ನರವೇಷ ಧರಿಸಿದ ಅವತಾರಿಕ ನೃಸಿಂಹ ಸರಸ್ವತಿ ಗುರುಗಳು. ಭಕ್ತವತ್ಸಲ—ಭಕ್ತೋದ್ಧಾರಕರು. ಈ ರಹಸ್ಯವನ್ನು ನಿನಗೆ ಬೇರೆ ಹೇಳಬೇಕಾಗಿಲ್ಲ" ಎಂದು ಸಿದ್ಧಮುನಿಯು ಹೇಳಿದನು.

# ೨೧ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ಜನಜಂಗುಳಿಯಿಂದ ಹೊರ ಬಂದ ಬ್ರಹ್ಮಚಾರಿಯು ನೃಪನ ತಾಯಿಯನ್ನು ಕುರಿತು—

"ಎಲೈ ಸ್ತ್ರೀಯಳೆ! ನಿನ್ನ ದುಃಖವು ನಿನ್ನಲ್ಲಿ ತಿಳುವಳಿಕೆಯಿಲ್ಲದ್ದರಿಂದಲೇ ಹುಟ್ಟಿದೆ. ಈ ಭೂಮಿಯಲ್ಲಿ ಹುಟ್ಟಿದವರಲ್ಲಿ ಆವಾರು ಬದುಕಿ ಉಳಿದಿರುವರು? ಜನಿಸುವವರಾರು? ಸಾಯುವವರಾರು? ಜನ್ಮದ ಉತ್ಪತ್ತಿ ಎಲ್ಲಿಂದ? ಎಲ್ಲವೂ ನೀರಗುಳ್ಳೆಯೋಪಾದಿ ಅಸ್ಥಿರವು. ದೇಹವು ಪಂಚಭೂತಾತ್ಮಕವಾಗಿ ಆಕಾರ ಹೊಂದಿದೆ. ಕೂಡಿದ ಆ ಭೂತಗಳೆಲ್ಲ ವಿಂಗಡಿತವಾಗಲು ಈ ದೇಹವು ಅವ್ಯಕ್ತವಾಗಿ ಹೋಗುವದು. ಇದಕ್ಕೆ ಮಾಯೆಯು ಹೊಂದಿಕೆಯಿಂದ ಪುತ್ರಾದಿಗಳ ಸಂಬಂಧವನ್ನು ಅದು ಹಚ್ಚಿಕೊಳ್ಳುವದು. ಸತ್ವಗುಣವು ದೇವತ್ವವನ್ನೂ ರಜ-ತಮ ಗುಣಗಳು ಕ್ರಮವಾಗಿ ಮಾನವತ್ವ-ರಾಕ್ಷಸತ್ವ ಇವುಗಳನ್ನೂ ವ್ಯಕ್ತಪಡಿಸುವವು. ಗುಣಗಳನುಸರಿಸಿ ಕರ್ಮಗಳೊದಗುವವು. ಸತ್ಕರ್ಮವು ಸತ್ಫಲವನ್ನೂ ಒದಗಿಸಿ ಕೊಡುವವು. ಗುಣಗಳ ವಾಸನೆಯಿಂದ ಇಂದ್ರಿಯಗಳು ಅವುಗಳ ಆಧೀನವಾಗುವವು.

ಈ ಸಂಸಾರದಲ್ಲಿ ಜನಿಸಿದ ನರನು ಕರ್ಮಾನುಸಾರ ಸುಖ ದುಃಖ ಫಲಗಳನ್ನು ಭೋಗಿಸುವನು. ದೇವ-ಋಷಿಗಳು ಕಲ್ಪಕೋಟಿ ಆಯುಷ್ಮಂತರಿದ್ದರೂ ಕರ್ಮಗಳು ಅವರನ್ನು ಬಿಟ್ಟಿಲ್ಲ. ದೇಹ

ಧಾರಿಯಲ್ಲಿ ಹಲವು ಪ್ರಕಾರದ ವಿಕಾರಗಳು. ಆದರೆ ದೇಹವೂ ಸ್ಥಿರವಲ್ಲ, ವಿಕಾರಗಳೂ ಸ್ಥಿರವಲ್ಲ. ಆದ್ದರಿಂದಲೇ ಜ್ಞಾನಿಗಳು ಹುಟ್ಟುವದಕ್ಕೆ ಸಂತೋಷಪಡುವದಿಲ್ಲ, ಸಾಯುವದಕ್ಕೆ ದುಃಖಪಡುವದಿಲ್ಲ, ಗರ್ಭವು ಉತ್ಪನ್ನವಾಯಿತೆಂದರೆ ಅದರ ನಾಶವಾಗುವದೆಂದೇ ತಿಳಿಯಬೇಕು. ಕರ್ಮಾನುಬಂಧದ ಫಲಗಳಂತೆ ದೇಹವು ಫಲಗಳನ್ನು ಅನುಭೋಗಿಸುವದು. ಮೂಢರು ಮಾಯಾ ಮೋಹದಿಂದ ತಾಯಿ–ತಂದೆ–ಸುತ–ಸತಿ ಇತ್ಯಾದಿ ಸಂಬಂಧವನ್ನು ತಮತಮಗೆ ಅಂಟಿಸಿಕೊಳ್ಳುವರು. ದೇಹವು ನಿರ್ಮಲವೆಂದು ಹೇಳಿದರೂ ಅದು ಮಲ–ಮೂತ್ರ–ರಕ್ತ–ಮಾಂಸ ಮುಂತಾದ ಹೇಸಿಕೆಯಲ್ಲಿ ಉದ್ಭವಿಸಿರುವದಲ್ಲವೇ? ಸುಕೃತ–ದುಷ್ಕೃತ ಭೋಗಗಳ ಅದೃಷ್ಟವನ್ನು ಹುಟ್ಟಿದಾಗಲೇ ಬ್ರಹ್ಮನು ಬರೆದುಬಿಟ್ಟಿರುವನು. ದೇಹಕರ್ಮಗಳು ಕಾಲನನ್ನು ಗೆಲ್ಲಲಾರವು. ಆದ್ದರಿಂದಲೇ ದೇಹವು ಅನಿತ್ಯವು. ಎಲೈ ಸ್ತ್ರೀಯಳೆ! ಇದುವರೆಗೆ ಅನೇಕ ಜನ್ಮ ತಳೆದಿ, ಮತ್ತು ಅನೇಕ ಬಾರಿ ಮನುಷ್ಯಜನ್ಮ ತಾಳಿದಿ, ಈಗಲಾದರೂ ಮನುಷ್ಯಳಾಗಿ ಇರುವಿ, ಈಗಂತೂ ಈ ಮೃತ ಪುತ್ರನ ತಾಯಿಯೆಂಬದು ನಿಜ. ಆದರೆ ನಿನ್ನ ಹಿಂದಿನ ಮಾನವ ಜನ್ಮಗಳಲ್ಲಿ ನೀನು ಯಾರ ತಾಯಿಯಾಗಿದ್ದಿ? ಯಾರ ಯಾರ ಹೆಂಡತಿಯಾಗಿದ್ದಿ? ಇದನ್ನು ನಿಶ್ಚಿತವಾಗಿ ಹೇಳುವಿಯಾ? ಇದನ್ನರಿಯದ ನೀನು ಈ ಮೃತನು ನನ್ನ ಮಗನೆಂದು ಎದೆಎದೆ ಬಡೆದುಕೊಳ್ಳುವಿಯಲ್ಲ! ಎಲ್ಲಿಯಮಗ? ಎಲ್ಲಿಯಮೃತ್ಯು? ಎಲ್ಲವೂ ಕೇವಲ ಭ್ರಮೆಯು. ನಿನ್ನ ಅಳುವಿಕೆಯು ನಿರರ್ಥಕವು. ಅದನ್ನೆಲ್ಲ ಬಿಡು. ಹಾಗು ಲೌಕಿಕಕ್ಕನುಸಾರವಾಗಿ ಪ್ರೇತವನ್ನು ಸಂಸ್ಕಾರಕ್ಕಾಗಿ ಕೊಟ್ಟು ಬಿಡು."

ಈ ಪ್ರಕಾರ ಬ್ರಹ್ಮಚಾರಿಯು ಆ ಸ್ತ್ರೀಯಳಿಗೆ ಬೋಧಿಸಿದನು. ಆ ಉಪದೇಶ ಕೇಳಿ

ಬ್ರಾಹ್ಮಣಪತ್ನಿಯು— “ಸ್ವಾಮಿ! ನೀವು ಧರ್ಮ ಬೋಧಿಸಿದಿರಿ, ಆದರೆ ನನ್ನ ಅಂತಃಕರಣ ಸ್ಥಿರವಾಗ ಲೊಲ್ಲದು. ನನಗೆ ನೃಸಿಂಹ ಸರಸ್ವತಿ ಸ್ವಾಮಿಗಳು ಕೊಟ್ಟ ವರವು ಅಸತ್ಯವಾಯಿತಲ್ಲವೇ? ಆ ಗುರುಗಳ ಮೇಲೆ ನನ್ನ ಪೂರ್ಣ ವಿಶ್ವಾಸವಿದೆ, ಅದಕ್ಕೆ ಭಂಗವುಂಟಾಯಿತಲ್ಲವೇ? ನೀವೇನು ಹೇಳಿದರೂ ಕೇಳೆನು. ಈಗಲೇ ನನ್ನ ಪ್ರಾಣ ತ್ಯಜಿಸಿ ಆ ಗುರುನಾಥನಿಗೆ ಅರ್ಪಿಸುವೆನು” ಎಂದು ಕಟ್ಟೊತ್ತರವಾಗಿ ಹೇಳಿಬಿಟ್ಟಳು.

ಗುರುಗಳು ಆಕೆಯ ಭಾವನೆಯ ನಿರ್ಧರಣೆಯನ್ನು ತಿಳಿದು— ‘ಎಲೌ ಸ್ತ್ರೀಯಳೇ! ನೀನು ಗುರುವಿನಲ್ಲಿ ವಿಶ್ವಾಸವಿಟ್ಟಿರುವಿ, ಪೂರ್ಣಾಯುಷ್ಯವುಳ್ಳ ಮಗನನ್ನು ಪಡೆದಿ, ಹೀಗಿದ್ದರೂ ನಿನ್ನ ಮಗನಿಗೆ ಮೃತ್ಯು ಒದಗಿತಲ್ಲವೇ? ಆ ಗುರುವಿನಲ್ಲಿ ನಿನ್ನ ನಿಜವಾದ ನಂಬುಗೆ ಇದ್ದದ್ದಾದರೆ, ನೀನು ಈಗಲೇ ಈ ಮೃತ ಬಾಲಕನನ್ನು ಹೊತ್ತುಕೊಂಡು ಗುರು ಸ್ಥಾನಕ್ಕೆ ಹೋಗು. ನೀನು ವರ ಪಡೆದ ಸ್ಥಾನದಲ್ಲಿಯೇ ಈ ನಿನ್ನ ಮಗನನ್ನು ಮಲಗಿಸು’’ ಎಂದು ಹೇಳಿದರು. ಬ್ರಹ್ಮಚಾರಿಯು ಇಷ್ಟು ಹೇಳುವದೊಂದೇ ತಡ. ಆಕೆ ಶವವನ್ನು ಬೆನ್ನಿಗೆ ಕಟ್ಟಿಕೊಂಡು ಶಿರೋಳಬಿಂದ ಹೊರಟಳು ಸಂಗಮಕ್ಕೆ ಬಂದಳು ಔದುಂಬರ ದಲ್ಲಿದ್ದ ಗುರುಪಾದುಕೆಗಳ ಸನ್ನಿಧಿಯಲ್ಲಿ ಮಗನ ಶವವನ್ನು ಇಳಿಸಿದಳು. ಹಾಗು ತಾನು ತನ್ನ ದುರ್ವಿಧಿ ಯನ್ನು ಶಪಿಸುತ್ತ ಅಳಹತ್ತಿದಳು. ಒಮ್ಮೆಲೆ ಅವಳು ಸಂತಾಪದಿಂದ ಗುರುಪಾದುಕೆಗಳಿಗೆ ತನ್ನ ತಲೆ ಯನ್ನು ಅಪ್ಪಳಿಸಿದಳು. ತಲೆಯೊಡೆದು ಪಾದುಕೆಗಳ ಮೇಲೆ ರಕ್ತವು ಮಾಂಸದೊಡನೆ ಸುರಿಯಿತು! ಆಕೆಯ ಆಕ್ರೋಶವು ಇನ್ನಿಷ್ಟು ಹೆಚ್ಚಾಯಿತು. ಹಡೆದವರಿಗೆ ಪುತ್ರಶೋಕವು ಕ್ಷಯರೋಗದಂತೆ ಮೃತ್ಯುದಾಯಕವು.

ಇಷ್ಟಾಗುವಷ್ಟರಲ್ಲಿ ರಾತ್ರಿಯಾರಂಭವಾಯಿತು. ಆ ಊರಿನ ಬ್ರಾಹ್ಮಣರು ಈ ಸಂಗತಿಯನ್ನರಿತು ಅಲ್ಲಿಗೆ ಬಂದರು. ಸಂಸ್ಕಾರಕ್ಕೆಂದು ಪ್ರೇತವನ್ನೆತ್ತಹೋದರು. ಆಕೆಯು ಅದನ್ನು ಕೊಡದೆ ಹೊಟ್ಟೆಗೆ ಗಟ್ಟಿಯಾಗಿ ಅವಚಿಕೊಂಡು ಕುಳಿತು ಅಳಹತ್ತಿದಳು. ಪ್ರೇತವಾಹಕ ಬ್ರಾಹ್ಮಣರು ಆಕೆಗೆ ಪರಿಪರಿಯಿಂದ ಹೇಳಿದರೂ ಆಕೆ ಕೇಳಲಿಲ್ಲ. ಅವರು— 'ಎಲೌ ಸ್ತ್ರೀಯಳೆ! ಈ ಸ್ಥಾನವು ಭೀತಿದಾಯಕವಿದೆ, ಕಳ್ಳಕಾಕರ ಉಪಟಳವು ಇಲ್ಲಿ ಹೆಚ್ಚಾಗಿರುವದು. ಅಂತೆಯೇ ಇಲ್ಲಿ ಜನ ಸಂಚಾರವಿಲ್ಲ' ಎಂದು ಭಯಸೂಚಕ ನುಡಿಗಳನ್ನಾಡಿದರೂ ಆಕೆ ತನ್ನ ಹಟ ಬಿಡಲಿಲ್ಲ. ಸಂಸ್ಕಾರಕ್ಕೆ ಪ್ರೇತವನ್ನು ಕೊಡಲಿಲ್ಲ. ಕಡೆಗೆ ಅವರು ನಿರ್ವಾಹವಿಲ್ಲದೆ ತಮ್ಮ ತಮ್ಮ ಮನೆಗಳಿಗೆ ಹೊರಟರು. 'ನಾಳಿನ ಬೆಳಗಿನಲ್ಲಿ ಬಂದು ಒತ್ತಾಯದಿಂದ ಶವಕ್ಕೆ ಅಗ್ನಿಸಂಸ್ಕಾರ ಮಾಡೋಣ' ಎಂದು ಮಾತಾಡುತ್ತ ಹೋಗಿಬಿಟ್ಟರು.

ರಾತ್ರಿಯು ಹೆಚ್ಚುತ್ತ ಮೂರನೆಯ ಯಾಮವು ಬಂದಿತು. ಎರಡು ದಿನ ನಿದ್ರೆಯಿಲ್ಲದ್ದರಿಂದ ಬ್ರಾಹ್ಮಣನು ಒಂದೆಡೆ ಹೋಗಿ ಮಲಗಿದನು. ಆಕೆಯಾದರೂ ಮಗನನ್ನು ತೊಡೆಯಮೇಲಿಟ್ಟುಕೊಂಡು ಕುಳಿತುಕೊಂಡೇ ನಿದ್ರಿಸಹತ್ತಿದಳು. ಆ ನಿದ್ರೆಯಲ್ಲಿ ಅವಳಿಗೆ ಸ್ವಪ್ನಬಿದ್ದಿತು. ಆ ಕನಸಿನಲ್ಲಿ— "ಶ್ರೀ ಗುರುಗಳು ಆಕೆಯನ್ನು ಕುರಿತು— "ಸ್ತ್ರೀಯೆ! ನೀನೇಕೆ ನಮ್ಮನ್ನು ದೂಷಿಸಿ ಅಳುವಿ! ನಿನ್ನ ಮಗನಿಗೇನಾಗಿದೆ. ಈ ಭಸ್ಮ ತೆಗೆದುಕೊಂಡು ನಿನ್ನ ಮಗನಿಗೆ ಹಚ್ಚು. ಅವನ ಬಾಯಿಯಲ್ಲಿ ಹಾಕು. ಹಾಗು ಅವನ ಕಿವಿಗಳಲ್ಲಿ ಊದಿ ಗಾಳೀಹಾಕು. ನಿನ್ನ ಮಗನ ಜೀವವು ತಪ್ಪಿ ಎಲ್ಲಿಯೋ ಹೋಗಿದೆ. ಹಿಂತಿರುಗಿ ಬಂದು ನಿನ್ನ ಮಗನ ದೇಹ ಸೇರುವದು" ಎಂದು ಹೇಳಿ ಅದೃಶ್ಯವಾಗುವಷ್ಟರಲ್ಲಿಯೇ ಆಕೆ

ಫಕ್ಕನೆ ಎಚ್ಚರಗೊಂಡಳು. ಭೀತಿಯಿಂದ ನಡುಗಿದಳು. ಇದೇನು ಕನಸು? ನನ್ನ ಮನಸಿನಲ್ಲಿ ಇದ್ದುದನ್ನು ಸ್ಪಷ್ಟವಾಗಿ ತೋರಿಸಿತು. ಇದರಲ್ಲೇನೂ ಅರ್ಥವಿಲ್ಲ' ಎಂದು ವಿಚಾರದಲ್ಲಿ ಕುಳಿತಳು. ಒಂದೆರಡು ನಿಮಿಷ ಗಳಲ್ಲಿಯೇ ಆಕೆಯ ತೊಡೆಯ ಮೇಲಿನ ಶವದ ಅಂಗಾಂಗಗಳಲ್ಲಿ, ಸಂದುಸಂದುಗಳಲ್ಲಿ ಚೇತನವು ಉಂಟಾಯಿತು. ಕಂಡಳು ಬೆದರಿದಳು, ಭೂತಸಂಚಾರವೆಂದು ಆ ಬಾಲಕನನ್ನು ತನ್ನ ತೊಡೆಯನ್ನು ಬಿಡಿಸಿ ನೆಲಕ್ಕೆ ನೂಕಿ ಹಿಂದಕ್ಕೆ ಸರಿದು ನಡಗುತ್ತ ಕುಳಿತಳು. ಅಷ್ಟರಲ್ಲಿ ಹುಡುಗನಿಗೆ ಪೂರ್ಣ ಚೇತನ ಬಂದು 'ಅವ್ವಾ ಹಸಿವೆ' ಎಂದನು. ಆಗ ಅವಳು ಧೈರ್ಯತಂದುಕೊಂಡು ಮಗನನ್ನು ಎತ್ತಿಕೊಂಡಳು, ತನ್ನ ಗಂಡನು ಮಲಗಿರುವಲ್ಲಿಗೆ ಹೋಗಿ ಅವನನ್ನು ಎಬ್ಬಿಸಿ— ಶ್ರೀ ಗುರುಗಳು ನನ್ನ ಮಗನಿಗೆ ಪುನರ್ಜೀವವನ್ನು ಕೊಟ್ಟರು" ಎಂದು ಆನಂದದಿಂದ ಉಬ್ಬುಬ್ಬಿ ಹೇಳಿದಳು. ಬ್ರಾಹ್ಮಣನು ಮಗನನ್ನು ಎತ್ತಿಕೊಂಡನು. ಮೂವರೂ ಔದುಂಬರಕ್ಕೆ ಪ್ರದಕ್ಷಿಣೆ ಹಾಕಿ ಪಾದುಕೆಗಳಿಗೆ ನಮಸ್ಕರಿಸಿದರು. ಬ್ರಾಹ್ಮಣನು ಸ್ನಾನಮಾಡಿ ಪಾದುಕೆಗಳ ಮೇಲಿನ ಅಶುದ್ಧವನ್ನು ಕ್ಷಾಲನೆ ಮಾಡಿದನು. ಪುನಃ ಸ್ನಾನಮಾಡಿ ಬಂದು ಅಭಿಷೇಕಾದಿಗಳನ್ನು ಮುಗಿಸಿದನು. ಬ್ರಾಹ್ಮಣ ಪತ್ನಿಯೂ ಮಗನೂ ಸ್ನಾನಮಾಡಿ ಬಂದು ಪಾದುಕೆಗಳಿಗೆ ವಂದಿಸಿದರು. ನಂತರ ಆ ಮೂವರೂ ಗುರುಪಾದ ಸನ್ನಿಧಿಯಲ್ಲಿ ಕುಳಿತು ಸ್ತೋತ್ರ ಹಾಡುಗಳಿಂದ ಶ್ರೀ ಗುರುಗಳಲ್ಲಿರುವ ತಮ್ಮ ಭಕ್ತಿಯನ್ನು ಪ್ರಕಟಿಸಿದರು.

ಇಷ್ಟಾಗುವಷ್ಟರಲ್ಲಿ ಬೆಳ್ಳನೆ ಬೆಳಗಾಯಿತು, ಪ್ರೇತ ಸಂಸ್ಕಾರಕ್ಕೆಂದು ಬ್ರಾಹ್ಮಣರು ಅಲ್ಲಿಗೆ ಬಂದರು. ಆ ಮೂವರೂ ಪಾದುಕೆಯ ಸನ್ನಿಧಿಯಲ್ಲಿ ಆನಂದದಿಂದ ಕುಳಿತಿರುವದನ್ನು ನೋಡಿದರು. ನಿನ್ನೆ

ಮೃತನಾಗಿದ್ದ ಬಾಲಕನು ಇಂದು ಗುರುಸ್ತೋತ್ರ ಪಠಿಸುತ್ತ ಕುಳಿತಿರುವದನ್ನು ಕಂಡು ಬಹಳೇ ಹರ್ಷಗೊಂಡರು ! ಮೃತಬಾಲಕನು ಸಜೀವಗೊಂಡ ವಾರ್ತೆಯು ತೀವ್ರವೇ ಆ ಊರಿನ ತುಂಬಾ ಹರಡಿತು. ಎಲ್ಲರೂ ಅಲ್ಲಿಗೆ ಬಂದರು. ಆನಂದದಿಂದ ಗುರುಗಳ ಹಾಗು ಅವರ ಸ್ಥಾನದ ಮಹಿಮೆಯನ್ನು ಕೊಂಡಾಡಿದರು. ಎಲ್ಲರೂ ಕೂಡಿಕೊಂಡು ಅಂದಿನ ದಿವಸ ಔದುಂಬರ ಸನ್ನಿಧಿಯಲ್ಲಿ ದೊಡ್ಡ ಸಮಾರಂಭ ಮಾಡಿದರು."

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನಲ್ಲದೆ ಗುರು ಸ್ಥಾನದ ಮಹಿಮೆಯನ್ನು ಹೇಳಿದನು. ಎಂತೆಂದರೆ—

ನಾಮಧಾರಕಾ ! ಈ ಗುರುಸ್ಥಾನದಲ್ಲಿ ಭಕ್ತಿಯನ್ನಾಚರಿಸಲು 'ಬಂಜೆಗೆ ಮಕ್ಕಳಾಗುವವು, ದರಿದ್ರನು ಸಿರಿವಂತನಾಗುವನು, ರೋಗಿಯು ಆರೋಗ್ಯಪಡುವನು, ಅಪಮೃತ್ಯು ದೂರಾಗುವವು, ಅಭೀಷ್ಟಗಳು ಸಿದ್ಧಿಸುವವು, ಹೊಟ್ಟೆಶೂಲೆ, ಗಂಡಮಾಲೆ, ಮಲರೋಗ ಇವೆಲ್ಲ ದೂರಾಗುವವು. ಮಂದಮತಿಯು ಜ್ಞಾನಿಯಾಗುವನು, ಬಧಿರತ್ವ–ಅಂಧತ್ವಗಳು ನಷ್ಟವಾಗುವವು. ಮೂಕನು ಮಾತುಗಾರನಾಗುವನು, ದೇಹವು ಪುಷ್ಟತೆಯುಳ್ಳದ್ದಾಗುವದು, ಚತುರ್ವಿಧ ಪುರುಷಾರ್ಥ ಲಭಿಸುವವು."

ಎಂದು ಸಿದ್ಧಮುನಿಯು ಹೇಳಿದನು.

—o—

# ೨೨ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ನಾಮಧಾರಕನು— 'ಸ್ವಾಮಿ! ಶ್ರೀ ಗುರುಗಳು ಗಾಣಗಾಪುರಕ್ಕೆ ಬಂದ ನಂತರ ಅಲ್ಲಿ ವರ್ತಿಸಿದ ಸಂಗತಿಯನ್ನು ಹೇಳುವದಾಗಬೇಕು' ಎಂದು ಸಿದ್ಧಮುನಿಯನ್ನು ಕೇಳಿದನು. ಸಿದ್ಧಮುನಿಯು—

"ನಾಮಧಾರಕನೆ! ಶ್ರೀ ಗುರುಗಳು ಗಾಣಗಾಪುರಕ್ಕೆ ಬಂದ ನಂತರ ಅಲ್ಲಿಯ ಸಂಗಮದಲ್ಲಿ ಗುಪ್ತರೂಪದಿಂದ ಇರಹತ್ತಿದರು. ಆ ಅಮರಜಾ ಸಂಗಮದಲ್ಲಿ ನಾರಾಯಣೀ ಅಶ್ವತ್ಥ ವೃಕ್ಷವಿರುವದು. ಅದು ಮಹಾಪವಿತ್ರ ಸ್ಥಾನವಾಗಿದೆ. ಆ ಸಂಗಮವು ಪ್ರಯಾಗ-ಬದರಿಗಳ ಸಮಾನ ಪುಣ್ಯದಾಯಕವಿದೆ. ಆ ಸಂಗಮ ಸ್ಥಾನದಲ್ಲಿ ಅತ್ಯಂತ ಮಹಿಮೆಯುಳ್ಳ ಎಂಟು ತೀರ್ಥಗಳಿರುವವು. ಗುರುಗಳ ಸಂಗಮ ವಾಸ್ತವ್ಯದಿಂದ ಆ ತೀರ್ಥಗಳು ಪ್ರಸಿದ್ಧಪಡೆದವು.

ಶ್ರೀ ಗುರುಗಳು ಸಂಗಮವಾಸವಾಗಿ ದಿನಾಲು ಮಧ್ಯಾಹ್ನ ಸಮಯಕ್ಕೆ ಗಾಣಗಾಪುರ ಗ್ರಾಮದೊಳಗೆ ಭಿಕ್ಷೆಗಾಗಿ ಹೋಗುತ್ತಿದ್ದರು. ಒಂದು ದಿನ ಅವರು ಭಿಕ್ಷೆ ಬೇಡುತ್ತ ಅಲ್ಲಿಯ ಒಬ್ಬ ದರಿದ್ರ ಬ್ರಾಹ್ಮಣನ ಮನೆಗೆ ಹೋದರು. ಆ ಬ್ರಾಹ್ಮಣ ದಂಪತಿಗಳು ಸುಶೀಲರು. ಬ್ರಾಹ್ಮಣನು ಒಂದು ಬರಡು ಎಮ್ಮೆಯನ್ನು ಸಾಕಿದ್ದನು. ಅದನ್ನು ಅವನು ದಿನಾಲು ವ್ಯವಸಾಯಗಳಿಗೆ ಹೂಡುವದಕ್ಕೆ ಬಾಡಿಗೆ ಗೊತ್ತುಮಾಡಿ ಕೊಡುತ್ತಿದ್ದನು. ಬಂದ ಬಾಡಿಗೆಯಿಂದ ಉಪಜೀವನ ಸಾಗಿಸಿಕೊಳ್ಳುತ್ತಿದ್ದನು. ಹೀಗಿರುವಾಗಲೇ ಗುರುಗಳು ಅವನ ಮನೆಗೆ ಭಿಕ್ಷಾರ್ಥವಾಗಿ ಬಂದರು. ಗುರುಗಳು ಆ ದರಿದ್ರ ಬ್ರಾಹ್ಮಣ

ನಲ್ಲಿ ಭಿಕ್ಷೆಗೆ ಬಂದದ್ದು ಆ ಊರಿನ ಉಳಿದ ಬ್ರಾಹ್ಮಣರಿಗೆ ಸರಿದೋರಲಿಲ್ಲ. ಬರಡೆಮ್ಮೆಯ ಬಾಡಿಗೆಯಿಂದ ಹೊಟ್ಟೆ ಹೊರಕೊಳ್ಳುವ ಬ್ರಾಹ್ಮಣನ ಮನೆಯ ಭಿಕ್ಷೆಯು ಗುರುಗಳಿಗೆ ಅದೆಂತು ರುಚಿಸುವದೋ ಏನೋ ! ಎಂದು ಅವರು ಪ್ರಕಟವಾಗಿ ಮಾತಾಡಹತ್ತಿದರು. ಭಕ್ತವತ್ಸಲ ಗುರುನಾಥನು ಇಂಥ ನಿಂದಕರ ನುಡಿಗಳನ್ನು ಲಕ್ಷಿಸುವನೇ? ವಿದುರನ ಆಮಂತ್ರಣ ಸ್ವೀಕರಿಸಿದ ಕೃಷ್ಣಪರಮಾತ್ಮನು ಕೌರವರಾಡಿದ ದುರ್ವಾಕ್ಯಗಳನ್ನು ತನ್ನ ಚಿತ್ತದಿಂದ ಗ್ರಹಿಸಿದನೇ? ಅದರಂತೆ ಗುರುಗಳು ಅನುಮಾನಗೊಳ್ಳದೆ ಆ ದರಿದ್ರ ಬ್ರಾಹ್ಮಣನ ಮನೆಗೆ ಭಿಕ್ಷೆಗೆ ಹೋದರು. ಬ್ರಾಹ್ಮಣನು ಮನೆಯಲ್ಲಿರಲಿಲ್ಲ. ಬ್ರಾಹ್ಮಣ ಪತ್ನಿಯು ಅತಿಥಿ ಸ್ವರೂಪದಿಂದ ಗುರುಗಳನ್ನು ಸ್ವಾಗತಿಸಿದಳು. ಗುರುಗಳ ಭಿಕ್ಷೆಗೆ ಮನೆಯಲ್ಲಿ ಏನೂ ಸಾಹಿತ್ಯವಿರಲಿಲ್ಲ. ಪತಿಯು ಬರುವ ಮಾರ್ಗ ನಿರೀಕ್ಷಿಸುತ್ತ ಆಲೋಚನೆ ಮಾಡುತ್ತ ಕುಳಿತಳು. ಗುರುಗಳು ಆಕೆಯ ಭಾವವನ್ನರಿತು— 'ಎಲೌ ಸ್ತ್ರೀಯಳೆ ! ನಮಗೆ ಹೊತ್ತಾಗುವದು. ನಿಮ್ಮ ಮನೆಯಲ್ಲಿ ಹೈನು ಇದ್ದಂತೆ ಈ ಎಮ್ಮೆಯಿಂದ ತೋರುವದು. ನಮಗೆ ಪ್ರಾಶನಕ್ಕೆ ಹಾಲು ಕೊಟ್ಟು ಭಿಕ್ಷೆ ಮುಗಿಯಿಸು' ಎಂದರು. ಅವಳು ಅವರಿಗೆ ತಮ್ಮ ಎಮ್ಮೆಯು ಬರಡಾಗಿರುವದನ್ನೂ ಅದನ್ನು ಕೇವಲ ಹೂಡುವದಕ್ಕೆ ಬಾಡಿಗೆಯಿಂಡ ಕೊಟ್ಟು ಬಂದ ರೊಕ್ಕದಿಂದ ಉಪಜೀವನ ಸಾಗಿಸಿಕೊಳ್ಳುವೆವೆಂದೂ ತಿಳಿಸಿದಳಲ್ಲದೆ 'ಸಾಮಿ ! ಈ ದಿನ ಇದನ್ನು ಯಾರೂ ಬಾಡಿಗೆಗೆ ಒಯ್ಯದ್ದರಿಂದ ಇಂದಿನ ನಮ್ಮ ಉದರನಿರ್ವಾಹಕ್ಕೆ ತೊಂದರೆಯಾಗಿದೆ. ಅದಕ್ಕೆಂತಲೇ ನನ್ನ ಪತಿಯು ಶುಕ್ಲವೃತ್ತಿಗಾಗಿ ಹೋಗಿರುವರು. ಇದೀಗ ಬರುವರು. ನಂತರ ನಿಮಗೆ ಭಿಕ್ಷೆ ಸಲ್ಲಿಸುವೆನು. ಅದುವರೆಗೆ ವಿಶ್ರಮಿಸಬೇಕು' ಎಂದಳು. ಆಕೆಯ ಹೇಳಿಕೆ ಕೇಳಿ

ಗುರುಗಳು ನಗುತ್ತ—'ಸಾಧ್ವಿ! ಅಸತ್ಯ ನುಡಿಯಬಾರದು, ನಿಮ್ಮ ಎಮ್ಮೆಯು ನಿಜವಾಗಿಯೂ ಹಾಲು ಕೊಡುತ್ತಿರುವದು. ನೀನು ಈಗಲೇ ಇದರ ಹಾಲ ಕರೆದು ನಮಗೆ ಭಿಕ್ಷೆ ಸಲ್ಲಿಸು. ನಮ್ಮ ಸ್ಥಾನಕ್ಕೆ ಹೋಗುವೆವು' ಎಂದು ಹೇಳಿದರು.

ಗುರುಗಳ ಹೇಳಿಕೆಯ ಮೇಲೆ ವಿಶ್ವಾಸವಿಟ್ಟು ಆಕೆಯು ಒಳಕ್ಕೆ ಹೋಗಿ ಹಿಂಡುವ ಸಾಹಿತ್ಯ ತಕ್ಕೊಂಡು ಹಕ್ಕೆಗೆ ಹೋದಳು. ಆ ಬರಡೆಮ್ಮೆಯ ಬದಿಗೆ ಕುಳಿತು ಅದರ ಮೊಲೆಗಳಿಗೆ ಕೈಹಾಕಿದಳು. ಮೊಲೆಗಳು ಹಾಲು ತುಂಬಿ ತೊರೆಬಿಟ್ಟಿದ್ದವು. ಪಾತ್ರೆ ತಕ್ಕೊಂಡು ಭರಭರನೆ ಹಿಂಡಹತ್ತಿದಳು. ತಂದ ಪಾತ್ರೆಯು ತುಂಬಿತು, ಇನ್ನೊಂದನ್ನು ತಂದು ಅದರಲ್ಲಿ ಹಿಂಡಿದಳು ಅದೂ ಪೂರ್ಣತುಂಬಿತು. ಆಕೆಯು ಸಂತೋಷದಿಂದ ತೃಪ್ತಿಹೊಂದಿದಳು, ಇನ್ನು ಗುರುಗಳ ಭಿಕ್ಷೆಗೆ ಅವಕಾಶವಾಗುವದೆಂದು ಬಗೆದು ಹಿಂಡುವದನ್ನು ನಿಲ್ಲಿಸಿದಳು. ಹಾಲು ತುಂಬಿದ ಪೂರ್ಣ ಪಾತ್ರೆಗಳನ್ನು ತಂದು ಗುರುಗಳ ಮುಂದಿಟ್ಟು ಕೈಮುಗಿದು ಕೊಂಡು ನಿಂತಳು. ಗುರುಗಳು ಅದರೊಳಗಿನ ಒಂದು ಬಟ್ಟಲು ಹಾಲು ಸ್ವೀಕರಿಸಿ ತುಷ್ಟರಾದರು. ಅನಂತರ—"ಸಾಧ್ವಿ! ನೀನು ನೀಡಿದ ಭಿಕ್ಷೆಯಿಂದ ಸಂತೋಷಭರಿತರಾದೆವು! ನಿಮ್ಮ ಮನೆಯಲ್ಲಿ ಲಕ್ಷ್ಮಿಯು ನಿರಂತರ ವಾಸವಾಗುವಳು, ಪುತ್ರ-ಪೌತ್ರಾದಿಗಳಿಂದ ಆನಂದದೊಳಗೆ ಇರುವಿರಿ, ಇದು ನಿಶ್ಚಯವೆಂದು ಭಾವಿಸು." ಎಂದು ವರ ನೀಡಿ ಸಂಗಮಕ್ಕೆ ಹೋದರು.

ಗುರುಗಳ ನಿರ್ಗಮನದ ನಂತರ ಬ್ರಾಹ್ಮಣನು ಮನೆಗೆ ಬಂದನು. ಹೆಂಡತಿಯು ಎಲ್ಲ ವಾರ್ತೆ ತಿಳಿಸಿ ಹಾಲು ತುಂಬಿದ ಪಾತ್ರೆ ತೋರಿಸಿದಳು. ಅವನಿಗೆ ಅತ್ಯಂತ ವಿಸ್ಮಯಾನಂದಗಳಾದವು.

ನಂತರ ಆ ಬ್ರಾಹ್ಮಣ ದಂಪತಿಗಳು ಗುರುಪೂಜೆಗೆಂದು ಸಂಗಮಕ್ಕೆ ಹೋದರು. ಶ್ರೀ ಗುರುಗಳಿಗೆ ನಮಸ್ಕರಿಸಿ ಪೂಜಿಸಿದರು. ಗುರುಗಳು ಅವರನ್ನು ಆಶೀರ್ವದಿಸಿ ಕಳಿಸಿ ಕೊಟ್ಟರು.''

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೨೩ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಶ್ರೀ ಗುರುಗಳು ದರಿದ್ರ ಬ್ರಾಹ್ಮಣನ ಬರಡೆಮ್ಮೆಯು ಹಾಲನ್ನು ಕೊಡುವಂತೆ ಕರುಣಿಸಿದ ಸಂಗತಿಯು ಎಲ್ಲರಲ್ಲಿಯೂ ಕೌತುಕವನ್ನುಂಟುಮಾಡಿತು. ಮರುದಿನ ಆ ಎಮ್ಮೆಯನ್ನು ಬಾಡಿಗೆಯಿಂದ ಒಯ್ಯುವದಕ್ಕೆ ಕೆಲವರು ಬಂದು ಬ್ರಾಹ್ಮಣನನ್ನು ವಿಚಾರಿಸಿದರು. ಅದಕ್ಕೆ ಬ್ರಾಹ್ಮಣನು— 'ನಮ್ಮ ಎಮ್ಮೆ ನಿನ್ನಿಂದ ಹಾಲು ಕೊಡಹತ್ತಿದೆ. ಇನ್ನು ಭಾರ ಹೇರುವದಕ್ಕೂ ಹೂಡುವದಕ್ಕೂ ಕೊಡುವದಿಲ್ಲ' ಎಂದು ಹೇಳಿದನಲ್ಲದೆ ಅದೇ ಹಿಂಡಿ ಇಟ್ಟ ಹಾಲಿನ ಪಾತ್ರೆಗಳನ್ನು ಅವರಿಗೆ ತೋರಿಸಿದನು. ಅವರು ವಿಸ್ಮಿತರಾಗಿ ಹಿಂದಿರುಗಿ ಹೋದರು. ಈ ಬರಡೆಮ್ಮೆಯು ಹಾಲು ಕೊಡಹತ್ತಿದ ಸುದ್ದಿಯು ಕರ್ಣೋಪಕರ್ಣದಿಂದ ಆ ಗ್ರಾಮಾಧಿಪತಿಗೆ ಗೊತ್ತಾಯಿತು. ಕೂಡಲೆ ಅವನು ಬ್ರಾಹ್ಮಣನನ್ನು ಕಂಡು ನಿಜ ಸಂಗತಿಯನ್ನರಿತನು. ಬ್ರಾಹ್ಮಣನು ಅವನಿಗೆ— 'ಇದು ಸಂಗಮವಾಸಿಗಳಾದ ಶ್ರೀ ಗುರುಗಳ ಕೃಪೆಯು' ಎಂದು ಹೇಳಿದನು.

ಬ್ರಾಹ್ಮಣನ ಹೇಳಿಕೆಯನ್ನು ಕೇಳಿ ಗ್ರಾಮಾಧಿಪತಿಯಲ್ಲಿ ಶ್ರೀ ಗುರುಗಳ ವಿಷಯಕ್ಕೆ ಪೂಜ್ಯ ಭಕ್ತಿಯುತ್ಪನ್ನವಾಯಿತು. ಕೂಡಲೆ ಅವನು ತನ್ನ ಪರಿವಾರ ಹಾಗು ನಾಗರಿಕ ಮುಖ್ಯರನ್ನು ಕೂಡಿ ಕೊಂಡು ಸಂಗಮಕ್ಕೆ ಹೊರಟನು. ಒಳ್ಳೆ ಉತ್ಸಾಹದಿಂದ ಎಲ್ಲರೂ ಹೋಗಿ ಶ್ರೀ ಗುರುಗಳನ್ನು ವಂದಿಸಿದರು. ಗುರುದರ್ಶನಕ್ಕೆ ಹೋದವರೆಲ್ಲರು ಭಕ್ತಿಭಾವದಿಂದ ಗುರುಸ್ತೋತ್ರ ಹಾಡಿದರು, ಅವರ ಈ ನಿಷ್ಕಲ್ಮಷ ಭಕ್ತಿಗೆ ಗುರುಗಳು ಬಹಳೇ ಸಂತುಷ್ಟರಾದರು. ಶ್ರೀ ಗುರುಗಳು ಆ ಗ್ರಾಮಾಧಿಪತಿಯನ್ನು ಕುರಿತು— "ಗ್ರಾಮಾಧಿಪತಿಯೆ ! ನಾವು ಯತಿಗಳು. ಅರಣ್ಯವಾಸಿಗಳು. ನೀವು ಇಷ್ಟೆಲ್ಲ ಪರಿವಾರ ಸಂಭ್ರಮದೊಡನೆ ಇಲ್ಲಿಗೆ ಬಂದಿರುವದಕ್ಕೆ ಏನಾದರೂ ಕಾರಣವಿರಬಹುದಲ್ಲವೇ?" ಎನ್ನಲು ಗ್ರಾಮಾಧಿಪತಿಯು ಕೈಮುಗಿದು— "ಮಹಾಸ್ವಾಮಿ ! ಭಕ್ತಜನೋದ್ಧಾರಕರಾದ ನೀವು ನಾರಾಯಣಾವತಾರಿಗಳು. ಭಕ್ತರ ವಾಸನೆಗಳನ್ನು ಪೂರೈಸುವಿರಿ, ಶ್ರೀ ಗುರುಮೂರ್ತಿಗಳೇ ! ಭಕ್ತವತ್ಸಲರೆಂಬ ನಿಮಗಿರುವ ಬಿರುದು ವೇದ ಪ್ರಸಿದ್ಧವದೆ. ಈ ನಮ್ಮ ಗಾಣಗಾಪುರ ಸ್ಥಾನವು ಮಹಾಸ್ಥಾನವೆನ್ನಿಸಿದೆ. ತಾವು ನಮ್ಮ ಗ್ರಾಮದಲ್ಲಿಯೇ ಇದ್ದುಕೊಂಡು ವ್ರತಾನುಷ್ಠಾನ ಸಾಗಿಸಿ ಈ ಕ್ಷೇತ್ರವನ್ನು ಪಾವನಗೊಳಿಸಿರಿ, ಇಲ್ಲಿಯೇ ಮಠವೊಂದನ್ನು ತಮಗೆ ಏರ್ಪಡಿಸಿ ಕೊಡುವೆವು. ಇಲ್ಲಿಯೇ ಇದ್ದುಕೊಂಡು ನಮ್ಮನ್ನು ಉದ್ಧರಿಸಿರಿ" ಎಂದು ಭಕ್ತಿಪೂರ್ವಕ್ಕ ನಮಸ್ಕಾರ ಮಾಡಿದನು.

ಗ್ರಾಮಾಧಿಪತಿಯ ವಿನಂತಿಯನ್ನು ಕುರಿತು ಶ್ರೀ ಗುರುಗಳು ತಮ್ಮ ಮನಸಿನಲ್ಲಿ— "ಇನ್ನು ನಾವು ಪ್ರಕಟವಾಗುವ ಗತಿಯೊದಗಿತು. ಭಕ್ತಜನೋದ್ಧಾರವ. ನಮ್ಮ ಉದ್ದೇಶವು ಸಫಲವಾಗುವದಕ್ಕೆ ಈ

ಗ್ರಾಮಾಧಿಪತಿಯ ಮನೋರಥ ಪೂರೈಸುವದು ಯುಕ್ತವು'' ಎಂದು ವಿಚಾರಿಸಿ ಗ್ರಾಮಾಧಿಪತಿಯನ್ನು ಕುರಿತು— ''ಗ್ರಾಮಾಧಿಪ ! ನಿನ್ನ ಇಚ್ಛೆಯಿದ್ದಂತಾಗಲಿ, ನಿನ್ನಲ್ಲಿಯ ಭಕ್ತಿಯು ವರ್ಧಿಸಲಿ" ಎಂದು ಪ್ರಸನ್ನ ನುಡಿಯನ್ನಾಡಿದರು.

ಗುರುಗಳ ಪ್ರಸನ್ನ ವಾಕ್ಯ ಕೇಳಿ ಗ್ರಾಮಾಧಿಪನು ಶ್ರೀ ಗುರುಗಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕೊಂಡು ವಾದ್ಯವೈಭವದ ಸಮಾರಂಭದೊಂದಿಗೆ ಗ್ರಾಮದೊಳಕ್ಕೆ ಮೆರವಣಿಗೆಯಿಂದ ಕರಕೊಂಡು ಬಂದನು. ಗ್ರಾಮವಾಸಿಗಳು ಸ್ವಾಮಿಗಳನ್ನು ಸ್ವಾಗತಿಸಿದರು.

ಗ್ರಾಮಾಧಿಪನು ನಗರದ ಪಶ್ಚಿಮ ದಿಕ್ಕಿಗಿರುವ ಬಹು ದಿವಸಗಳಿಂದ ಜನವಸತಿಯಿಲ್ಲದ ಒಂದು ದೊಡ್ಡ ಮನೆಯಲ್ಲಿ ಶ್ರೀ ಗುರುಗಳನ್ನು ಇಳಿಸಿದನು. ಆ ಮನೆಯ ಮುಂದೆಯೇ ಉನ್ನತ ಅಶ್ವತ್ಥ ವೃಕ್ಷ ವೊಂದು ಇದ್ದಿತು.

ಶ್ರೀ ಗುರುಗಳು ಅತ್ತಿತ್ತ ನಿರೀಕ್ಷಿಸುತ್ತ ಆ ಅಶ್ವತ್ಥದ ಎದುರಿಗೆ ಬಂದರು, ದೃಷ್ಟಿಸಿ ಅದನ್ನು ನೋಡಿದರು, 'ಈ ಮಹಾವೃಕ್ಷದ ಸನ್ನಿಧಿಯಲ್ಲಿಯ ಈ ಮನೆಯು ಯೋಗ್ಯವಿದೆ' ಎಂದು ನುಡಿಯುತ್ತಿರು ವಾಗಲೇ ಆ ವೃಕ್ಷದಿಂದ ಭೀಕರ ಬ್ರಹ್ಮರಾಕ್ಷಸವೊಂದು ಪ್ರಕಟವಾಯಿತು. ಅದು ಶ್ರೀ ಗುರುಗಳ ಮುಂದೆ ಹರಿದು ಬಂದು ಕೈಮುಗಿದು— ''ಸ್ವಾಮಿ ! ಘೋರಾಂಧಕಾರದಲ್ಲಿ ಮುಳುಗಿದ ನನ್ನನ್ನು ಉದ್ಧರಿಸುವವ ರಂತೆ ತೋರುವಿರಿ. ನಿಮ್ಮ ದರ್ಶನದಿಂದ ನನ್ನ ಪೂರ್ವಾರ್ಜಿತ ಪಾಪಗಳೆಲ್ಲ ನಷ್ಟವಾದವು. ದಯಾಳುವಾದ ತಾವು ನನ್ನನ್ನು ಉದ್ಧರಿಸಬೇಕು" ಎಂದಿತು. ಗುರುಗಳು ಆಗಲೇ ಆ ಬ್ರಹ್ಮರಾಕ್ಷಸನ ತಲೆಯಮೇಲೆ

ತಮ್ಮ ವರದ ಹಸ್ತವನ್ನಿಟ್ಟರು. ಕೂಡಲೆ ಅದು ಮಾನವ ರೂಪದಿಂದ ಗುರುಪಾದಗಳ ಮೇಲೆ ಉರುಳಾಡ ಹತ್ತಿತು. ಗುರುಗಳು ಅದಕ್ಕೆ— "ನೀನು ಶೀಘ್ರವೇ ಸಂಗಮಕ್ಕೆ ಹೋಗಿ ಸ್ನಾನಮಾಡು. ಮುಕ್ತನಾಗುವಿ ಇನ್ನು ಮುಂದೆ ನಿನಗೆ ಪುನರ್ಜನ್ಮವಿಲ್ಲ" ಎಂದು ಹೇಳಿದರು.

ಗುರುಗಳ ನಿರೋಪದಂತೆ ಆ ರಾಕ್ಷಸವು ಸಂಗಮಕ್ಕೆ ಹೋಗಿ ಸ್ನಾನಮಾಡಿತು. ಹಾಗು ತನ್ನ ರಾಕ್ಷಸ ದೇಹವನ್ನು ವಿಸರ್ಜಿಸಿ ಮುಕ್ತವಾಯಿತು. ಸಮಾರಂಭಕ್ಕೆ ಕೂಡಿದವರೆಲ್ಲರು ಇದೆಲ್ಲವನ್ನು ನೋಡಿ ವಿಸ್ಮಯಹೊಂದಿದರು, ಗುರು ಮಹಿಮೆಯನ್ನು ಹೊಗಳಿದರು.

ಆ ಬಳಿಕ ಗುರುಗಳು ಆ ಮನೆಯಲ್ಲಿಯೇ ಇರಹತ್ತಿದರು. ಅವರ ವಾಸ್ತವ್ಯದಿಂದ ಆ ಮನೆಯು ಮಠವಾಗಿ ಮಾರ್ಪಾಟಾಯಿತು. ಶ್ರೀ ಗುರುಗಳ ಪೂಜೆ–ಪುನಸ್ಕಾರಗಳು ಅಲ್ಲಿಯೇ ನಡೆದವು. ಗುರುಗಳು ಅನುಷ್ಠಾನಕ್ಕಾಗಿ ಮಾತ್ರ ನಿತ್ಯವೂ ಸಂಗಮಕ್ಕೆ ಹೋಗುತ್ತಿದ್ದರು. ಗ್ರಾಮಾಧಿಪನೂ ತನ್ನ ಪರಿವಾರದೊಂದಿಗೆ ಗುರುಗಳನ್ನು ಹಿಂಬಾಲಿಸಿ ಹೋಗುತ್ತಿದ್ದನು. ನಿತ್ಯವೂ ಇದೇ ಕ್ರಮವು ಸಂಭ್ರಮದಿಂದ ಸಾಗಹತ್ತಿತು. ಇದರಿಂದ ಸುತ್ತಲೆಲ್ಲವೂ ಗುರುಗಳ ಪ್ರಕಟ ಸ್ವರೂಪವು ಪಸರಿಸಿತು.

—o—

ಕುಮಸೀ ಗ್ರಾಮದಲ್ಲಿ 'ತ್ರಿವಿಕ್ರಮಭಾರತಿ' ಎಂಬ ತ್ರಿವೇದಿ ಬ್ರಾಹ್ಮಣನಿದ್ದನು. ಅವನು ನಿತ್ಯವೂ ನರಹರಿಯ ಸ್ವರೂಪ ಚಿಂತಿಸಿ ಮಾನಸ ಪೂಜೆ ಮಾಡುತ್ತಿದ್ದನು. ಗಾಣಗಾಪುರದಲ್ಲಿ ಶ್ರೀ ನೃಸಿಂಹ ಸರಸ್ವತಿ ಯತಿಗಳು ದಿನದಿನಕ್ಕೂ ಖ್ಯಾತಿಹೊಂದುತ್ತಿರುವದನ್ನು ಕೇಳಿ ಆ ತ್ರಿವೇದಿಯು ಜನರೆದುರು

ಅವರನ್ನು ಧಿಕ್ಕರಿಸಿ ನುಡಿಯುತ್ತಿದ್ದನು, ಗುರುಗಳ ಮಹತ್ವವನ್ನರಿಯದೆ ಅವನು 'ಗಾಣಗಾಪುರದ ಯತಿಯು ಡಾಂಭಿಕನು, ಹಾಗು ಕಪಟಸನ್ಯಾಸಿಯು' ಎಂದು ನಿಂದೆಯಾಡುತ್ತಿದ್ದನು. ಶ್ರೀ ಗುರುಗಳು 'ತಮ್ಮನ್ನು ತ್ರಿವೇದಿಯು ನಿಂದಿಸುವದನ್ನು ಜ್ಞಾನದಿಂದ ಅರಿತರು. ನಾಮಧಾರಕನೆ ! ಇದರ ಮುಂದಿನ ಸಂಗತಿಯು ಬಲು ಮನೋರಂಜಕವಿದೆ. ಅದನ್ನು ಮುಂದೆ ಹೇಳುವೆನು.'

ಎಂದು ಸಿದ್ಧಮುನಿಯು ಹೇಳಿದನು.

—o—

# ೨೪ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ|| ಸಿದ್ಧಮುನಿಯು ನಾಮಧಾರಕನಿಗೆ ಮುಂದಿನ ಕಥೆ ಹೇಳಹತ್ತಿದನು.

"ನಾಮಧಾರಕನೆ ! ಶ್ರೀ ಗುರುಗಳ ಜ್ಞಾನದೃಷ್ಟಿಗೆ ತ್ರಿವಿಕ್ರಮ ಭಾರತಿಯು ತಮಗೆ ಮಾಡುತ್ತಿರುವ ನಿಂದೆಗಳು ತೋರಹತ್ತಿದವು. ಅವರು ತಮ್ಮ ಪ್ರೀತಿಯ ಭಕ್ತ ಗ್ರಾಮಾಧಿಪನನ್ನು ಕುರಿತು— "ನಾವು ಇವತ್ತೆ ಕುಮಸೀ ಗ್ರಾಮಕ್ಕೆ ಹೋಗಿ ಬರುವ ನಿರ್ಧಾರಮಾಡಿರುವೆವು. ಅಲ್ಲಿ 'ತ್ರಿವಿಕ್ರಮ ಭಾರತಿ' ಎಂಬ ತ್ರಿವೇದಿ ವಿದ್ವಾಂಸನಿರುವನು. ಅವನನ್ನು ನಾವು ಕಾಣುವದು ಅತ್ಯಗತ್ಯವಿದೆ. ನಮ್ಮ ಜೊತೆಗೆ ನೀನು ನಿನ್ನ ಪರಿವಾರದೊಂದಿಗೆ ಹೊರಡು" ಎಂದು ಅಪ್ಪಣೆ ಕೊಟ್ಟರು. ಗ್ರಾಮಾಧಿಪನು ಒಳ್ಳೆ ಹರ್ಷ

ರಿಂದ ಆನೆ-ಕುದುರೆ-ನಾಗರಿಕ ಜನಜಂಗುಳಿ ಇವರೆಲ್ಲರಿಂದ ಕೂಡಿಕೊಂಡು ಶ್ರೀ ಗುರುಗಳನ್ನು ಪಲ್ಲಕ್ಕಿಯಿಂದ ಕರೆದುಕೊಂಡು ಕುಮಸೀ ಗ್ರಾಮದ ಮಾರ್ಗ ಹಿಡಿದನು. ಎಲ್ಲರೂ ಆ ಗ್ರಾಮವನ್ನು ತಲುಪಿದರು.

ಶ್ರೀ ಗುರುಗಳು ಕುಮಸಿಯನ್ನು ಮುಟ್ಟುವ ಮೊದಲೇ ತ್ರಿವಿಕ್ರಮಭಾರತಿಯು ದಿನದಂತೆ ತಾನು ನರಹರಿಯ ಮಾನಸ ಪೂಜೆಗೆ ಕುಳಿತಿದ್ದನು. ನರಹರಿಯನ್ನು ಪ್ರತ್ಯಕ್ಷ ಕಂಡೇ ಪೂಜೆ ಸಮಾಪ್ತಿಗೊಳಿಸುವದು ಅವನ ನಿತ್ಯ ಪದ್ಧತಿಯಾಗಿದ್ದಿತು. ಆ ದಿನ ಆತನು ವಿಶ್ವಪ್ರಯತ್ನಮಾಡಿದರೂ ಆತನ ಮಾನಸ ಪೂಜೆ ಸಫಲಗೊಳ್ಳದಾಯಿತು ನರಹರಿಯು ತನ್ನ ಸ್ವರೂಪದಿಂದ ಅವನಿಗೆ ಕಾಣದಾದನು. ತನ್ನ ತಪೋವೃತ್ತಿಯು ವ್ಯರ್ಥವಾಯಿತೆಂದು ಆತನು ಚಿಂತೆಗೊಳಗಾದನು. ಹೀಗೆ ವಿಚಾರ ಮಾಡುತ್ತ ಅವನು ತನ್ನ ದೃಷ್ಟಿ ಹೊರಳಿಸಿ ನೋಡಲು ದಂಡಧಾರಿ ಕಾಷಾಯವಸ್ತ್ರಭೂಷಿತನೊಬ್ಬನು ನದೀತೀರಕ್ಕೆ ಬರುವದನ್ನು ದೂರಿನಲ್ಲಿಯೇ ಕಂಡನು. ಇನ್ನಿಷ್ಟು ಕಣ್ಣರಳಿಸಿ ಆ ದಂಡಧಾರಿಯನ್ನಾತನು ನೋಡಲು ಅವನು ತನ್ನ ಮಾನಸ ಪೂಜೆಯಲ್ಲಿಯ ಅಭೀಷ್ಟಿತ ನರಹರಿಯೆಂಬುದನ್ನು ಗುರುತಿಸಿದನು. ಆ ಮೂರ್ತಿಯ ಜೊತೆಗಿದ್ದ ಗಾಣಗಾಪುರ ಗ್ರಾಮಾಧಿಪ ಹಾಗು ಅವನ ಪರಿವಾರದ ಪ್ರತಿಯೊಬ್ಬರು ಆ ತ್ರಿವಿಕ್ರಮ ಭಾರತಿಯ ಕಣ್ಣಿಗೆ ನರಹರಿಯಂತೆಯೇ ಕಾಣಿಸಹತ್ತಿದರು. ಆತನು ನೋಡಿದನು, ವಿಸ್ಮಯಹೊಂದಿದನು. ತನ್ನ ಆಸನ ಬಿಟ್ಟು ಮೇಲೆದ್ದನು. ಸಾಷ್ಟಾಂಗ ನಮಸ್ಕಾರ ಹಾಕುತ್ತ ನದಿಯತ್ತ ಆ ಮೂರ್ತಿಗಳೆದುರು ಸಾಗಿದನು. ಶ್ರೀ ಗುರುಗಳನ್ನು ತನ್ನ ನರಹರಿಯ ಸ್ವರೂಪದಿಂದ ಕಂಡು ನಮಸ್ಕರಿಸಿದನು. ಅದರಂತೆ ನರಹರಿ ಸ್ವರೂಪಿಗಳಾದ ಎಲ್ಲರನ್ನು ವಂದಿಸಹತ್ತಿದನು. ಎಲ್ಲರೂ ಒಂದೇ ಸ್ವರೂಪಿನವರಾದು

ದರಿಂದ ಅವರಲ್ಲಿ ಶ್ರೇಷ್ಠ-ಕನಿಷ್ಠರನ್ನು ಕಂಡು ಹಿಡಿಯುವದು ಅವನಿಗೆ ಅಸಾಧ್ಯವಾಯಿತು. ಅದರಿಂದ ಅವನು ದಿಕ್ಕುಗಾಣದಾದನು. ಪುನಃ ಅವನು ಗುರುಗಳಿಗೆ ವಂದಿಸಿ— 'ದೇವಾ ! ನೀನೇ ತ್ರೈಮೂರ್ತಿಯು, ನೀನೇ ಜಗದ್ಗುರು. ನಿನ್ನ ಸ್ವರೂಪಜ್ಞಾನವಾಗುವದು. ನೀನು ದಯೆಯಿಂದ ನನಗೆ ನಿಜರೂಪ ತೋರಿಸು. ನೀನು ಸರ್ವವ್ಯಾಪಿಯು, 'ನೃಸಿಂಹ ಸರಸ್ವತಿ' ಯತಿಯಾದ ನೀನು ಎಲ್ಲರಲ್ಲಿಯೂ ನರಸಿಂಹ ಮೂರ್ತಿಯಾಗಿ ತೋರುವಿ. ಅಂದಮೇಲೆ ಇವರೆಲ್ಲರಲ್ಲಿ ನೀನೇ 'ನೃಸಿಂಹಸರಸ್ವತಿ' ಎಂದು ಯಾರನ್ನು ನಮಸ್ಕರಿಸಲಿ? ಯಾರಲ್ಲಿ ದಯೆಯನ್ನು ಬೇಡಲಿ? ಸ್ವಾಮಿ ನಿನ್ನ ನಿಜರೂಪ ತೋರಿಸು. ನಾನು ಬಹು ದಿನ ತಪಸ್ಸು ಮಾಡಿದೆನು. ಬಹು ದಿವಸ ಪೂಜೆ ಮಾಡಿದೆನು. ಅದರ ಫಲವಾಗಿ ಇಂದು ನಿನ್ನ ಸಾಕ್ಷಾತ್ ಮೂರ್ತಿಯನ್ನು ಕಂಡೆನು. ವಿಶ್ವೋದ್ಧಾರಕ್ಕಾಗಿ ನೀನು ಭೂಮಿಗೆ ಅವತರಿಸಿರುವಿ, ನಿನ್ನ ಚಿನ್ಮಯ ಸ್ವರೂಪ ತೋರಿಸು." ಈ ಪ್ರಕಾರ ತ್ರಿವಿಕ್ರಮಭಾರತಿಯು ಸ್ತುತಿ ಮಾಡಲು ಗುರುಮೂರ್ತಿಯು ಸಂತುಷ್ಟನಾದನು. ತನ್ನ ನಿಜ ರೂಪ ತೋರಿದ್ದಲ್ಲದೆ ಉಳಿದ ಎಲ್ಲರ ಮುನ್ನಿನ ಸ್ವರೂಪವನ್ನು ಅವನಿಗೆ ತೋರಿಸಿದನು. ಬಳಿಕ ಗುರುಗಳು— "ತ್ರಿವೇದಿಯೆ ! ನೀನು ನಮ್ಮನ್ನು ಅಜ್ಞತೆಯಿಂದ ದೂಷಿಸುವಿ, ಆದ್ದರಿಂದಲೇ ನಾವು ಇಲ್ಲಿಗೆ ಬಂದೆವು. ದಾಂಭಿಕರೆಂದರೆ ಯಾರು? ಇದನ್ನು ನಮಗೆ ಹೇಳು" ಎಂದೆನ್ನಲು ತ್ರಿವಿಕ್ರಮನು— "ಸ್ವಾಮಿ ! ನನ್ನ ಮಾಯೆಯನ್ನು ಕಳೆ. ಅದರಿಂದಲೇ ನಾನು ಅಜ್ಞಾನಿಯಾಗಿರುವೆನು. ಪರಮಾರ್ಥವನ್ನರಿಯೆನು, ನೀನು ಜ್ಯೋತಿಸ್ಸ್ವರೂಪನು. ನನಗೆ ದರ್ಶನ ನೀಡಿದಿ. ನನ್ನನ್ನು ಕ್ಷಮಿಸಿ ಉದ್ಧರಿಸು. ಗುರುವೇ ! ನಿನ್ನ ಕೃಪೆಯಾಗಲು ದುಃಖ ದೈನ್ಯಗಳೆಲ್ಲಿ ಉಳಿಯುವವು? ಅರ್ಜುನನಿಗೆ ವಿಶ್ವ

ರೂಪ ತೋರಿಸಿ ಪ್ರಸನ್ನನಾದವನು ನೀನೇ ಅಲ್ಲವೇ? ಗುರುನಾಥನೇ ! ನಿನ್ನ ಮಹಿಮೆ ಅನಂತವಾಗಿರುವವು. ನನಗೆ ನಿನ್ನ ದರ್ಶನವು ಚಿಂತಾಮಣಿರತ್ನ ದೊರೆತಂತಾಗಿದೆ.” ಈ ಪ್ರಕಾರ ನುಡಿದು ತ್ರಿವಿಕ್ರಮನು ಗುರುಸ್ತೋತ್ರ ಮಾಡಿದನು. ಗುರುಮೂರ್ತಿಯು ಸಂತುಷ್ಟನಾಗಿ ಆತನಿಗೆ ವರ ನೀಡಿದನು. ‘ತ್ರಿವಿಕ್ರಮಾ! ನಿನಗೆ ಸದ್ಗತಿಯು ನಿಶ್ಚಿತವು, ನಿನಗೆ ಪುನರ್ಜನ್ಮವಿಲ್ಲ. ನಿನಗೆ ಪರಮಾರ್ಥ ಲಭಿಸಿತು, ನಿನಗೆ ಈಶ್ವರನಲ್ಲಿ ಐಕ್ಯತೆಯೊದಗುವದು’ ಎಂದು ಶ್ರೀ ಗುರುವು ಹೇಳಿ ಗಾಣಗಾಪುರಕ್ಕೆ ಹಿಂತಿರುಗಿದರು. ಕ್ಷಣಮಾತ್ರದಲ್ಲಿಯೇ ಬಂದು ತಮ್ಮ ಮಠ ಪ್ರವೇಶ ಮಾಡಿದರು.”

ಈ ಪ್ರಕಾರ ಸಿದ್ಧಮುನಿಯು ಹೇಳಿದನು.

—o—

## ೨೫ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು ಶ್ರೀ ಗುರು ಚರಿತ್ರೆಯ ಮುಂದಿನ ಕಥೆಯನ್ನು ಹೇಳತೊಡಗಿದನು. ಎಂತೆಂದರೆ—

“ನಾಮಧಾರಕ ! ಬೀದರ ನಗರದಲ್ಲಿ ಒಬ್ಬ ಯವನ ರಾಜನಿದ್ದನು. ಅವನು ಮಹಾ ಕ್ರೂರನೂ, ಪಾಪಿಷ್ಠನೂ ಆಗಿದ್ದನು. ಯಾವಾಗಲೂ ಜೀವಹಿಂಸೆಯೇ ಅವನ ವೃತ್ತಿಯಾಗಿದ್ದಿತು. ಬ್ರಾಹ್ಮಣರನ್ನು ತನ್ನ ಬಳಿಗೆ ಕರೆಯಿಸಿಕೊಂಡು ಅವರೊಡನೆ ವೇದವಿಷಯಕ್ಕೆ ಚರ್ಚಿಸುತ್ತಿದ್ದನು. ಹಾಗು

ಅವರಿಂದ ವೇದಗಳನ್ನು ಪಠಣಮಾಡಿಸಿ ತಾನು ಶ್ರವಣ ಮಾಡುತ್ತಿದ್ದನು. ಅವನು ಬ್ರಾಹ್ಮಣರನ್ನು ಕುರಿತು ''ಯಾರಾದರೂ ವಿದ್ವಾಂಸ ಬ್ರಾಹ್ಮಣರಿದ್ದರೆ ಅವರು ನಮ್ಮ ಸಭೆಗೆ ಬಂದು ಸಕಲ ವೇದಗಳನ್ನು ಉಚ್ಚರಿಸಬೇಕು. ಅವರಿಗೆ ಮಾನಮರ್ಯಾದೆ ಸಲ್ಲಿಸುವೆವು, ದ್ರವ್ಯವನ್ನು ಕೊಡುವೆವು. ಎಲ್ಲರಲ್ಲಿಯೂ ಮಿಗಿಲಾದ ವೇದಜ್ಞನಿಗೆ ಹೆಚ್ಚಿನ ಮರ್ಯಾದೆ ಮಾಡುವೆವು, ವೇದಾರ್ಥವನ್ನು ವಿಶದಗೊಳಿಸುವ ವಿದ್ವಾಂಸನಿಗೆ ವಿಶೇಷ ಮಾನವನ್ನು ಕೊಡುವೆವು" ಎಂದು ಪ್ರಸಿದ್ಧಪಡಿಸಿದನು. ಬಹು ಜನ ಬ್ರಾಹ್ಮಣರು ದ್ರವ್ಯದಾಶೆಯಿಂದ ಆ ಯವನ ರಾಜನೆದುರು ಹೋಗಿ ವೇದಪಠಿಸಿ ಅವನಿಂದ ಹಣ ಸ್ವೀಕರಿಸಹತ್ತಿದರು. ಆ ರಾಜನು ಕೆಲ ಬ್ರಾಹ್ಮಣರ ಮುಖದಿಂದ ಯಜ್ಞಕಾಂಡದ ಅರ್ಥ ಕೇಳಿ— ''ಬ್ರಾಹ್ಮಣರು ಯಜ್ಞಮಾಡುವರು, ಆ ಯಜ್ಞಗಳಲ್ಲಿ ಪಶು ಹಿಂಸೆ ಮಾಡುವರು. ತಮ್ಮ ಈ ಕೃತಿಯನ್ನು ಬಚ್ಚಿಟ್ಟು 'ಮ್ಲೇಂಛರು ಪಶುವಧೆ ಮಾಡುವವರು' ಎಂದು ನಮ್ಮನ್ನು ನಿಂದಿಸುವರು. ಹೀಗೆ ಆತನು ಬ್ರಾಹ್ಮಣರನ್ನು ಧಿಕ್ಕರಿಸಿ ಮಾತಾಡುತ್ತಿದ್ದನು. ಮತ್ತು ತನ್ನೆದುರು ನಿಂತು ವೇದ ಪಠಿಸಿದ ವಿದ್ವಜ್ಜನರ ಯೋಗ್ಯತೆ ನೋಡಿ ಅವರಿಗೆ ಅಪಾರ ದ್ರವ್ಯವನ್ನೂ ಕೊಡುತ್ತಿದ್ದನು. ಅವನ ಈ ಉದಾರತನವು ದಿಗ್ದೇಶಗಳಲ್ಲಿ ಹರಡಿತು. ಹಣದಾಸೆಯಿಂದ ವೇದಶಾಸ್ತ್ರಿಗಳೂ, ನಿಪುಣರೂ, ನಾ ಮುಂದೆ, ನೀ ಹಿಂದೆ ಎಂದು ರಾಜನ ಭೆಟ್ಟಿಗೆ ಬರುವರು. ಹಾಗು ವೇದ ಉಚ್ಚರಿಸಿ ಪಾರಿತೋಷಕ ಪಡೆಯುವರು. ಇಂಥ ಮಂದಮತಿ ಬ್ರಾಹ್ಮಣರು ನಿಜವಾಗಿಯೂ ಯಮಪುರ ಸೇರುವರು.

ಈ ಪ್ರಕಾರ ಕೆಲವು ದಿನಗಳ ವರೆಗೆ ರಾಜ–ಹಾಗು ದ್ರವ್ಯದಾಸೆಯ ಬ್ರಾಹ್ಮಣರ ಮೇಲನವು

ನಡೆಯಿತು ಮ್ಲೇಂಛರ ಮುಂದೆ ವೇದ ಪಠಿಸುವದು ಅಧರ್ಮ ಎಂಬ ನೀತಿಯು ಧನಪಿಶಾಚಿ ಬ್ರಾಹ್ಮಣರಿಂದ ಮರೆಯಾಯಿತು, ಬಹು ಜನ ವಿಪ್ರರು ದುಡ್ಡಿಗಾಗಿ ಹಾದೀ ಬಿಟ್ಟು ವರ್ತಿಸಿದರು.

ಮೇಲೆ ಹೇಳಿದಂಥ ನೀಚವೃತ್ತಿಯ ಇಬ್ಬರು ಬ್ರಾಹ್ಮಣರು ಆ ಯುವನ ರಾಜನ ಸಭೆಗೆ ಬಂದರು, ವೇದಗಳಲ್ಲಿ ತಮಗಿರುವ ಪಾಂಡಿತ್ಯವನ್ನು ಆ ರಾಜನೆದುರು ವೇದ ಉಚ್ಚರಿಸಿ ವ್ಯಕ್ತಪಡಿಸಿದರು. ಅದರಿಂದ ಆ ರಾಜನು— 'ಇದುವರೆಗೆ ವೇದ ಪಠಿಸಿದ ಬ್ರಾಹ್ಮಣರಿಗಿಂತಲೂ ಈ ಬ್ರಾಹ್ಮಣದ್ವಯರು ಶ್ರೇಷ್ಠರು, ಇವರನ್ನು ವಿಶಿಷ್ಟಬಗೆಯಿಂದ ಸತ್ಕರಿಸಬೇಕು' ಎಂದು ನಿರ್ಧರಿಸಿ ಅದರಂತೆ ಅವರಿಗೆ ತಿಳಿಸಿದನು, ಹಾಗು 'ನಿಮ್ಮ ಇಚ್ಛೆಯೇನಿರುವದೆಂದು ಅವರನ್ನು ಕೇಳಿದನು.

ರಾಜನು ತಮ್ಮ ವಿದ್ವತ್ತೆಗೆ ಒಳ್ಳೆ ಮೆಚ್ಚಿದುದನ್ನು ನೋಡಿ ಆ ಇಬ್ಬರೂ ಬ್ರಾಹ್ಮಣರು ಬಲ್ಲ ಉಬ್ಬಿದರು, ಪಾಂಡಿತ್ಯದ ಮದವು ಅವರಲ್ಲಿ ಉಕ್ಕೇರಿ ಕುದಿಯಹತ್ತಿತು. ಅವರು ತಮಗೆ ಸಂತುಷ್ಟತೆಯನ್ನು ಬೀರಿದ ರಾಜನನ್ನು ಕುರಿತು— "ಯುವನರಾಜಾ ! ನಿನ್ನ ರಾಜ್ಯದೊಳಗಿನ ಶ್ರೇಷ್ಠ ವಿದ್ವಾಂಸರನ್ನು ಕರೆಯಿಸು, ಅವರೊಡನೆ ನಾವು ವೇದ ಪ್ರಸಂಗ ಮಾಡುವೆವು, ನಾವು ಅವರನ್ನು ಜಯಿಸಿದರೆ ಅವರಿಂದ ನಮಗೆ ಜಯಪತ್ರ ಕೊಡಿಸು" ಎಂದರು. ಅದರಂತೆ ರಾಜನು ತನ್ನ ರಾಜ್ಯದಲ್ಲಿ ವೃತ್ತಿಯನ್ನು ಉಪಭೋಗಿಸುತ್ತಿದ್ದ ಎಲ್ಲ ವೇದಜ್ಞರನ್ನು ತನ್ನ ಆಜ್ಞೆಯಿಂದ ಬರಮಾಡಿಕೊಂಡನು, ರಾಜ್ಯದ ಮೂಲೆ ಮೂಲೆಗಳಿಂದ ಬ್ರಾಹ್ಮಣರು ಬಂದು ರಾಜಸಭೆಯಲ್ಲಿ ತುಂಬಿದರು. ರಾಜನು ಅವರೆಲ್ಲರಿಗೆ— "ನೀವು ವಿದೇಶಿಗಳಾದ ಈ ಇಬ್ಬರೂ ವೇದಪಂಡಿತರನ್ನು ವೇದ ಪ್ರಸಂಗದಿಂದ ಗೆಲ್ಲಬೇಕು. ಇಲ್ಲವಾದರೆ ಪ್ರತಿಯೊ

ಬ್ಬರು ಇವರಿಗೆ ಜಯಪತ್ರ ಕೊಡಬೇಕು'' ಎಂದು ಹೇಳಿದನು, ವೇದದಲ್ಲಿ ಗತಿಯಿಲ್ಲದವರೂ ಅಲ್ಪ ಮತಿಯುಳ್ಳವರೂ ಯಾರೂ ಪ್ರಸಂಗಕ್ಕೆ ಸಿದ್ಧರಾಗಲಿಲ್ಲ. ಅದರಂತೆ ಶ್ರೇಷ್ಠ ವೇದಜ್ಞರು ಯವನನ ಮುಂದೆ ವೇದ ಪ್ರಸಂಗ ಮಾಡುವದಕ್ಕಿಂತ ಜಯಪತ್ರಕೊಟ್ಟು ಹಿಂಜರಿದು ಹೋಗುವದೇ ಸೂಕ್ತವು'' ಎಂಬ ವಿಚಾರದಿಂದ ಅವರಾದರೂ ಮುಂದೆ ಬರಲಿಲ್ಲ. ಅದರಿಂದ ವಿದೇಶಿ ಪಂಡಿತರೇ ಜಯಸಿದರೆಂದು ರಾಜನು ಸಾರಿದನು. ಹಾಗು ಎಲ್ಲ ವೇದಜ್ಞರಿಂದ ಅಪರೀವರ್ರಿಗೆ ಜಯಪತ್ರಕೊಡಿಸಿದನು.

ಆಯಿತು ! ಆ ಇಬ್ಬರೂ ಬ್ರಾಹ್ಮಣ ಪಂಡಿತರು ಜಯಶಾಲಿಗಳಾದರು, ಬೇರೆ ಬೇರೆ ವಿದ್ವಜ್ಜನರಿಂದೆ ದೊರೆತ ಜಯಪತ್ರಗಳ ಹೊರೆಯನ್ನು ಕಟ್ಟಿಕೊಂಡರು. ಅವರು ರಾಜನನ್ನು ಕುರಿತು—'ರಾಜನ್ ! ನಾವು ನಿನ್ನ ರಾಜ್ಯದಲ್ಲೆಲ್ಲ ಸುತ್ತಾಡಿ ಪಂಡಿತರೊಡನೆ ಪ್ರಸಂಗ ಮಾಡುವದಕ್ಕೂ, ಅವರನ್ನು ಜಯಿಸಿದಲ್ಲಿ ಅವರಿಂದ ಜಯಪತ್ರ ತೆಗೆದುಕೊಳ್ಳಲಿಕ್ಕೂ ನಿಮ್ಮ ಆಜ್ಞೆಯ ಪರಿಪತ್ರವನ್ನು ನಮಗೆ ಕೊಡಬೇಕು" ಎಂದು ಹೇಳಲು ಆ ಯವನರಾಜನು ಹಾಗೇ ಆಗಲಿ ಎಂದು ಅವರ ಹೇಳಿಕೆಯಂತೆ ಒಂದು ಆಜ್ಞಾಪತ್ರಕೊಟ್ಟನು. ಹಾಗು ವಿಪುಲ ಧನ ನೀಡಿ ಅವರನ್ನು ಮರ್ಯಾದಿಸಿ ಬೀಳ್ಕೊಟ್ಟನು.

ಆ ತಾಮಸೀ ಬ್ರಾಹ್ಮಣರಿಬ್ಬರೂ ಆ ಯವನನ ರಾಜ್ಯದಲ್ಲಿ ಸಂಚಾರ ಕೈಕೊಂಡರು. ಊರೂರಿಗೆ ಹೋಗಿ ಅಲ್ಲಲ್ಲಿಯ ವಿದ್ವಾಂಸರಿಂದ ಜಯಪತ್ರ ಪಡೆಯುತ್ತ ನಡೆದರು. ವಾದ ಮಾಡುವ ಸಾಮರ್ಥ್ಯವಿದ್ದವರು ನಮ್ಮ ಮುಂದೆ ಬಂದು ವಾದ ಮಾಡಬೇಕು ಇಲ್ಲವೆ ಜಯಪತ್ರ ಬರೆದು ಕೊಡಬೇಕು ಎಂದು ಸಾರುತ್ತ ವಿದ್ವಜ್ಜನರಿರುವ ಊರುಗಳನ್ನು ಸುತ್ತಾಡುತ್ತ ಭೀಮಾತೀರದಲ್ಲಿದ್ದ ಕುಮಸೀ ಗ್ರಾಮಕ್ಕೆ ಬಂದರು.

ಅಲ್ಲಿ ತ್ರಿವಿಕ್ರಮನೆಂಬ ತ್ರಿವೇದಿ ಪಂಡಿತನನ್ನು ಕೆಣಕಿ ತಮ್ಮೊಡನೆ ವಾದಮಾಡುವದಕ್ಕೆ ಅವನನ್ನು ಆಹ್ವಾನಿಸಿದರು.

ತ್ರಿವಿಕ್ರಮಭಾರತಿಯು ಆ ಬ್ರಾಹ್ಮಣದ್ವಯರ ವೃತ್ತಿಯಿಂದಲೂ ಭಾಷಣದಿಂದಲೂ ಅವರ ಯೋಗ್ಯತೆಯನ್ನರಿತನು, "ಇವರಿಬ್ಬರೂ ತಾಮಸಿಗಳು, ಅಧರ್ಮಿಗಳು, ಇವರೊಡನೆ ನಾನು ವಾದ ಬೆಳಸುವ ಗೋಜಿಗೆ ಬೀಳದೆ ಉಪಾಯದಿಂದ ಇವರನ್ನು ಗಾಣಗಾಪುರಕ್ಕೆ ಕರದೊಯ್ಯಬೇಕು, ಶ್ರೀ ಗುರುಗಳಿಂದ ಉನ್ಮತ್ತತೆಯನ್ನು ಉತ್ಪಾಟಿಸಬೇಕು" ಎಂದು ಆಲೋಚನೆ ಮಾಡಿ ಅವರನ್ನು ಕುರಿತು—

"ವಿದ್ವನ್ಮಣಿಗಳೇ ! ನೀವು ವಾದ ಪ್ರಸಂಗಕ್ಕಾಗಿ ನನ್ನನ್ನು ಆಹ್ವಾನಿಸುತ್ತಿರುವಿರಿ, ಆದರೆ ನಾನು ಯತಿಯು ನನಗೆ ಜಯಾಪಜಯಗಳ ಸಂಬಂಧವಿಲ್ಲ. ಜಯಪತ್ರದಾಸೆಯಿಲ್ಲ, ಪ್ರತಿಷ್ಠೆಯೂ ಬೇಕಾಗಿಲ್ಲ. ಆದ್ದರಿಂದ ನೀವು ವಾದ-ಪ್ರಸಂಗಕ್ಕಾಗಿ ನನಗೆ ಒತ್ತಾಯಮಾಡಬೇಡಿರಿ, ನಿಮಗೆ ವಾದಭಿಕ್ಷೆಯು ನನ್ನಿಂದ ಸಲ್ಲಿಸಲಿಕ್ಕಾಗುವದಿಲ್ಲ. ಅದು ನಿಮಗೆ ಅವಶ್ಯವೇ ಇದ್ದರೆ ಭೀಮಾತೀರದಲ್ಲಿದ್ದ ಗಾಣಗಾಪುರಕ್ಕೆ ಹೋಗಿರಿ, 'ನೃಸಿಂಹ ಸರಸ್ವತಿ' ಯರೆಂಬ ಯತಿಗಳು ಅಲ್ಲಿಯ ಮಠದಲ್ಲಿ ವಾಸವಾಗಿರುವರು. ಅವರಿಂದಲೇ ನಿಮಗೆ ತೃಪ್ತಿಯಾಗುವಂತೆ ವಾದಭಿಕ್ಷೆ ಸಿಗುವದು" ಎಂದು ಹೇಳಿದನು.

ಬ್ರಾಹ್ಮಣರಿಬ್ಬರೂ ತ್ರಿವಿಕ್ರಮನ ಮಾತುಗಳನ್ನು ಕೇಳಿ— "ತ್ರಿವೇದಿಯೆ ! ನಮಗೆ ವಾದ ಭಿಕ್ಷೆ ಆಷ್ಟೇ ಏಕೆ? ಜಯಪತ್ರದ ಉತ್ಸುಕತೆ ಹೆಚ್ಚಾಗಿರುವದು, ನೀನು ನಮ್ಮೊಡನೆ ವಾದ ಮಾಡುವ ಸಾಮರ್ಥ್ಯವಿಲ್ಲದ ಪಂಡಿತನಾಗಿರುವಿ, ಇನ್ನಾದರೂ ನಮ್ಮೊಡನೆ ವಾದ ಮಾಡುವಿಯೋ? ಅಥವಾ ನಾವು

ಹೇಳಿದಂತೆ ಜಯಪತ್ರ ಬರೆದುಕೊಡುವಿಯೋ?'' ಎಂದು ಸೊಕ್ಕಿನಿಂದ ಮಾತಾಡಿದರು. ಆದರೂ ತ್ರಿವಿಕ್ರಮ ಭಾರತಿಯು— "ಮೇಧಾವಿಗಳೇ? ನಿಮ್ಮ ವಿದ್ವತ್ತೆಯ ಪ್ರಭೆಯು ಈ ನಾಡಿನಲ್ಲಿ ಮೂಡಿದುದನ್ನು ನಾನೂ ನೋಡುವೆನು. ನಾನು ಹೇಳಿದಂತೆ ನೀವು ಗಾಣಗಾಪುರದ ಯತಿಯೊಡನೆ ವಾದ ಮಾಡಿ ಅವರನ್ನು ಜಯಿಸಿದರೆ ನಿಮ್ಮ ಪ್ರಭೆಯು ಸಂಪೂರ್ಣ ಅಂತರಿಕ್ಷವನ್ನು ವ್ಯಾಪಿಸಿದಂತಾಗುವದು, ಈಗಲೇ ಗಾಣಗಾಪುರಕ್ಕೆ ನಡೆಯಿರಿ, ನಾನೂ ನಿಮ್ಮೊಡನೆ ಬರುವೆನು. ನೀವು ಅಲ್ಲಿಯ ಯತಿಯನ್ನು ಜಯಿಸಿ ಕೀರ್ತಿ ಪಡೆಯಿರಿ. ಹಾಗು ಅವರಿಂದ ಜಯಪತ್ರ ಸ್ವೀಕರಿಸಿರಿ. ನಾನೂ ನನ್ನ ಜಯಪತ್ರವನ್ನು ಅಲ್ಲಿಯೇ ಸಿದ್ಧಪಡಿಸಿಕೊಡುವೆನು, ಒಂದೇ ಸ್ಥಾನದಲ್ಲಿ ಎರಡು ಜಯಪತ್ರ ದೊರೆತರೆ ಅದರ ಮಹತ್ವ ಹೆಚ್ಚು. ಆದ್ದರಿಂದ ಈಗಲೇ ಗಾಣಗಾಪುರಕ್ಕೆ ಎದ್ದೇಳಿರಿ" ಎಂದನು.

ಆ ಬ್ರಾಹ್ಮಣರಿಗೆ ತ್ರಿವಿಕ್ರಮನ ಸಯುಕ್ತಿಕ ವಿಚಾರವನ್ನು ಅಲ್ಲಗಳೆಯಲು ಬರಲಿಲ್ಲ. ಆಗಲೇ ಅವರು ಯವನರಾಜನಿಂದ ತಮಗೆ ದೊರೆತ ಪಲ್ಲಕ್ಕಿಗಳನ್ನಾರೋಹಿಸಿ— "ತ್ರಿವಿಕ್ರಮಾ ನಡೆ, ಮಾರ್ಗದರ್ಶನ ಮಾಡು'' ಎಂದರು. ಮುಪ್ಪಿನ ಸನ್ಯಾಸಿಯೂ ಜ್ಞಾನಿಯೂ ಆದ ತ್ರಿವಿಕ್ರಮನು ಕಾಲ್ನಡಿಗೆಯಿಂದ ಮುಂದೆ, ಮದಾಂಧರೂ ಅಧರ್ಮಿಗಳೂ ಆದ ಪಲ್ಲಕ್ಕಿಯೇರಿದ ಬ್ರಾಹ್ಮಣರು ಹಿಂದೆ. ಹೀಗೆ ಆ ಮೂವರೂ ಸಾಗಿ ಗಾಣಗಾಪುರಕ್ಕೆ ಹೋದರು. ಗುರುಗಳ ಮಠದ ಸನಿಹಕ್ಕೆ ಬಂದರು.

ತ್ರಿವಿಕ್ರಮನು ಅವರಿಬ್ಬರನ್ನು ಹೊರಗೆ ನಿಲ್ಲಿಸಿ ಮಠದೊಳಕ್ಕೆ ತಾನೊಬ್ಬನೇ ಹೋದನು. ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು ಗುರುಗಳ ಮುಂದೆ— 'ವಾದಕ್ಕಾಗಿ ಬಂದ ಬ್ರಾಹ್ಮಣರ

ಪರಿಚಯ ತಿಳಿಸಿದನು. ಹಾಗು ಅವರ ವೃತ್ತಿ-ನೀತಿಗಳನ್ನು ವಿಶದಪಡಿಸಿದನು.'

ಗುರುಗಳು ಹೊರಗೆ ನಿಂತ ಬ್ರಾಹ್ಮಣದ್ವಯರನ್ನು ಶಿಷ್ಯರಿಂದ ಒಳಕ್ಕೆ ಕರೆಯಿಸಿದರು. ಅವರು ಬಂದ ಉದ್ದೇಶವನ್ನು ವಿಚಾರಮಾಡಿದರು. ಅವರು— 'ತ್ರಿವಿಕ್ರಮನೊಡನೆ ವಾದ ಮಾಡಲು ಬಂದೆವು. ಆತನು ಇಲ್ಲಿಗೆ ಕರೆತಂದನು. ಇನ್ನು ಅವನಾಗಲಿ, ನೀವಾಗಲಿ ನಮ್ಮೊಡನೆ ವಾದ ಮಾಡಿರಿ, ಇಲ್ಲವಾದರೆ ಜಯಪತ್ರ ಕೊಟ್ಟು ನಮ್ಮನ್ನು ಕಳಿಸಿರಿ' ಎಂದರು.

ಗುರುಗಳು ಆ ಬ್ರಾಹ್ಮಣರಿಗೆ— "ನಿಮ್ಮ ಮಾತುಕತೆಗಳಿಂದ ನಿಮ್ಮಲ್ಲಿ 'ನಾವು ವೇದಜ್ಞರು' ಎಂಬ ಗರ್ವವು ನೆಲೆ ಮುರಿದಿದ್ದಂತಾಯಿತು, ಗರ್ವವು ನಾಶಕರವು, ದೇವ-ದಾನವರೂ ಗರ್ವದಿಂದ ನಷ್ಟಹೊಂದಿದರು. ವೇದಗಳ ಅಂತವು ಯಾರಿಗೂ ತಿಳಿಯದು, ಅವು ಅನಂತವಾಗಿರುವವು. ವೇದಗಳನ್ನು ಬಲ್ಲೆವೆಂದು ನೀವು ಗರ್ವಪಡುವದು ವ್ಯರ್ಥವು" ಎನ್ನಲು ಅವರು— "ನಾವು ಮೂರು . ವೇದ-ಭಾಷ್ಯ-ತರ್ಕ-ವ್ಯಾಕರಣಗಳಲ್ಲಿ ವಾದಿಸುವೆವು" ಎಂದರು.

ಈ ಪ್ರಕಾರ ಸಿದ್ಧಮುನಿಯು ಹೇಳಿದನು.

—o—

## ೨೬ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ಸಿದ್ಧಮುನಿಯು ನಾಮಧಾರಕನಿಗೆ ಗುರುಚರಿತ್ರೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ:—

"ಶ್ರೀ ಗುರುಗಳು ವಾದಮಾಡಲು ಬಂದ ಬ್ರಾಹ್ಮಣರಿಗೆ:— "ಎಲೈ ಪಂಡಿತರೇ, ವೇದಗಳು ಅನಂತವಿರುವವು. ಅವುಗಳ ಅಂತವು ಬ್ರಹ್ಮನಿಗೂ ಕೂಡ ತಿಳಿದಿರುವದಿಲ್ಲ. ನಾರಾಯಣನಿಂದ ವೇದವ್ಯಾಸ ಮುನಿಗಳ ಅವತಾರವಾಯಿತು. ಅವರೇ ವೇದಗಳನ್ನು ವ್ಯಕ್ತಗೊಳಿಸಿ, 'ವ್ಯಾಸ' ಎಂಬ ಹೆಸರನ್ನು ಪಡೆದರು. ಅವರಿಂದಲೂ ಕೂಡ ವೇದಗಳ ಪೂರ್ಣತೆಯಾಗಲಿಲ್ಲ. ಆ ವ್ಯಾಸರಿಗೆ ಪೈಲ, ವೈಶಂಪಾಯನ, ಜೈಮಿನಿ ಹಾಗು ಸುಮಂತ ಹೀಗೆ ನಾಲ್ವರು ಶಿಷ್ಯರಿದ್ದರು. ಆ ಶಿಷ್ಯರು ವೇದಾಭ್ಯಾಸ ಮಾಡಲಿಕ್ಕೆ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಲು, ವ್ಯಾಸರು:— "ಶಿಷ್ಯರೆ ! ಎಲ್ಲ ವೇದಗಳ ಅಭ್ಯಾಸವು ನಿಮಗೆ ಅಶಕ್ಯ" ಎಂದು ಹೇಳಿದರು. ಒಂದೇ ವೇದವನ್ನು ಕಲಿಯುವದಕ್ಕೆ ಕಲ್ಪಾವಧಿಯ ಒಂದು ದಿನವು ಬೇಕಾಗುವದು. ಅಂದಮೇಲೆ ನಾಲ್ಕೂ ವೇದಗಳನ್ನೆಂತು ಕಲಿಯುವಿರಿ ? ಈ ವೇದಗಳ ಆದ್ಯಂತ ಹೇಳುವೆನು ಕೇಳಿರಿ.

ಪೂರ್ವದಲ್ಲಿ ಭಾರದ್ವಾಜನೆಂಬ ಪ್ರಖ್ಯಾತ ಋಷಿಯು ಬಹುಕಾಲ ವೇದಗಳ ಅಭ್ಯಾಸ ಮಾಡಿದನು. ಅವನಿಗೆ ವೇದಗಳ ಸ್ವಲ್ಪಾಂಶ ಲಭಿಸಿತು. ಅದಕ್ಕಾಗಿ ಅವನು ಮತ್ತೆ ತಪಸ್ಸು ಮಾಡಿ ಬ್ರಹ್ಮನನ್ನು ಪ್ರಸನ್ನೀಕರಿಸಿಕೊಂಡು:– "ಸ್ವಾಮಿ ! ನಾನು ಬ್ರಹ್ಮಚರ್ಯಾಶ್ರಮದಲ್ಲಿದ್ದುಕೊಂಡು ವೇದಗಳನ್ನು ಆದ್ಯಂತವಾಗಿ ಕಲಿಯುವೆನು. ಆದ್ದರಿಂದ ನೀವು ವೇದಾಂತವನ್ನು ತೋರಿಸಿ ಅವೆಲ್ಲವನ್ನೂ ನನಗೆ ಕಲಿಸಬೇಕು–ಎಂದು ಬೇಡಿಕೊಂಡನು. ಅದಕ್ಕೆ ಬ್ರಹ್ಮನು:— "ಭರದ್ವಾಜ ! ವೇದಗಳಿಗೆ ಮಿತಿಯೇ ಇರುವದಿಲ್ಲ. ಅಂದಮೇಲೆ ಅವೆಲ್ಲವನ್ನು ಅದೆಂತು ಕಲಿಸಲಿ ? ನಾನು ನಿನಗೆ ಅವುಗಳನ್ನು ಮಾತ್ರ ತೋರಿಸುವೆನು. ನೋಡು. ನಿನ್ನಲ್ಲಿ ಅವುಗಳನ್ನು ಕಲಿಯುವ ಶಕ್ತಿಯುಂಟಾಗಲು ಯಾವಾಗಲೂ ಅಭ್ಯಾಸಮಾಡು' ಎಂದು ಹೇಳಿ ಬ್ರಹ್ಮನು ಅವನಿಗೆ ಮೂರು ಪರ್ವತಗಳಷ್ಟು

ಉನ್ನತವಾಗಿದ್ದ ವೇದಗಳ ಮೂರು ರಾಶಿಗಳನ್ನು ತೋರಿಸಿದನು. ಕೋಟಿ ಸೂರ್ಯ ಪ್ರಕಾಶಮಾನವಾಗಿರುವ ಆ ವೇದಗಳ ರಾಶಿಗಳನ್ನು ನೋಡಿ ಭರದ್ವಾಜನು ಬೆದರಿದನು. ಇಷ್ಟು ವೇದರಾಶಿಯನ್ನು ನಾನು ಹೇಗೆ ಕಲಿಯಲಿ? ಮೂರು ಕಲ್ಪಗಳ ವರೆಗೂ, ನಾಲ್ಕೂ ಆಶ್ರಮ ಆಚರಿಸಿ ಕಲಿತರೂ ಸಾಧ್ಯವಿಲ್ಲ" ಎಂದು ನುಡಿದು ಬ್ರಹ್ಮನಿಗೆ ನಮಸ್ಕರಿಸಿದನು. ಮತ್ತು ಅವನು:— "ದೇವಾ! ಇಷ್ಟೆಲ್ಲ ಕಲಿಯಲು ಸಾಧ್ಯವಿಲ್ಲ. ಆದ್ದರಿಂದ ನಿನ್ನ ಮನಸಿಗೆ ತಿಳಿದಷ್ಟನ್ನು ಕೊಡಬೇಕು" ಎಂದೆನ್ನಲು ಬ್ರಹ್ಮನು ಆ ವೇದರಾಶಿಗಳಲ್ಲಿ ಮೂರು ಮುಷ್ಟಿ ವೇದಗಳನ್ನು ಕೊಟ್ಟನು. ಆಗ ಆ ಮೂರೂ ವೇದಗಳ ಮಂತ್ರಗಳಾದವು, ಅವುಗಳೆಲ್ಲವನ್ನು ಭರದ್ವಾಜನು ಅಭ್ಯಾಸ ಮಾಡಿದನು. ಆದರೂ ಅವನಿಗೆ ಅವು ಮುಗಿಯಲಿಲ್ಲ. ಆಗ ವ್ಯಾಸರು ಅವುಗಳನ್ನು ನಾಲ್ಕುಭಾಗ ಮಾಡಿ ಒಂದೊಂದು ವೇದವನ್ನು ತನ್ನ ನಾಲ್ವರು ಶಿಷ್ಯರಲ್ಲಿ ಒಬ್ಬೊಬ್ಬರಿಗೆ ಕೊಟ್ಟರು. ತಮ್ಮ ಮೊದಲನೆಯ ಶಿಷ್ಯ ಪೈಲನಿಗೆ ಋಗ್ವೇದವನ್ನು ನಿರೋಪಿಸಿದರು. ಎರಡನೆಯ ಶಿಷ್ಯ ವೈಶಂಪಾಯನಿಗೆ ಯಜುರ್ವೇದವನ್ನೂ, ಮೂರನೆಯ ಶಿಷ್ಯ ಜೈಮಿನಿಗೆ ಸಾಮವೇದವನ್ನೂ ವಿಸ್ತರಿಸಿ ಹೇಳಿದರು. ಅದರಂತೆ ನಾಲ್ಕನೆಯ ಶಿಷ್ಯ ಸುಮಂತನಿಗೆ ಅಥರ್ವಣವೇದ ನಿರೂಪಿಸಿದರು. ಅವರು ನಾಲ್ಕೂ ವೇದಗಳ ಧ್ಯಾನ, ವರ್ಣ, ಭೇದಾಭೇದಗಳನ್ನು ವಿವರಿಸಿದರು.

ಶ್ರೀ ಗುರುಗಳು ವಾದಕ್ಕೆ ಬಂದ ಆ ಬ್ರಾಹ್ಮಣರನ್ನು ಕುರಿತು— "ವಾದಿಗಳೆ! ಈ ಕಲಿಯುಗದಲ್ಲಿ ನಾಲ್ಕೇ ವೇದಗಳಿರುವವೆಂದು ನೀವು ಹೇಳುವಿರಿ. ಜಗತ್ತಿನಲ್ಲಿ ನಾವು ಅಧ್ಯಾಪಕರೆಂದು ನಿಮ್ಮ ಕೀರ್ತಿಯನ್ನು ಮೆರೆಯಿಸುವಿರಿ. ಋಗ್ವೇದಕ್ಕೆ ಹನ್ನೆರಡು ಭೇದಗಳಿರುವವು. ಅವುಗಳನ್ನೆಲ್ಲ ವ್ಯಾಸರು ತಮ್ಮ ಶಿಷ್ಯ

ಪೈಲನಿಗೆ ವಿಸ್ತರಿಸಿ ಹೇಳಿದರು. ಅದರಂತೆ ಅವರು ಯಜುರ್ವೇದದ ಎಂಭತ್ತಾರು ಶಾಖೆಗಳನ್ನು ತಮ್ಮ ಎರಡನೆಯ ಶಿಷ್ಯ ವೈಶಂಪಾಯನನಿಗೆ ವಿಶದವಾಗಿ ಬೋಧಿಸಿದರು. ಅವರು ಆ ವೈಶಂಪಾಯನನಿಗೆ ಗ್ರಂಥ ತ್ರಯಗಳಾದ ಸಂಹಿತೆ, ಬ್ರಾಹ್ಮಣಕ, ಆರಣ್ಯಕ ಈ ಮೂರರಲ್ಲಿಯ ಪ್ರಶ್ನೆ, ಅನುವಾಕ, ದಶಕಗಳನ್ನೂ ವಿಸ್ತರಿಸಿ ತಿಳಿಸಿದರು. ಮೂರನೆಯ ಶಿಷ್ಯ ಜೈಮಿನಿಗೆ ಸಾಮವೇದವನ್ನೂ ಹಾಗು ನಾಲ್ಕನೆಯ ಶಿಷ್ಯ ಸುಮಂತನಿಗೆ ಅಥರ್ವಣವನ್ನೂ ಹೇಳಿದರು. ಮತ್ತು ಆ ಆ ವೇದಗಳ ಭೇದಾದಿಗಳನ್ನೂ ಬೋಧಿಸಿದರು. ಶ್ರೀ ಗುರುಗಳು— "ವಾದಿಬ್ರಾಹ್ಮಣರೆ! ಈ ಭರತಖಂಡದಲ್ಲಿ ಮೊದಲು ಬಹು ಪುಣ್ಯ ಸಂಚಯವಿದ್ದಿತು. ಜನರೆಲ್ಲರು ವರ್ಣಾಶ್ರಮ ಧರ್ಮಗಳಂತೆ ಆಚರಿಸುತ್ತಿದ್ದರು. ಬ್ರಾಹ್ಮಣರೆಲ್ಲರು ಈ ಕಲಿಯುಗದಲ್ಲಿ ಕರ್ಮಗಳನ್ನು ಬಿಟ್ಟರು. ವೇದಗಳು ಲುಪ್ತವಾದವು. ಅವರು ಕರ್ಮಭ್ರಷ್ಟರಾಗಿ ಮ್ಲೇಂಛರಿಗೆ ವೇದ ಬೀಜಗಳನ್ನು ಹೇಳಹತ್ತಿದರು. ಆದ್ದರಿಂದ ಅವರಲ್ಲಿಯ ಸತ್ವವು ನಷ್ಟವಾಗಿ ಅವರು ಮಂದಮತಿಗಳಾದರು. ಮುಂಚಿನ ಕಾಲದಲ್ಲಿ ವಿಪ್ರರಲ್ಲಿ ದೇವತ್ವವಿದ್ದಿತು. ಯಾಕಂದರೆ ಅವರಲ್ಲಿ ವೇದಬಲವು ನಿತ್ಯವಾಗಿತ್ತು. ಆದ್ದರಿಂದಲೇ ಎಲ್ಲರು ಬ್ರಾಹ್ಮಣರನ್ನು 'ಭೂಸೂರ' ರೆಂದು ತಿಳಿಯುತ್ತಿದ್ದರು. ಮೊದಲಿನ ರಾಜರಾಜರುಗಳು ಸಹ ಬ್ರಾಹ್ಮಣರನ್ನು ಪೂಜ್ಯರೆಂದು ಬಗೆದು ಪೂಜಿಸುತ್ತಿದ್ದರು. ಆಗಿನ ಬ್ರಾಹ್ಮಣರಿಗೆ ತ್ರಿಮೂರ್ತಿಗಳು ವಶವರ್ತಿಯಾಗುತ್ತಿದ್ದರು. ಇಂದ್ರಾದಿ ಸುರರುಗಳೆಲ್ಲ ಬ್ರಾಹ್ಮಣರಿಗೆ ಭಯಪಡುತ್ತಿದ್ದರು. ವಿಪ್ರವಾಕ್ಯಗಳೆಂದರೆ ಅವರಲ್ಲಿ ಕಾಮಧೇನು–ಕಲ್ಪತರುಗಳೆಂಬ ಭಾವನೆ ಹುಟ್ಟಿಸುತ್ತಿದ್ದವು. ಬ್ರಾಹ್ಮಣರು ತಮ್ಮಲ್ಲಿಯ ವೇದ ಸತ್ವದಿಂದ ಕಡ್ಡಿಯನ್ನು ಗುಡ್ಡವನ್ನಾಗಿಯೂ ಗುಡ್ಡವನ್ನು ಕಡ್ಡಿಯನ್ನಾಗಿಯೂ ಮಾಡುತ್ತಿದ್ದರು.

ಸಾಕ್ಷಾತ್ ವಿಷ್ಣುದೇವನು ಬ್ರಾಹ್ಮಣರು ತನ್ನ ದೈವತೆಯೆಂದು ಬಗೆದು ತಾನೆ ಅವರನ್ನು ಪೂಜಿಸುತ್ತಿದ್ದನು.

ಈ ಪ್ರಕಾರ ಪೂರ್ವಕಾಲದ ಬ್ರಾಹ್ಮಣರಿಗೆ ಒಳ್ಳೇ ಮಹತ್ವವಿತ್ತು. ಈಗಿನವರು ವೇದ ಮಾರ್ಗವನ್ನು ಬಿಟ್ಟು ಅಜ್ಞಾನದ ದಾರೀ ತುಳಿಯಹತ್ತಿದರು. ಕೀಳು ಜಾತಿಯವರ ಎದುರಿನಲ್ಲಿ ನಿಂತು ವೇದ ಪಠಿಸಹತ್ತಿದರು. ಇವರೆಂಥ ಮೂರ್ಖರೆನ್ನಬೇಕು? ಇಂಥವರ ಮುಖದರ್ಶನ ಸಹ ತಕ್ಕೊಳ್ಳಬಾರದು. ಇವರೇ ಮುಂದೆ ಬ್ರಹ್ಮ ರಾಕ್ಷಸರಾಗಿ ವೈದೋರುವರು. ಇವರಂದಲೇ ಸತ್ವಭಂಗವಾಗುವದು, ಹೀನ ಜಾತಿಯವರನ್ನು ಸೇವಿಸಿ ವೇದ ವಿಕ್ರಯಮಾಡಿ ಭ್ರಷ್ಟರಾಗಿ ಜೀವಿಸುವರು. ವಾದಿಗಳೆ! ಮೊದಲು ಚತುರ್ವೇದಗಳಿಗೆ ಇಷ್ಟೊಂದು ಶಾಖೆಗಳಿರುವವೆಂಬ ಸಂಗತಿಯು ಗೊತ್ತಿದ್ದಿತು. ಅದೆಲ್ಲವೂ ಈಗ ಗೌಪ್ಯವಾಗಿ ಬಿಟ್ಟವೆ. ನೀವು—'ನಾವು ನಾಲ್ಕೂ ವೇದಗಳನ್ನು ಬಲ್ಲ ವಿದ್ವಾಂಸರು' ಎಂದು ಪ್ರತಿಷ್ಠೆಯನ್ನು ಕಲ್ಪಿಸಿಕೊಂಡು ಜನರೊಂದಿಗೆ ವಾದ-ವಿವಾದ ಮಾಡಹತ್ತಿರುವಿರಿ. ವೇದಗಳಿಗಿರುವ ಎಲ್ಲ ಭೇದಗಳನ್ನು ನೀವು ಅರಿತಿರುವಿರೇನು? ನಿಮ್ಮ ಈ ವೃತ್ತಿಯಿಂದ ನಿಮಗೆ ಬರುವ ಲಾಭವೇನು? ಬ್ರಹ್ಮಣ ಕ್ಷೋಭೆಯನ್ನು ಮಾತ್ರ ಗಳಿಸಿಕೊಳ್ಳುವಿರಿ. ನಿಮಗೆ ಈ ಪ್ರಕಾರದ ಉಪದೇಶವನ್ನು ಅದಾವ ಗುರುವು ಮಾಡಿದನು. ಎದ್ದೇಳಿರಿ, ಇಲ್ಲಿಂದ ಹೊರಟು ಹೋಗಿರಿ! ನೀವು ನಿಮ್ಮ ಆತ್ಮಸ್ತುತಿಯನ್ನು ಮಾಡಿಕೊಳ್ಳುವಿರಿ! ಜಯಪತ್ರಗಳ ಹೊರೆಯನ್ನೇ ತೋರಿಸುತ್ತಿರುವಿರಿ, ಈ ತ್ರಿವಿಕ್ರಮ ಯತಿಯಿಂದಲೂ ಜಯಪತ್ರವನ್ನು ಅಪೇಕ್ಷಿಸುವಿರಿ, ನನ್ನ ಹೇಳಿಕೆಯನ್ನು ಕೇಳಿ ಮುನ್ನೋಡಿ ನೀವು ಇಲ್ಲಿಂದ ಹಿಂದಿರುಗಿ ಹೋಗಿರಿ. ಗರ್ವದಿಂದ ಭ್ರಮಿಸುವದು ನಿರರ್ಥಕವು. ವ್ಯರ್ಥವೇ ನೀವು ನಿಮ್ಮ ಪ್ರಾಣಕ್ಕೆ ಎರವಾಗಬೇಡಿರಿ."

ಈ ಪ್ರಕಾರ ಶ್ರೀ ಗುರುಗಳು ವಾದಕ್ಕಾಗಿ ಬಂದ ಆ ಬ್ರಾಹ್ಮಣದ್ವಯರಿಗೆ ಸ್ಪಷ್ಟವಾಗಿ ಹಿತ ಬೋಧೆಯನ್ನು ಮಾಡಿದರು. ಮರಣ ಸಮೀಪಿಸಿದ ರೋಗಿಗೆ ಔಷಧ-ಪಥ್ಯಗಳು ಸೇರದಂತೆ ಆ ಬ್ರಾಹ್ಮಣ ದ್ವಯರ ಸ್ಥಿತಿಯಾಯಿತು. ಅವರು ತಮ್ಮ ತಾಮಸ ವೃತ್ತಿಗನುಸರಿಸಿ ಗುರುಗಳಿಂದ ಬೋಧಿತ ಹಿತ ವಾಕ್ಯಗಳನ್ನು ಅಲ್ಲಗಳೆದು—

"ಯತಿಗಳೆ! ರಾಜ್ಯದಲ್ಲೆಲ್ಲ ಸುತ್ತಾಡಿ ನಾವು ಕೇವಲ ವಾದ ವಿವಾದ ಮಾಡುವ ಉದ್ದೇಶ ದಿಂದಲೇ ತ್ರಿವಿಕ್ರಮ ಪಂಡಿತನಲ್ಲಿ ಬಂದೆವು. ವಾದ ಭಿಕ್ಷೆ ಬೇಡಿದೆವು. ತ್ರಿವೇದಿಯೆಂದು ಈ ನಾಡಿನಲ್ಲಿ ಖ್ಯಾತಿಹೊಂದಿದ ಈ ಯತಿಯು ನಮ್ಮ ವಾದ ಮಾಡುವ ಇಚ್ಛೆಯನ್ನು ಪೂರ್ಣ ಮಾಡಲಿಲ್ಲ. ಇಲ್ಲಿಗೆ ನಿಮ್ಮ ಬಳಿಗೆ ಕರೆತಂದನು. ನೀವು ಈ ಯತಿಗೆ ಗುರುವಾಗಿರುವಿರಿ, ಗುರು-ಶಿಷ್ಯ ನಿಮ್ಮಿಬ್ಬರಲ್ಲಿ ಯಾರೇ ಆಗಲಿ, ನಮಗೆ ವಾದಭಿಕ್ಷೆ ಸಲ್ಲಿಸಬೇಕಾಗಿತ್ತು. ಅದನ್ನು ಬೇರಿರಿಸಿ ನೀವು ನಮಗೆ ಇಲ್ಲಿಂದ ಹೊರಟು ಹೋಗಲು ಹೇಳುವಿರಿ, ನಾವು ಇಲ್ಲಿಗೆ ಅನಧಿಕೃತರಾಗಿ ಬಂದಿರುವದಿಲ್ಲ. ಬೇದರದ ರಾಜನಿಂದ ಈ ಆಜ್ಞಾಪತ್ರದೊಂದಿಗೆ ಬಂದಿರುವೆವು. ಆದ್ದರಿಂದ ನೀವು ನಮ್ಮೊಡನೆ ವಾದಮಾಡಿರಿ, ಪೂರ್ವಪಕ್ಷ ಮಂಡಿಸಿರಿ, ಅಥವಾ ನಮ್ಮ ಮಂಡನೆಯನ್ನು ಖಂಡಿಸಿರಿ. ನೀವು ಒಂದು ವೇಳೆ ನಮ್ಮೊಡನೆ ವಾದ ಪ್ರಸಂಗ ಮಾಡದಿದ್ದರೆ ನಮಗೆ ನೀವು ಪೂರ್ಣ ಸೋತಂತೆಯೇ ಆಗುವದು. ಆ ಮೇಲೆ ನೀವು ನಮಗೆ ಜಯಪತ್ರ ಬರೆದು ಕೊಡದೆ ಗತ್ಯಂತರವಿಲ್ಲದಾಗುವದು, ನಿಮ್ಮ ಜಯಪತ್ರದ ಜೊತೆಗೆ ಈ ತ್ರಿವಿಕ್ರಮ ಯತಿಯ ಜಯಪತ್ರವೂ ನಮಗೆ ಬರಬೇಕಾಗುವದು" ಎಂದು ಆ ಬ್ರಾಹ್ಮಣದ್ವಯರು ನಿಸ್ಸೀಮ

ಮಹೋನ್ನತ್ತಿಯಿಂದ ಮಾತಾಡಿದರು.

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೨೭ನೆಂಖ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು— 'ನಾಮಧಾರಕನೆ ! ಶ್ರೀ ಗುರುಗಳು ಆ ಬ್ರಾಹ್ಮಣದ್ವಯರಿಗೆ ಋಗ್ವೇದಾದಿ ನಾಲ್ಕು ವೇದಗಳನ್ನು ವಿಸ್ತರಿಸಿ ಹೇಳಿದ ನಂತರ ಮುಂದೆ ವರ್ತಿಸಿದ ಸಂಗತಿಯನ್ನು ಹೇಳುವೆನು ಕೇಳು. ಎಂತೆಂದರೆ—

'ತಾಮಸೀವೃತ್ತಿಯ ಆ ವಾದಿಗಳಿಗೆ ಶ್ರೀ ಗುರುಗಳು ಎಷ್ಟು ಪರಿಪರಿಯಿಂದಲೂ ಹಿತ ಬೋಧೆಯನ್ನು ಹೇಳಿದರೂ ಅವರು ಕೇಳಲಿಲ್ಲ. 'ನಮಗೆ ವಾದ ಇಲ್ಲವೆ ಜಯಪತ್ರಗಳು ಬೇಕೇಬೇಕು' ಎಂದು ಹಟಹಿಡಿದು ಅಲ್ಲಿಯೇ ಕುಳಿತರು. ಅವರ ಆ ಸ್ಥಿತಿಯನ್ನು ನೋಡಿ ಗುರುಗಳು ಸಿಟ್ಟಿನಿಂದ— "ಎಲೋ ನಿಮ್ಮ ಭಾವನೆಯಿದ್ದಂತೆ ನೀವು ಸಿದ್ಧಿಯನ್ನು ಪಡೆಯುವಿರಿ. ಹಾವಿನ ಹುತ್ತಿನಲ್ಲಿ ಸೇರಲು ಬಯಸುವ ಇಲಿಯಂತೆ ಇಲ್ಲವೆ ದೀವಿಗೆಯನ್ನು ಬಡಿಯುವದಕ್ಕೆ ಹವಣಿಸುವ ಪತಂಗದಂತೆ ನಿಮ್ಮ ನಾಶವು ನಿಶ್ಚಿತವೆಂದು ತಿಳಿಯಿರಿ!" ಎಂದರು. ಈ ಮಾತನ್ನೂ ಕೂಡ ಅವರು ಲೆಕ್ಕಿಸಲಿಲ್ಲ. ಅವರು ಶ್ರೀ ಗುರುಮೂರ್ತಿಯ ಪ್ರಭಾವವನ್ನು ತಿಳಿದುಕೊಳ್ಳಲಿಲ್ಲ. ಗೂಬೆಯಂತೆ ಬಲದಿಂದಲೇ ಪ್ರಾಣಕೊಡುವ ಸ್ಥಿತಿಯನ್ನು ತಂದುಕೊಂಡರು.

ಇಷ್ಟರಲ್ಲಿ ಶ್ರೀ ಗುರುಗಳು ತಾವು ಕುಳಿತ ಸ್ಥಾನದಿಂದಲೇ ತಮ್ಮೆದುರು ದೂರದಿಂದ ಹೋಗುತ್ತಿರುವ ಒಬ್ಬ ಮನುಷ್ಯನನ್ನು ಕಂಡರು ಅವರು ತಮ್ಮ ಶಿಷ್ಯನೊಬ್ಬನನ್ನು ಕರೆದು— "ಅಗೋ ! ಅಲ್ಲಿ ಹೋಗುತ್ತಿರುವ ದಾರಿಕಾರನು ಅದಾವನು? ಅವನನ್ನು ಇಲ್ಲಿಗೆ ಕರೆತರು" ಎಂದು ಆಜ್ಞಾಪಿಸಿದರು. ಕೂಡಲೆ ಶಿಷ್ಯನು ಓಡಿ ಹೋಗಿ ಆ ಮನುಷ್ಯನನ್ನು ಕರೆತಂದು ಗುರುವಿನ ಸಮ್ಮುಖದಲ್ಲಿ ದೂರವಾಗಿ ನಿಲ್ಲಿಸಿದನು. ಶ್ರೀ ಗುರುವು ಆ ಮನುಷ್ಯನನ್ನು ಕುರಿತು— "ಎಲೋ ! ನೀನು ಅದಾವ ಕುಲದಲ್ಲಿ ಹುಟ್ಟಿದವನು? " ಎಂದು ಕೇಳಲು ಆ ದಾರಿಕಾರನು— "ಸ್ವಾಮಿ ! ನಾನು ಮಾತಂಗ ಜಾತಿಯವನು. ಊರ ಹೊರಗೆ ಕೇರಿಯನ್ನು ಕಟ್ಟಿಕೊಂಡು ಊರೊಳಗಿನವರನ್ನು ಸ್ಪರ್ಶಮಾಡದೆ ಅಲ್ಲಿಯೇ ಇರುವೆನು. ದಯಾಳುವಾದ ನೀವು ನನ್ನನ್ನು ಕರೆಯಿಸಿದ್ದುದರಿಂದ ನಾನು ನನ್ನ ಉದ್ಧೃತಿಯ ಆಸೆಯೊಂದಿಗೆ ಇಲ್ಲಿಗೆ ಬಂದೆನು. ಪತಿತನಾದ ನನ್ನನ್ನು ಕೃಪಾದೃಷ್ಟಿಯಿಂದ ನೋಡಬೇಕು" ಎಂದು ಕೈಮುಗಿದು ಪ್ರಾರ್ಥಿಸಿದನು. ಆ ಬಳಿಕ ಗುರುಗಳು ತಮ್ಮ ಶಿಷ್ಯನ ಕೈಯಲ್ಲಿ ದಂಡಕವನ್ನು ಕೊಟ್ಟು ಅಲ್ಲಿಯೇ ನೆಲದ ಮೇಲೆ ಸಮಾಂತರದಿಂದ ಏಳು ರೇಷೆಗಳನ್ನು ಕೊರೆಯಿಸಿದರು. ಹಾಗು ಆ ಪತಿತನಿಗೆ ಮೊದಲನೆ ಗೆರೆಯನ್ನು ದಾಟಿ ನಿಲ್ಲಲು ಹೇಳಿದರು. ಅದರಂತೆ ಅವನು ಗೆರೆ ದಾಟಿ ನಿಲ್ಲಲು ಶ್ರೀ ಗುರುಗಳು— "ಎಲೋ ! ನೀನು ಅದಾವ ಕುಲದಲ್ಲಿ ಹುಟ್ಟಿರುವಿ? " ಎಂದು ಕೇಳಲು ಆ ಮನುಷ್ಯನು— "ಸ್ವಾಮಿ ! ನಾನು ಕಿರಾತ ವಂಶದಲ್ಲಿ ಹುಟ್ಟಿರುವೆ. ನನಗೆ 'ವನರಕ್ಷಕ' ಎಂಬ ಹೆಸರು" ಎಂದನು. ಹಾಗು ಅವನಲ್ಲಿ ಜ್ಞಾನ ಮೂಡಿತು. 'ಇನ್ನು ಎರಡನೆಯ ಗೆರೆ ದಾಟು' ಎಂದೆನ್ನಲು ಅವನು ದಾಟಿ ನಿಲ್ಲಲು ಅವನಲ್ಲಿ ಉದಯಿಸಿದ ಜ್ಞಾನವು ನಿಶ್ಚಿತ ಸ್ವರೂಪ

ಹೊಂದಿತು. ಹಾಗು ಅದಕ್ಕನುಸರಿಸಿ ಅನೇಕ ಸಂಗತಿಗಳನ್ನು ಹೇಳಹತ್ತಿದನು. ಇದು ಎಲ್ಲರಲ್ಲಿ ವಿಸ್ಮಯ ಹುಟ್ಟಿಸಿತು. ನಂತರ ಅವನು ಗುರುಗಳ ಹೇಳಿಕೆಯಂತೆ ಮೂರನೆಯ ಗೆರೆ ದಾಟಿ ನಿಂತನು ಆಗ ಅವನಲ್ಲಿ ಜ್ಞಾನ ಸ್ಮೃತಿಯುಂಟಾಗಿ ತಾನು ಗಂಗಾ ಪುತ್ರನೆಂದೂ, ಗಂಗೆಯ ತೀರದಲ್ಲಿ ತಾನು ವಾಸ ಮಾಡುವನೆಂದೂ ಹೇಳಿದನು. ಮುಂದೆ ನಾಲ್ಕನೆಯ ರೇಷೆ ದಾಟಿ— "ಸ್ವಾಮಿ ! ನಾನು ಶೂದ್ರನು. ಆ ಜಾತಿಯ ವೃತ್ತಿಯೇ ನನ್ನದಾಗಿದೆ" ಎಂದನು. ತರುವಾಯ ಅವನು ಐದನೆಯ ಗೆರೆ ದಾಟಿ ನಿಲ್ಲಲು ಆಗ ತನಗೆ ಉಂಟಾದ ಜ್ಞಾನದಿಂದ ಅವನು— "ಸ್ವಾಮಿ ! ನಾನು ವೈಶ್ಯ ವಂಶದಲ್ಲಿ ಹುಟ್ಟಿದೆನು, ಸೋಮದತ್ತನೆಂಬವನ ಆಳಿಯನು" ಎಂದು ಹೇಳಿದನು. ಇನ್ನು ಆರನೆಯ ರೇಷೆಯನ್ನು ಉಲ್ಲಂಘಿಸು. ಎಂದು ಗುರುಗಳು ಹೇಳಲು ಅವನು ದಾಟಿ ನಿಂತು— "ಗುರುಗಳೇ ! ನಾನು ಗೋದಾವರಿ ಎಂಬ ಹೆಸರಿನವನು, ಕ್ಷತ್ರಿಯ ವಂಶದಲ್ಲಿ ಜನ್ಮಿಸಿದೆನು" ಎಂದು ಹೇಳಿದನು. ಕಡೆಗೆ ಅವನು ಗುರುಗಳ ಅಪ್ಪಣೆಯಿಂದ ಅಂತ್ಯ ರೇಷೆ ದಾಟಿ ನಿಂತು— "ಶ್ರೀ ಗುರುಗಳೆ ! ನಾನು ಶ್ರೇಷ್ಠ ವರ್ಣವಾದ ಬ್ರಾಹ್ಮಣರಲ್ಲಿ ಜನ್ಮ ತಾಳಿದವನು. ವೇದಶಾಸ್ತ್ರಾದಿಗಳನ್ನು ಬಲ್ಲ ಪಂಡಿತನು. ನನಗೆ 'ಅಧ್ಯಾಪಕ' ನೆಂದು ಹೆಸರುಂಟು" ಎಂದು ತನ್ನ ಸಂಗತಿಯನ್ನು ಗುರುಗಳಿಗೆ ತಿಳಿಸಿದನು. ಆಗ ಗುರುಗಳು— 'ಎಲೈ ನೀನು ವೇದಶಾಸ್ತ್ರಗಳನ್ನು ಅಭ್ಯಾಸ ಮಾಡಿರುವೆನೆಂದು ಹೇಳುವಿ. ಇಗೋ ! ಈ ಬ್ರಾಹ್ಮಣದ್ವಯರು ವಾದ ಪ್ರಸಂಗಕ್ಕಾಗಿ ಇಲ್ಲಿಗೆ ಬಂದಿರುವರು. ನೀನು ಇವರೊಡನೆ ವೇದಾದಿ ವಿಷಯಗಳಲ್ಲಿ ಖಂಡನೆ–ಮಂಡನೆಗಳಿಂದ [illegible] ಎಂದು ಹೇಳಿ ತನ್ನ [illegible] ಅವನ ಮುಖದಲ್ಲಿ ವಿಭೂತಿ

ಯನ್ನು ಹಾಕಿಸಿದರು, ಹಾಗು ಆ ಅಭಿಮಂತ್ರಿಸಿದ ವಿಭೂತಿಯನ್ನು ಅವನ ಮೈಗೆ ಹಚ್ಚಿಸಿದರು. ಅದರಿಂದ ಕೂಡಲೆ ಅವನಲ್ಲಿ ಜ್ಞಾನ ಜ್ಯೋತಿಯು ಪ್ರಕಾಶಮಾನವಾಯಿತು. ಗುರುಗಳ ಹಸ್ತ ಸ್ಪರ್ಶದಿಂದ ಆ ಪತಿತನು ಜ್ಞಾನರಾಶಿಯಾದನು. ಜಗದ್ಗುರು ನೃಸಿಂಹ ಸರಸ್ವತಿ ಸ್ವಾಮಿಗಳು ಅಸಾಮಾನ್ಯರು. ಅವರು ಪ್ರತ್ಯಕ್ಷ ಶ್ರೀ ದತ್ತಾತ್ರೇಯನ ಅವತಾರಿಕರು. ಆದುದರಿಂದಲೇ ಆ ಪತಿತನು ಜ್ಞಾನಸಂಪನ್ನನಾದನು. ವೇದಶಾಸ್ತ್ರಗಳನ್ನು ಪಠಿಸಹತ್ತಿದನು. ಇದನ್ನು ನೋಡಿ ವಾದ ಮಾಡುವದಕ್ಕೆ ಬಂದಿದ್ದ ಬ್ರಾಹ್ಮಣದ್ವಯರು ಭಯಚಕಿತರಾದರು. ಆಗಲೇ ಅವರ ನಾಲಿಗೆ ಕತ್ತರಿಸಿ ಬಿದ್ದಂತಾಗಿ ಅವರ ಬಾಯಿಗಳಿಂದ ರಕ್ತ ಸುರಿಯಹತ್ತಿತು. ಅವರಿಬ್ಬರಿಗೂ ಹೃದಯ ಶೂಲೆಯುತ್ಪನ್ನವಾಯಿತು ಕೂಡಲೆ ಅವರು ಮುಂದರಿದು ಬಂದು ಶ್ರೀ ಗುರುಗಳ ಪಾದಗಳ ಮೇಲೆ ಉರುಳಾಡಹತ್ತಿದರು. 'ಜಗಜ್ಜ್ಯೋತಿ ಸ್ವಾಮಿಗಳೆ ! ಇನ್ನು ಮುಂದೆ ನಮ್ಮ ಗತಿಯೇನು? ನಾವು ಗುರು ದ್ರೋಹವನ್ನು ಪದರಿನಲ್ಲಿ ಕಟ್ಟಿಕೊಂಡೆವು. ಬ್ರಾಹ್ಮಣರನ್ನು ಧಿಕ್ಕರಿಸಿದ ನಾವೀಗ ದಿಕ್ಕುಗಾಣದಾದೆವು, ನೀವು ಸಾಕ್ಷಾತ್ ಗೌರೀಪತಿಯ ಅವತಾರಿಕರು. ನಮ್ಮನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುವೆವು, ಮಾಯಾನ್ವಿತರಾಗಿ ನಾವು ತಮೋವೃತ್ತಿ ತಾಳಿದೆವು. ದಯೆಯಿಂದ ನಮ್ಮನ್ನು ರಕ್ಷಿಸಿರಿ, ನಮ್ಮ ದೋಷ ನಿವಾರಿಸಿ ನಮ್ಮನ್ನು ಉದ್ಧರಿಸಿರಿ" ಎಂದು ಉಚ್ಚರಿಸುತ್ತ ಪುನಃ ಪುನಃ ನಮಸ್ಕರಿಸಹತ್ತಿದರು. ಮತ್ತೂ ಅವರು— "ಗುರುದೇವಾ ! ನೀನು ಲೀಲೆಯಿಂದ ಗುಡ್ಡವನ್ನು ಕಡ್ಡಿಯನ್ನಾಗಿ ಮಾಡುವ ಸಾಮರ್ಥ್ಯವುಳ್ಳವನು, ನೀನು ಕುಪಿತನಾಗಿ ಪರ್ವತ ನಿರೀಕ್ಷಿಸಿ ಅದನ್ನು ಸುಟ್ಟು ಭಸ್ಮ ಮಾಡುವ ಮಹಿಮೆಯುಳ್ಳವನು. ಸೃಷ್ಟಿಯನ್ನು ರಚಿಸುವ ಬಲವಂತನು ನೀನೇ. ಸ್ಥಿತಿ—

ಲಯಕರ್ತನು ನೀನೇ. ಹಾಗು ತ್ರಿಮೂರ್ತಿ ಜಗದ್ಗುರುವು ನೀನೇ! ಗುರುದೇವಾ! ನಿನ್ನ ಮಹಿಮೆಯನ್ನು ವರ್ಣಿಸುವದು ಅಸಾಧ್ಯವು, ನಾವು ಮತಿಹೀನರು, ದೀನರಾಗಿ ಶರಣಾಗತರಾಗಿರುವೆವು. ನಮ್ಮನ್ನು ಉದ್ಧರಿಸಿರಿ" ಎಂದು ಆ ವಿಪ್ರರಿಬ್ಬರೂ ಅನೇಕ ಬಗೆಯಿಂದ ಗುರುಗಳಿಗೆ ಬೇಡಿಕೊಂಡರು ಅವರನ್ನು ಕುರಿತು ಶ್ರೀ ಗುರುಗಳು— 'ಎಲೈ ನೀಚಾತ್ಮರೆ! ನೀವು ಮಹಾಮುನಿ ತ್ರಿವಿಕ್ರಮ ಭಾರತಿಯನ್ನು ಕ್ಷೋಭೆಗೊಳಿಸಿದಿರಿ. ಎಲ್ಲ ಬ್ರಾಹ್ಮಣರನ್ನು ನಿಂದಿಸಿದಿರಿ! ಇನ್ನೂ ಅನೇಕಾನೇಕ ದೋಷಗಳು ನಿಮ್ಮಿಂದ ಪ್ರಕಟಿತವಾದವು ಇನ್ನು ಮುಂದೆ ನೀವು ರಾಕ್ಷಸರಾಗಿ ಹುಟ್ಟುವಿರಿ, ನಿಮ್ಮ ದುಷ್ಕೃತದ ಫಲಭೋಗವನ್ನು ಅನುಭೋಗಿಸುವಿರಿ. ತಾವು ಮಾಡಿದ ಪುಣ್ಯ-ಪಾಪಗಳ ಫಲವನ್ನು ತಾನೇ ಅನುಭೋಗಿಸದ ಹೊರತು ಗತ್ಯಂತರವೇ ಇರುವದಿಲ್ಲ" ಎಂದು ಗುರುಗಳು ಅವರಿಬ್ಬರಿಗೆ ಸ್ಪಷ್ಟವಾಗಿ ಹೇಳಿದರು.

ಶ್ರೀ ಗುರುಗಳ ಹೇಳಿಕೆಯನ್ನು ಕೇಳಿ ಅವರಿಬ್ಬರು—"ಸ್ವಾಮಿ! ನಾವು ಈ ಭವಸಾಗರದಿಂದ ಉದ್ಧಾರವಾಗುವ ಬಗೆ ಹೇಗೆ?" ಎಂದು ಕೇಳಿದ ಕೂಡಲೆ ಗುರುಗಳು— "ಎಲೈ ದುರ್ಮತಿಗಳೇ! ನೀವು ಬ್ರಹ್ಮರಾಕ್ಷಸರಾಗಿ ಮೆರೆಯುವಿರಿ, ಹನ್ನೆರಡು ವರುಷಗಳ ವರೆಗೂ ನೀವು ನಿಮ್ಮ ಕರ್ಮಭೋಗ ಭೋಗಿಸುವಿರಿ. 'ಅನುತಪ್ತತೆಯು ಶಾಂತಿಯನ್ನುಂಟುಮಾಡುವದು' ಈ ವಾಕ್ಯವು ಶುಕನಾರಾಯಣನ ಪ್ರಥಮ ವಾಕ್ಯವಾಗಿದೆ. ನಿಮ್ಮ ಪಾಪಗಳು ಶುದ್ಧವಾದ ನಂತರ ಬ್ರಾಹ್ಮಣನೊಬ್ಬನು ಅಕಸ್ಮಾತ್ತಾಗಿ ನಿಮಗೆ ದರ್ಶನ ಕೊಡುವನು. ನೀವು ಆ ಬ್ರಾಹ್ಮಣನನ್ನು ಕುರಿತು ನಿಮ್ಮ ವಾರ್ತೆಯನ್ನು ತಿಳಿಸಿರಿ, ಈಗ ನೀವು ಗಂಗೆಗೆ ಹೋಗಿರಿ, ಆ ಗಂಗೆಯೇ ನಿಮಗೆ ಯೋಗ್ಯ ಸ್ಥಾನವಾಗುವದು" ಎಂದು ಗುರುಗಳು ಅವರಿಗೆ ಹೇಳಿದರು.

ಆ ಬಳಿಕ ಬ್ರಾಹ್ಮಣದ್ವಯರು ಗುರುಮಠದಿಂದ ಹೊರಬಿದ್ದರು. ಊರ ದಾಟಿ ಸ್ವಲ್ಪ ದೂರ ಹೋದ ನಂತರ ಅವರಿಬ್ಬರಿಗೂ ಅಸಹ್ಯವಾದ ಹೃದಯಶೂಲೆಯುತ್ಪನ್ನವಾಯಿತು. ಆ ವ್ಯಥೆಯು ಹೆಚ್ಚು ಹೆಚ್ಚು ಬಾಧಿಸಹತ್ತಲು ಅವರು ಗಂಗೆಯ ಮಡುವಿಗೆ ಸೇರಬೇಕೆಂದು ಅಡಬಡಿಸಿ ತೀರಕ್ಕೆ ಬಂದರು. ಇನ್ನು ಜಲಕ್ಕಿಳಿದು ಹೋಗಬೇಕೆಂದು ಅವರಿಬ್ಬರು ಕೈಕೈಹಿಡಕೊಂಡು ಎದ್ದು ನಿಲ್ಲುವಷ್ಟರಲ್ಲಿಯೇ ಅಲ್ಲಿಯೇ ಬಿದ್ದರು ಕಳವಳಿಸಿ ಕಣ್ಣೊರಳಿಸಿ ಸತ್ತುಹೋದರು. ಆ ದುಷ್ಟಾತ್ಮರನ್ನು ಗಂಗೆಯೂ ಕೂಡ ತನ್ನನ್ನು ಸ್ಪರ್ಶ ಮಾಡಗೊಡಲಿಲ್ಲ.

ನಾಮಧಾರಕಾ ! ಆ ವಾದಿ ಬ್ರಾಹ್ಮಣರು ಮಠಬಿಂದ ಅಂತರಿಸಿ ಹೋದ ನಂತರ ಆ ಮಠದ ಅಂಗಳಿನಲ್ಲಿ ಒಂದು ಕೌತುಕ ದರ್ಶನವಾಯಿತು. ಸಪ್ತ ರೇಷೆಗಳನ್ನು ಅತಿಕ್ರಮಿಸಿ ಬಂದ ಪತಿತನು ಈಗ ಪುನೀತ ಬ್ರಾಹ್ಮಣ ಸ್ವರೂಪನಾಗಿದ್ದನಲ್ಲವೇ? ಅವನು ಆ ಸ್ವರೂಪದಲ್ಲಿ ಮಹಾಜ್ಞಾನಿಯಾಗಿ ತನ್ನ ಜಾತಿಗಳನ್ನು ಸ್ಮರಣೆಗೆ ತಂದುಕೊಂಡನು. "ಆ ಜನ್ಮಗಳಲ್ಲೆಲ್ಲ ನಾನು ಬ್ರಾಹ್ಮಣನಾಗಿದ್ದೆನು. ಈ ಜನ್ಮದಲ್ಲಿಯೂ ಈಗ ಬ್ರಾಹ್ಮಣತ್ವ ಹೊಂದಿದೆನು. ಈ ಜನ್ಮದಲ್ಲಿ ಇದುವರೆಗೆ ನಾನು ಜಾತಿಹೀನನಾಗಿ ಉಳಿದದ್ದರ ಕಾರಣವೇನು? ಜನ್ಮಾಂತರಗಳಲ್ಲಿ ಏನಾದರೂ ನನ್ನ ದೋಷಗಳಿದ್ದವೇ? ಅಥವಾ ನಾನು ಮಹೇಶನನ್ನು ದ್ವೇಷಿಸಿದ್ದೇನೇ? ಇದನ್ನು ತ್ರಿಕಾಲಜ್ಞರೂ ಅಂತಃಸಾಕ್ಷಿಗಳೂ ಆಗಿರುವ ತಾವು ನನಗೆ ಪ್ರಕಟವಾಗಿ ಹೇಳುವದಾಗಬೇಕು" ಎಂದು ಪರಿವರ್ತಿತ ಪತಿತನು ಶ್ರೀ ಗುರುನಾಥನಿಗೆ ಪ್ರಶ್ನೆ ಮಾಡಿದನು. ಶ್ರೀ ಗುರುಗಳು ಅವನ ಪ್ರಶ್ನೆಗಳನ್ನು ಭ್ರಾಂತಿ ತೊಲಗಿಸಿದ ಕೌತುಕ ಪ್ರಸಂಗವನ್ನು ಮುಂದೆ ಹೇಳುವೆನು.

ಎಂದು ಸಿದ್ಧಮುನಿಯು ಹೇಳಿದನು.

—೦—

## ೨೮ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಶ್ರೀ ಗುರುಗಳು ಪರಿವರ್ತಿತ ಪತಿತನನ್ನು ಕುರಿತು— "ಎಲೈ! ಪೂರ್ವಜನ್ಮಕೃತ ಪಾಪ–ಪುಣ್ಯಗಳ ಫಲ ಭೋಗಗಳು ಕರ್ಮಾನುಸಾರವಾಗಿ ಒದಗುವವು. ಇದಕ್ಕನುಸರಿಸಿಯೇ ನೀನು ಚಾಂಡಾಲನಾಗಿ ಜನ್ಮಿಸಿದಿ, ಮಾನವಗೆ ಚಾಂಡಾಲ ಜನ್ಮ ಪ್ರಾಪ್ತವಾಗುವ ಕಾರಣ ಹೇಳುವೆನು ಕೇಳು. ಶೂದ್ರ ಹಾಗು ಉಚ್ಚವರ್ಣದ ಸ್ತ್ರೀ ಇವರಿಂದ ಉಂಟಾದ ಪಿಂಡವು ಚಾಂಡಾಲತ್ವದ್ದೆಂದು ಹೇಳಬಹುದು. ತಾಯ್ತಂದೆ ಗುರುಗಳನ್ನು ಧಿಕ್ಕರಿಸುವವನು ಚಾಂಡಾಲನಾಗಿ ಜನ್ಮಿಸುವನು, ಆಚಾರಹೀನ ಬ್ರಾಹ್ಮಣನು, ಕುಲಸ್ತ್ರೀಯಳನ್ನು ತ್ಯಜಿಸಿದವನು, ಅನ್ಯ ದೇವತೆಗಳನ್ನು ಅರ್ಚಿಸುವವನು, ಅಸತ್ಯ ನುಡಿಯುವವನು, ಹಿಂಸಕನು, ಕನ್ಯೆಯರನ್ನು ಮಾರುವವನು, ಸುಳ್ಳೇ ಪ್ರಮಾಣ ಮಾಡುವವನು, ಶೂದ್ರರಲ್ಲಿ ಭುಂಜಿಸುವವನು, ಕುದುರೆ–ಆಕಳುಗಳನ್ನು ವಿಕ್ರಯಿಸುವವನು, ಶೂದ್ರ ಸಂಪರ್ಕದಲ್ಲಿರುವವನು, ಶೂದ್ರನಾರಿ–ದಾಸಿಯರಲ್ಲಿ ಬೆರೆತವನು, ಮನೆಯುಪಯೋಗದ ಪಾತ್ರೆ ಮಾರುವವನು, ವೇದ ಹಾಗು ಪಿತೃಕರ್ಮ ಬಿಟ್ಟವನು, ಹುಲ್ಲಿನ ಅಡವಿಗೆ ಬೆಂಕಿ ಹಚ್ಚುವವನು, ಕರುವನ್ನು ತಾಯಿಯಿಂದ ಅಗಲಿಸುವವನು, ತಾಯ್ತಂದೆ ಮಕ್ಕಳನ್ನು ಬೇರಿರಿಸುವವನು, ಎತ್ತುಗಳ ಮೇಲೆ ಹತ್ತಿ ಪ್ರಯಾಣಮಾಡುವ

ಬ್ರಾಹ್ಮಣನು, ತೀರ್ಥಕ್ಕೆ ಹೋಗಿ ಅಲ್ಲಿ ಶ್ರಾದ್ಧಮಾಡದ ಬ್ರಾಹ್ಮಣನು, ಪರಾನ್ನ ಭುಂಜಿಸುವವನು, ಇವರೆಲ್ಲರು ಚಾಂಡಾಲರೆಂದು ತಿಳಿ. ಇವರಲ್ಲದೆ ಕರ್ಮ-ಆಚಾರವಿಲ್ಲದ ಬ್ರಾಹ್ಮಣನು, ಗೋವಿನ ಹಾಲಿನಿಂದ ಅಭಿಷೇಕಮಾಡದೆ ಪ್ರಾಶನ ಮಾಡುವವನು, ತುಳಸೀಪತ್ರವಿಲ್ಲದೆ ದೇವತಾರ್ಚನೆ ಮಾಡುವವನು, ಸಾಲಿಗ್ರಾಮ ಪೂಜಿಸುವ ಶೂದ್ರನು, ತಾಯ್ತಂದೆಗಳನ್ನು ರಕ್ಷಿಸದವನು ಇವರು ಚಾಂಡಾಲರಾಗಿ ಏಳು ಜನ್ಮಗಳವರೆಗೂ ನರಕದ ಕ್ರಿಮಿಗಳಾಗಿ ಕೊಳೆಯುವರು. ಚಾಂಡಾಲಯೋನಿ ಜನ್ಮವು ಇನ್ನೂ ಯಾರಾರಿಗೆ ಬರುವದೆಂಬದನ್ನು ಹೇಳುವೆನು ಕೇಳು. ಪ್ರಥಮ ಸತಿಯು ಇರುವಾಗ ದ್ವಿತೀಯ ಸಂಬಂಧ ಕಟ್ಟಿಕೊಂಡು ಮೊದಲಿನವಳನ್ನು ದೂರೀಕರಿಸುವವನು, ದಣಿದು ಬಂದ ಅತಿಥಿಯಿಂದ ವೇದಗಳನ್ನು ಪಠಣ ಮಾಡಿಸಿಕೊಂಡು ಅನ್ನ ನೀಡುವವನು, ಯೋಗ್ಯ ವಿಪ್ರರನ್ನು ನಿಂದಿಸುವವನು, ಅನ್ಯ ಜಾತೀಯರನ್ನು ಪೂಜಿಸುವವನು, ಅನ್ಯರ ಉದ್ಯಮ-ವೃತ್ತಿಗಳನ್ನು ಕಳೆಯುವವನು, ಜಲಾಶಯಗಳನ್ನು ನಷ್ಟಪಡಿಸುವವನು, ಶಿವಪೂಜೆಯನ್ನು ಕೆಡಿಸುವವನು, ಬ್ರಾಹ್ಮಣರ ಮನೆಗಳನ್ನು ಮುರಿಯುವವನು, ಗುರುತಲ್ಪಗಾಮಿಯು, ವಿಶ್ವಾಸಘಾತುಕನು, ದ್ವಿಭಾರ್ಯರಲ್ಲಿ ಒಬ್ಬಳನ್ನೇ ಮೋಹಿಸುವವನು, ಅಸ್ತಮಾನಕ್ಕೆ ಬಂದ ಅತಿಥಿಯನ್ನು ಪರಾಙ್ಮುಖಿಗೊಳಿಸುವವನು, ಹಗಲು-ರಾತ್ರಿಗಳ ಸಂಧಿಕಾಲದಲ್ಲಿ ಭೋಜನಮಾಡುವವನು, ಕೊಟ್ಟ ಭರವಸೆ ತಪ್ಪಿಸುವವನು, ಭೂದಾನಕೊಟ್ಟು ಹಿಂದಕ್ಕೆ ಸೆಳೆದುಕೊಳ್ಳುವವನು, ಸಂಧ್ಯಾಕಾಲದಲ್ಲಿ ಮಲಗುವವನು, ವೈಶ್ವದೇವಸಮಯದಲ್ಲಿ ಅತಿಥಿಗಳನ್ನು ಧಿಕ್ಕರಿಸುವವನು, ತೀರ್ಥನಿಂದಕನು, ಹರಿದಿನದಲ್ಲಿ ಉಣ್ಣುವವನು, ಸಮರದಲ್ಲಿ ಒಡೆಯನನ್ನು ಬಿಟ್ಟು ಓಡುವವನು, ಪರ್ವಣೆ-ಹರಿದಿನಗಳಲ್ಲಿ ಸ್ತ್ರೀಯರನ್ನು ಬೆರೆಯುವವನು, ಶೂದ್ರರಿಗೆ ವೇದ ಕಲಿ

ಸುವವನು, ಮೃತ್ಯುದಿನ ಶ್ರಾದ್ಧ ಮಾಡದವನು, ದಾರಿಬಡಕನು, ಅರವಟ್ಟಿಗೆ ಕೆಡಿಸುವವನು, ನಾಡೀಜ್ಞಾನವಿಲ್ಲದ ವೈದ್ಯನು, ಜಾರಣ-ಮಾರಣಾದಿ ಮಂತ್ರ ಕಲಿಯುವವನು, ಹರಿ-ಹರರನ್ನು ನಿಂದಿಸುವವನು, ವರ್ಣಾಶ್ರಮ ವಿಹಿತ ಕರ್ಮತ್ಯಾಗಿಯು, ಶೂದ್ರರಿಂದ ಮಂತ್ರ ಕಲಿವವನು, ವಿಧವೆಯನ್ನು ವೈಗೂಡುವವನು, ಶ್ರಾದ್ಧದಲ್ಲಿ ಪಿಂಡಕೊಡದವನು ಇವರೆಲ್ಲರು ಚಾಂಡಾಳ ಯೋನಿಯಲ್ಲಿ ಜನನಹೊಂದುವರು.

ಗುರುಗಳು ಮತ್ತೆ ಹೇಳಿದುದೇನಂದರೆ—

ವೇಶ್ಯೆಯಿಂದ ಹುಟ್ಟಿದವನು ಹೀನಜಾತಿಯಲ್ಲಿಯೇ ಹುಟ್ಟುವನು. ಗುರುನಿಂದಕ-ವಿಪ್ರದ್ವೇಷಿ-ಪಾಖಂಡಿ ಇವರಿಗೆ ಬ್ರಹ್ಮರಾಕ್ಷಸ ಜನ್ಮಸಿಗುವದು. ಗುರು-ದೇವರನ್ನು ಸ್ಮರಿಸದ ಹಾಗು ಅನ್ಯದೇವರನ್ನು ನಿಂದಿಸುವ ಮಾನವರಗೆ ಅಪಸ್ಮಾರ-ದುರಿದ್ರ್ಯಗಳ ಪೀಡೆಯಾಗುವದು. ತಾಯ್ತಂದೆ-ಗುರುಗಳನ್ನು ಬೇರೆ ಇಟ್ಟು ತನ್ನ ಹೆಂಡತಿಯೊಬ್ಬಳನ್ನೇ ಕೂಡಿ ಇರುವವನು ಬೇಡರ ಹೊಟ್ಟೆಯಿಂದ ಹುಟ್ಟಿ ರೋಗಿಷ್ಠನಾಗುವನು. ವೇದದ್ವೇಷಿ-ಬ್ರಾಹ್ಮಣವೈರಿ-ಕರ್ಮಭ್ರಷ್ಟ ಇವರು ಮೂತ್ರಕೃಚ್ಛ್ರ ರೋಗಪೀಡಿತರಾಗುವರು. ಅನ್ಯರ ಹುಳುಕುಗಳನ್ನೆತ್ತಿ ನುಡಿಯುವವನು ಹೃದಯರೋಗದಿಂದ ಬಳಲುವನು. ಗರ್ಭಪಾತ ಮಾಡಿಸುವವರು ಸಂತತಿಹೀನರಾಗುವರು, ಧರ್ಮಶಾಸ್ತ್ರಾದಿ ಪುರಾಣ ಶ್ರವಣ ಮಾಡದವನು, ಬಹಳ ಉಣ್ಣುವವರನ್ನು ದ್ವೇಷಿಸುವವನು ಇವರು ಕಿವುಡರಾಗಿ ಹುಟ್ಟುವರು, ಪತಿತರೊಡನೆ ಕಲಹವಾಡುವವನು ಕತ್ತೆಯಾಗಿ ಹುಟ್ಟುವನು. ಯವನರಿಂದ ಔಷಧ ಸ್ವೀಕರಿಸುವವನು ಮೃಗ ಯೋನಿಯಲ್ಲಿ ಜನ್ಮಿಸುವನು. ಬ್ರಹ್ಮಹತ್ಯೆಮಾಡಿದವನು ಕ್ಷಯರೋಗಿಯೂ ಸೆರೆಗುಡಕನು ಕಂದುಹಲ್ಲಿನವನೂ ಆಗುವರು, ಬಂಗಾರಗಳ್ಳನು ವಿರೂಪಿಯೂ, ಗುರು

ಪತ್ನಿಯನ್ನು ದೃಷ್ಟಿಸುವವನು ಕುಷ್ಟರೋಗಿಯೂ ಆಗುವರು, ಆಕಳ ಹಾಗು ಕುದುರೆಯ ವಧಿಕನು ಸಂತಾನ ರಹಿತರಾಗುವರು. ಪರರಿಗೆ ಅನ್ನವಿಕ್ಕದವನು ಅರುಚಿ ರೋಗಿಯಾಗುವನು, ಒಬ್ಬನ ಸೇವಕನನ್ನು ತನ್ನ ಸೇವಕನನ್ನಾಗಿ ಸೆಳೆದುಕೊಳ್ಳುವವನು ಕಾರಾಗೃಹ ಭೋಗಿಯಾಗುವನು. ಹಾವನ್ನು ಕೊಂದವನು ಹಾವಾಗಿ ಬೀಳುವನು.

ಎಲ್ಲೈ ! ಮೇಲೆ ಹೇಳಿದಂಥ ದೋಷಗಳು ಲೆಕ್ಕವಿಲ್ಲದಷ್ಟು ಇರುವವು. ಇನ್ನು ಕಳವು-ಅಪಹಾರಗಳ ಬಗೆಗೆ ಹೇಳುವೆನು ಕೇಳು.

ಸ್ತ್ರೀಯಳನ್ನು ಅಪಹರಿಸುವವನು ಮತಿಹೀನನಾಗಿ ಹುಟ್ಟುವನು. ಹಾಗು ಅವನು ಸದಾ ದುಃಖಿಯಾಗಿ ನರಕವಾಸಿಯಾಗುವನು. ಬಣ್ಣಗಳನ್ನು ಕದಿಯುವವನು ಬಿಳುಪಿನ ರೋಗಿಯಾಗುವನು" ಎಂದು ಹೇಳಿ ಗುರುಗಳು ವ್ಯಭಿಚಾರ ದೋಷ ಹೇಳಹತ್ತಿದರು.

ಪರ ಸ್ತ್ರೀಯಳನ್ನು ಆಲಂಗಿಸುವವನು ನೂರು ಜನ್ಮ ನಾಯಿಯಾಗುವನು. ಮುಂದೆ ಸರ್ಪ ಯೋನಿಯಲ್ಲಿ ಜನಿಸಿ ಭೋಗಿಯಾಗುವನು. ಪರಸ್ತ್ರೀ ಗುಹ್ಯವನ್ನು ನಿರೀಕ್ಷಿಸಿದವನು ಕುರುಡನಾಗುವನು, ಬಂಧುವಿನ ಸತಿಯು ಸಂಪರ್ಕಮಾಡಿದವನು ಗರ್ದಭನಾಗಿ ಜನ್ಮಿಸುವನು. ನಂತರ ಹಾವಾಗಿ ನರಕ ಸೇರುವನು. ಸ್ನೇಹಿತನ ಸತಿಯಳನ್ನು ಇಚ್ಛಿಸಿದವನೂ, ಸೋದರಮಾವನ ಪತ್ನಿಯನ್ನು ಬೆರೆತವನೂ ಶ್ವಾನಗಳಾಗಿ ಹುಟ್ಟುವರು, ಕುಬುದ್ಧಿಯಿಂದ ಪರನಾರಿಯ ಮುಖ ನಿರೀಕ್ಷಣೆ ಮಾಡುವವನಿಗೆ ಇದೇ ಜನ್ಮದಲ್ಲಿ ಚಕ್ಷು ರೋಗವುಂಟಾಗುವದು, ಶೂದ್ರ ಸಂಪರ್ಕ ಸೇರಿದವಳು ನಾಯಿಯಾಗಿ ಹುಟ್ಟುವಳು" ಈ ಪ್ರಕಾರ

ಗುರುಗಳು ಆ ಪತಿತನಿಗೆ ಹೇಳಿದರು.

ಶ್ರೀ ಗುರುಗಳು ಹೇಳುತ್ತಿರುವಾಗ ತ್ರಿವಿಕ್ರಮ ಭಾರತಿಯು— ''ಸ್ವಾಮಿ! ತಾವು ಸಕಲ ಧರ್ಮ ಬೋಧಿಸಿದಿರಿ. ನಿಮ್ಮ ಬೋಧೆಯಿಂದ ಮನಸ್ಸು ನಿರ್ಮಲವಾಯಿತು. ಒಂದು ವೇಳೆ ದುಷ್ಕರ್ಮ ವೊದಗಲು ಆ ಪಾಪ ನಿರಾಕರಣೆ ಎಂತಾಗುವದು? ಎಂದು ಕೇಳಲು ಗುರುಗಳು— ''ಯತಿಯೇ! ಉಂಟು. ಪಾಪಗಳಿಗೆ ತಕ್ಕ ಪ್ರಾಯಶ್ಚಿತ್ತಗಳೂ ಉಂಟು. ಪ್ರಾಯಶ್ಚಿತ್ತಕ್ಕಿಂತ ಪಶ್ಚಾತ್ತಾಪವು ತೀವ್ರತರವು, ಪಶ್ಚಾತ್ತಾಪವಾಗಲು ಪಾಪವೇ ಉಳಿಯುವದಿಲ್ಲ. ಪಾಪವು ದೊಡ್ಡದೆಂದು ಹೃದಯವನ್ನು ಕೊರೆಯುಹತ್ತಿದರೆ 'ಕರ್ಮ ವಿಪಾಕ' ದಲ್ಲಿ ಅದಕ್ಕೆ ಪ್ರಾಯಶ್ಚಿತ್ತ ಹೇಳಿಯೇ ಇರುವದು. ಆ ಪಶ್ಚಾತ್ತಾಪದ ವಿಧಾನ ಹೇಳುವೆ ಕೇಳು.

ಮೊದಲು ಬ್ರಹ್ಮದಂಡ ಕೊಟ್ಟರೆ ಪಾಪಖಂಡನೆಯಾಗುವದು. ಅದಕ್ಕೆ ಗೋದಾನ, ಅಥವಾ ದ್ರವ್ಯ ಕೊಡಬೇಕು. ಅಜ್ಞಾನಕೃತ ಪಾಪವು ದೂರಾಗುವದಕ್ಕೆ ಇನ್ನೂರು ಪ್ರಾಣಾಯಾಮ ಹಾಗು ಪುಣ್ಯ ತೀರ್ಥದಲ್ಲಿ ಹತ್ತು ಸಾರೆ ಸ್ನಾನ ಮಾಡಬೇಕು. ಸತಿ–ಪತಿ ಇವರಲ್ಲಿ ಯಾರೇ ಒಬ್ಬರು ಪಾಪ ಮಾಡಿದರೆ ಅವರಿಬ್ಬರಿಗೂ ದೋಷತಟ್ಟುವದು. ಇನ್ನೊಂದು ಪ್ರಕಾರವೇನಂದರೆ— ಇಂಥ ಪಾಪನಿವಾರಣೆಗೆ ಹತ್ತು ಸಾವಿರ ಗಾಯತ್ರಿ ಜಪ ಮಾಡಬೇಕು. ವೇದ ಮಂತ್ರ ಉಚ್ಚರಿಸಬೇಕು. ಇದಕ್ಕೆ 'ಗಾಯತ್ರಿಕೃಚ್ಛ್ರ' ಎಂಬ ಹೆಸರು. ಈ ಪ್ರಾಯಶ್ಚಿತ್ತದಿಂದ ಮಹಾ ದೋಷಗಳು ಪವಿತ್ರವಾಗುವವು. ಸಕಲಾಭೀಷ್ಟೆ ಸಿದ್ಧಿಸುವವು" ಎಂದು ಹೇಳಿ ಗುರುಗಳು ತ್ರಿವಿಕ್ರಮನಿಗೆ ಇನ್ನೂ ಅನೇಕ ಪ್ರಾಯಶ್ಚಿತ್ತ ಹೇಳಿದರು ಅವು ಯಾವವೆಂದರೆ—

ಗಾಯತ್ರಿಕೃಚ್ಛ್ರದ ತರುವಾಯ— ಪ್ರಾಜಾಪತ್ಯಕೃಚ್ಛ್ರ, ಅತಿಕೃಚ್ಛ್ರ, ಪರ್ಣಕೃಚ್ಛ್ರ ಚಾಂದ್ರಾಯಣ, ತೀರ್ಥಕೃಚ್ಛ್ರ, ಇವೆಲ್ಲವು ಬೇರೆ ಬೇರೆ ಕ್ರಮದ ಪ್ರಾಯಶ್ಚಿತ್ತಗಳು. ಇವುಗಳ ಹೊರತು ಇರುವ ಸುಲಭ ಪ್ರಾಯಶ್ಚಿತ್ತಗಳಾವವೆಂದರೆ—

ವೇದಾಕ್ಷರ— ವೇದಗಳ ಉಚ್ಚಾರದಿಂದ ಪಾಪನಶಿಸುವದು.

ಪವಮಾನಸೂಕ್ತ— ಪುರುಷಸೂಕ್ತ, ತ್ರಿಮಧು (ಮಂತ್ರಸೂಕ್ತ), ನಾರಾಯಣಪ್ರಶ್ನ, ಇವಲ್ಲದೆ ಪಂಚಗವ್ಯಪ್ರಾಶನ ಇವೆಲ್ಲವು ಪ್ರಾಯಶ್ಚಿತ್ತದ ಪ್ರಕಾರಗಳು.

ತ್ರಿವಿಕ್ರಮ ಯತಿಗಳೇ ! ಪಂಚಗವ್ಯದಲ್ಲಿ—

ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ಇವು ಐದನ್ನೂ ಬೆರೆಸುವದಲ್ಲದೆ ಕುಶಾಗ್ರ ಜಲ ಬಿಂದುವನ್ನು ಆರನೆಯದಾಗಿ ಕೂಡಿಸಬೇಕು. ಈ ಪಂಚಗವ್ಯದ ಪ್ರಮಾಣವೆಂತೆಂದರೆ— ಒಂದು ಪಾವಸೇರು ಗೋಮೂತ್ರ, ಒಂದು ಹೆಬ್ಬೆರಳಿನ ಗಾತ್ರದಷ್ಟು ಶುದ್ಧ ಗೋಮಯ, ಒಂದೂ ಮುಕ್ಕಾಲ ಸೇರು ಹಾಲು, ತುಪ್ಪ ಪಾವಸೇರು, ಮೊಸರು ಮೂರು ಪಾವಸೇರು. ಇವೆಲ್ಲವನ್ನು ಕೂಡಿಸಿ ಅಷ್ಟೇ ಕುಶಜಲ ಕೂಡಿಸಿ ಪಂಚಗವ್ಯ ಮಾಡಿಕೊಳ್ಳಬೇಕು. ಈ ಪಂಚಗವ್ಯಕ್ಕಾಗಿ— ಗೋಮೂತ್ರವು ನೀಲವರ್ಣದ್ದಿರಬೇಕು, ಗೋಮಯವು ಕಪ್ಪು ಬಣ್ಣದ್ದಿರಬೇಕು, ಕೆಂದಾವಿನ ಹಾಲು, ಬಿಳಿಯಾಕಳಿನ ಮೊಸರು. ಹಾಗು ಕಪಿಲಾ ಗೋವಿನ ತುಪ್ಪ ಇರಬೇಕು. ಇವೈದುಗಳನ್ನು ಕುಶ ಜಲದೊಡನೆ ಬೆರಸಿ ಸಿದ್ಧಪಡಿಸಿದ ಪಂಚಗವ್ಯವು ಶ್ರೇಷ್ಠವೆನ್ನಿಸುವದು. ಅನುತಪ್ತಭಾವದಿಂದ ಈ ಪಂಚಗವ್ಯವನ್ನು ಸ್ವೀಕರಿಸಲು ಅಸ್ಥಿಗತ-ಚರ್ಮಗತ ದೋಷಗಳು



ಸಹ ಸಾಕವಾಗುವವು'' ಈ ಪ್ರಕಾರ ಶ್ರೀ ಗುರುಗಳು ತ್ರಿವಿಕ್ರಮ ಭಾರತಿ ಯತಿಗೆ ಪ್ರಾಯಶ್ಚಿತ್ತ ವಿಷಯಕ್ಕೆ ಹೇಳಿದರು.

ಬಳಿಕ ಶ್ರೀ ಗುರುಗಳು ಪರಿಪತಿತ ಪತಿತನನ್ನು ಕುರಿತು— ''ಎಲೈ ನೀನು ಪೂರ್ವ ಜನ್ಮದಲ್ಲಿ ಬ್ರಾಹ್ಮಣನಾಗಿದ್ದುದು ನಿಜ. ಆದರೆ ಆ ಜನ್ಮದಲ್ಲಿ ನೀನು ತಾಯ್ತಂದೆ ಗುರುಗಳೊಡನೆ ದ್ವೇಷಭಾವದಿಂದ ವರ್ತಿಸಿದ್ದುದರಿಂದ ಈ ಜನ್ಮದಲ್ಲಿ ಚಾಂಡಾಲ ಯೋನಿಯಲ್ಲಿ ಜನ್ಮತಾಳಿದಿ ! ಈ ಜನ್ಮದಲ್ಲಿ ನೀನು ಗತಜನ್ಮದ ಪಾಪ ನೀಗುವದಕ್ಕೆ ನೀನು ಒಂದು ತಿಂಗಳು ಸಂಗಮ ಸ್ನಾನ ಮಾಡಿದರೆ ನಿನಗೆ ವಿಪ್ರಜನ್ಮ ಬರುವದು' ಎಂದು ಹೇಳಿದರು. ಆದಕ್ಕೆ ಆ ಪತಿತನು— 'ಈಗ ನಿಮ್ಮ ದರ್ಶನದಿಂದ ಶುದ್ಧನಾಗಿರುವೆನು. ಈ ನನ್ನನ್ನು ಅಭಿಮಂತ್ರಿಸಿ ಬ್ರಾಹ್ಮಣ ಸಮಾಜದಲ್ಲಿ ಸೇರಿಸಬೇಕು' ಎನ್ನಲು ಗುರುಗಳು— 'ನೀನು ಈ ಜನ್ಮದಲ್ಲಿ ಪತಿತರಲ್ಲಿ ಹುಟ್ಟಿ–ಬೆಳೆದಿ, ಅಂದಮೇಲೆ ಬ್ರಹ್ಮತ್ವವು ನಿನಗೆಂತು ಪ್ರಾಪ್ತವಾಗುವದು? ವಿಶ್ವಾಮಿತ್ರನಂಥ ಕ್ಷತ್ರಿಯ ರಾಜನು ಬ್ರಹ್ಮರ್ಷಿಯಾಗಬೇಕಾದರೆ ಸೂರ್ಯ ಕಿರಣಗಳಿಂದ ತನ್ನ ದೇಹ ಸುಟ್ಟುಕೊಂಡು ಹೊಸ ಶರೀರ ಧಾರಿಯಾದಾಗಲೇ ಅವನು 'ಬ್ರಹ್ಮರ್ಷಿ' ಎಂದು ತ್ರೈಲೋಕ್ಯಕ್ಕೆ ಹೆಸರಾದರು. ಆದ್ದರಿಂದ ನಿನ್ನ ಇಹ ದೇಹ ದೂರಾದರೆ ಮಾತ್ರ ನಿನ್ನ ಮುಂದಿನ ಜನ್ಮದಲ್ಲಿ ನೀನು ಸಫಲತೆ ಹೊಂದುವಿ' ಎಂದು ಹೇಳಿದರು. ಆದರೂ ಪತಿತನು ತನ್ನ ಹಟ ಬಿಡಲಿಲ್ಲ. ಅಷ್ಟರಲ್ಲಿ ಅವನ ಹೆಂಡತಿಯೂ ಮಗನೂ ಅವನನ್ನು ಹುಡುಕುತ್ತ ಅಲ್ಲಿಗೆ ಬಂದು ಅವನ ಸನಿಹಕ್ಕೆ ನಿಂತರು. ಪತಿತನು ಅವರಿಗೆ— 'ದೂರ ಸರಿಯಿರಿ, ನನ್ನನ್ನು ಮುಟ್ಟಬೇಡಿರಿ' ಎಂದು ಅವರನ್ನು ಬೆದರಿಸಿದನು. ಹೆಂಡತಿ–ಮಗನು ಹೌಹಾರಿ— ''ಇವನಿಗೆ ಭ್ರಾಂತಿಯಾಗಿದೆ'' ಎಂದು ಗ್ರಹಿಸಿದರು.



ಹಾಗು ಅವನನ್ನು ಮನೆಗೆ ಹೋಗಲು ಅಪ್ಪಣೆ ಕೊಡಬೇಕು'' ಎಂದು ಗುರುಗಳಿಗೆ ಬಿನ್ನವಿಸಿದರು. ಗುರುಗಳು ಹೇಳಿದರೂ ಅವನು ಕೇಳಲೊಲ್ಲನು. 'ಈ ಮೊದಲು ಅವನ ಮೈಗೆ ಲೇಪಿಸಿದ ವಿಭೂತಿಯ ಮಹಿಮೆಯಿದಾಗಿದೆ' ಎಂದು ವಿಚಾರಿಸಿ ಗುರುಗಳು ಆಗಲೇ ವ್ಯಾಪಾರೋದ್ಯಮದಿಂದ ಉಪಜೀವಿಸುವ ಒಬ್ಬ ಬ್ರಾಹ್ಮಣನನ್ನು ಕರೆಯಿಸಿದರು. ಆ ಲುಬ್ಧಕ ಬ್ರಾಹ್ಮಣನಿಂದ ಅಲ್ಲಿ ನಿಂತ ಪತಿತನ ಮೈ ಮೇಲೆ ನೀರನ್ನು ಸುರುವಿದರು. ಅದರಿಂದಾಗಿ ಅವನ ಮೈಗೆ ಮೆತ್ತಿದ್ದ ಭಸ್ಮವೆಲ್ಲ ತೊಳೆದು ಹೋಯಿತು. ಕೂಡಲೆ ಅವನಲ್ಲಿ ಮೊದಲಿನ ಸ್ಥಿತಿಯುಂಟಾಗಿ ಎದುರಿನಲ್ಲಿ ನಿಂತಿದ್ದ ಸತಿ–ಸುತರನ್ನು ಹೋಗಿ ಕೂಡಿಕೊಂಡು ತನ್ನ ಕೇರಿಗೆ ಹಿಂತಿರುಗಿ ಹೋದನು.

ಅಲ್ಲಿ ನೆರೆದವರೆಲ್ಲರು ಇದನ್ನು ನೋಡಿ ಕೌತುಕಪಟ್ಟರು. ತ್ರಿವಿಕ್ರಮನು ಶ್ರೀ ಗುರುಗಳನ್ನು ಕುರಿತು— ''ಸ್ವಾಮಿ ! ಆ ಪತಿತನ ದೇಹಕ್ಕೆ ಭಸ್ಮಲಿಪ್ತವಾಗಿರುವವರೆಗೆ ಅವನು ಪುನೀತನಾಗಿದ್ದನು. ಅದು ಕ್ಷಾಲನವಾದನಂತರ ಆ ಸ್ಥಿತಿಯು ಉಳಿಯಲಿಲ್ಲ. ಇದೇನು ಚಮತ್ಕಾರವು?" ಎಂದು ಕೇಳಲು ಶ್ರೀ ಗುರುಗಳು ಆ ಯತಿಗೆ ಭಸ್ಮ ಮಹಿಮೆಯನ್ನು ವಿಸ್ತರಿಸಿ ಹೇಳಹತ್ತಿದರು. ಅದನ್ನೇ ಮುಂದೆ ಹೇಳುವೆನು.

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೧೯ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಶ್ರೀ ಗುರುಗಳು ತ್ರಿವಿಕ್ರಮ ಯತಿಗೆ ಭಸ್ಮ ಮಹಾತ್ಮ್ಯೆ ವನ್ನು ಹೇಳಹತ್ತಿದರು. ಎಂತೆಂದರೆ—

“ತ್ರಿವಿಕ್ರಮ ಯತಿಯೆ ! ಪೂರ್ವಾಪರ ಕೃತಯುಗದಲ್ಲಿ ‘ವಾಮದೇವ’ ಎಂಬ ಯೋಗಿಯು ಜಗತ್ತಿನ ಗುರುವೆನ್ನಿಸಿ ಹೆಸರಾಗಿದ್ದನು. ಆತನು ಶುದ್ಧ–ಬುದ್ಧನೂ, ಬ್ರಹ್ಮಜ್ಞಾನಿಯೂ, ವಿರಕ್ತನೂ ಹಾಗು ನಿರ್ವಿಕಾರನೂ ಆಗಿ ಸತತವೂ ಭೂಮಿಯ ಮೇಲೆ ಸಂಚರಿಸುತ್ತಿದ್ದನು. ಅವನು ಹಲವು ತೀರ್ಥಗಳನ್ನು ಸುತ್ತಾಡಿ ‘ಕ್ರೌಂಚಾರಣ್ಯ’ ಕ್ಕೆ ಬಂದನು. ಆ ಅರಣ್ಯದಲ್ಲಿ ರಾಕ್ಷಸರ ಸುಳಿದಾಟವೇ ಹೊರತು ಮಾನವರಿಗೆ ಎಷ್ಟು ಮಾತ್ರವೂ ಸಂಚಾರಕ್ಕೆ ಅನುಕೂಲವಿದ್ದಿರಲಿಲ್ಲ. ಇಂಥ ಭೀಕರ ಅರಣ್ಯಕ್ಕೆ ವಾಮದೇವರು ಬಂದರು. ತುಸು ಮುಂದೆ ಹೋಗುವಷ್ಟರಲ್ಲಿ ಭಯಾನಕ ಬ್ರಹ್ಮರಾಕ್ಷಸವು ಅವರೆದುರಿಗೆ ದುತ್ತೆಂದು ಬಂದು ನಿಂತಿತು. ವಾಮದೇವರನ್ನು ಭಕ್ಷಿಸುವದಕ್ಕೆ ‘ಆ’ ಎಂದು ಬಾಯ್ದೆರೆದು ನಿಂತಿತು. ಮಹಾಜ್ಞಾನಿಗಳಾದ ವಾಮದೇವರು ಅದಕ್ಕೆ ಬೆಚ್ಚಲಿಲ್ಲ, ಬೆದರಲಿಲ್ಲ. ಇನ್ನಿಷ್ಟು ಅದರ ಮುಂದೆ ಸರಿದು ನಿಲ್ಲಲು ರಾಕ್ಷಸವು— “ನನ್ನ ಅದೃಷ್ಟವು ಅನಾಯಾಸ ನನಗೆ ಆಹಾರ ಒದಗಿಸಿತು” ಎಂದು ಉಚ್ಚರಿಸಿ ಒಮ್ಮೆಲೇ ವಾಮದೇವರನ್ನು ತನ್ನ ತೆಕ್ಕೆಯಲ್ಲಿ ತೆಕ್ಕೊಂಡು ಹಿಸುಕಹತ್ತಿದನು. ಆಗ ವಾಮದೇವರು ತಮ್ಮ ಅಂಗಾಂಗಗಳಿಗೆ ಲೇಪಿಸಿಕೊಂಡಿದ್ದ ಭಸ್ಮವು ಆ ರಾಕ್ಷಸನ ಮೈಗೆ ಪೂಸಿದಂತಾಯಿತು. ತತ್ಪರಿಣಾಮವಾಗಿ ಆ ರಾಕ್ಷಸನಿಗೆ ಕೂಡಲೆ ಜ್ಞಾನವುಂಟಾಯಿತು.

ವಾಮದೇವಯೋಗಿಯ ಸ್ಪರ್ಶದಿಂದ ಆ ರಾಕ್ಷಸನ ಪಾಪಗಳೆಲ್ಲ ನಶಿಸಿದವು. ಪ್ರಜ್ಞೆಯ ಸ್ಥಿತಿಗಿಳಿದ ರಾಕ್ಷಸವು ಆಗಲೇ ತನ್ನ ತೆಕ್ಕೆಯನ್ನು ಸಡಿಲಿಸಿ ವಾಮದೇವರನ್ನು ಬಿಟ್ಟಿತು. ಹಾಗು ಅವರ ಪಾದಗಳಿಗೆ ಸಾಷ್ಟಾಂಗ ಹಾಕಿ ಎದ್ದು ಕೈ ಮುಗಿದು—ಗುರುಶಿರೋಮಣಿಯೆ ! ನನ್ನನ್ನು ಉದ್ಧರಿಸಿರಿ. ಮುನೀಶ್ವರರೆ ! ನಿಮ್ಮ ದರ್ಶನದಿಂದ ನನ್ನ ಪಾಪಗಳು ದಗ್ಧವಾದವು" ಎಂದು ಹೇಳುತ್ತಿರುವಾಗಲೇ ವಾಮದೇವರು ಆ ರಾಕ್ಷಸನನ್ನು ಕುರಿತು— "ಎಲೋ ! ನೀ ನಾರು? ನಿನ್ನ ವಂಶವಾವುದು? ಈ ಘೋರಾಟವಿಯಲ್ಲಿ ನಿನ್ನ ವಾಸ್ತವ್ಯವೇಕೆ? " ಎಂದು ಕೇಳಲು ಬ್ರಹ್ಮ ರಾಕ್ಷಸವು— "ಸ್ವಾಮಿ ! ನಿಮ್ಮ ಸಂಪರ್ಕದಿಂದ ನನಗೆ ಪ್ರಾಕ್ತನ ಜ್ಞಾನವೊದಗಿದೆ. ನಾನು ಈ ಹಿಂದಿನ ಇಪ್ಪತ್ತೈದನೆಯ ನನ್ನ ಜನ್ಮದಲ್ಲಿ ಒಂದು ಯವನ ದೇಶದ ರಾಜನಾಗಿದ್ದೆನು. ಆಗ ನನಗೆ 'ದುರ್ಜಯ' ಎಂಬ ಹೆಸರಿದ್ದಿತು. ದುರಾಚಾರವೃತ್ತಿಯೇ ನನ್ನದಾಗಿದ್ದಿತು. ರಾಜ್ಯ ಮದದಿಂದ ಪ್ರಜೆಗಳನ್ನು ಪೀಡಿಸಿದೆನು. ಬಹು ಜನ ಸ್ತ್ರೀಯರನ್ನು ವರಿಸಿದೆನು. ಇಷ್ಟಾದರೂ ಅಸಂಖ್ಯ ಪರ ನಾರಿಯರನ್ನು ಲೈಂಗಿಕ ವೃತ್ತಿಯಿಂದ ಅವರ ನೀತಿಯನ್ನು ಭಂಗಿಸಿದೆನು. ಜಾತಿ–ವಿಜಾತಿಯನ್ನೆಣಿಸದೆಯೂ ದುಷ್ಟ–ಶಿಷ್ಟರೆಂಬುದನ್ನು ಲೆಕ್ಕಿಸದೆಯೂ ಸಿಕ್ಕ ಸಿಕ್ಕ ನಾರಿಯರೊಡನೆ ವ್ಯೈಗೂಡಿದೆನು. ಈ ನನ್ನ ವರ್ತನೆಯು ಸಕಲ ವರ್ಣದ ಪ್ರಜೆಗಿಗೆ ಅಸಹ್ಯವಾಯಿತು, ತಮ್ಮ ತಮ್ಮ ಸ್ತ್ರೀಯರ ಮಾನರಕ್ಷಣೆಗೆಂದು ಬಹು ಜನರು ನನ್ನ ರಾಜ್ಯದಿಂದ ಅಂತರಿಸಿ ಹೋದರು. ಈ ದುಷ್ಟ ವೃತ್ತಿಯಲ್ಲದೆ ಮಾಂಸಭಕ್ಷಣ, ಮದಿರಾಪ್ರಾಶನ ಇವುಗಳ ನಿತ್ಯ ಸೇವನೆಗೆ ಅತ್ಯಂತ ಮೆಚ್ಚಿದೆನು. ಅದರಿಂದಾಗಿ ಯಕ್ಷ್ಮಾದಿಕ ಕ್ಷಯರೋಗ ಪೀಡಿತನಾಗಿ ದುರ್ಬಲನಾದೆನು. ನನ್ನ ದುರ್ಬಲತೆಯ ಮೂಲಕ ಪರರಾಜರು ನನ್ನ ರಾಜ್ಯವನ್ನೆಲ್ಲ ಸೆಳೆದುಕೊಂಡರು. ಮುಂದೆ ಅಲ್ಪಾವಧಿಯಲ್ಲಿಯೇ ದೇಹವನ್ನು ತೊರೆದುಬಿಟ್ಟೆನು. ನನ್ನ

ಪಾಪಕೃತ್ಯಗಳ ಫಲವಾಗಿ ಆಗಲೇ ಯಮದೂತರು ಬಂದರು. ನನ್ನನ್ನು ಎಳೆದೊಯ್ದು ನರಕದಲ್ಲಿ ಚೆಲ್ಲಿದರು. ದಿವ್ಯಮಾನದ ಹತ್ತು ಸಾವಿರ ವರ್ಷ ನಾನು ಹತ್ತು ನಾರೆ ನನ್ನ ಪಿತರುಗಳಿಂದ ಸಹಿತ ನರಕ ಭೋಗಿಸಿದೆನು.

ಆ ಬಳಿಕ ನಾನು ಪ್ರೇತ ವಂಶದಲ್ಲಿ ಜನಿಸಿದೆನು. ಆಗ ವಿರೂಪ ಸ್ಥಿತಿ ನನ್ನದಾಯಿತು ಒಂದು ಸಾವಿರ ಶಿಶ್ನಗಳು ನನ್ನ ಮೈಗೆ ಉತ್ಪನ್ನವಾಗಿದ್ದವು. ಈ ಪ್ರಕಾರ ಆ ಜನ್ಮದಲ್ಲಿ ದಿವ್ಯಮಾನದ ಒಂದ ನೂರು ವರುಷ ಕಳೆದೆನು. ನಂತರ ಮತ್ತೆ ಯಮಪಂಥ ಸೇರಿ ಹಲವು ಕಷ್ಟ ಅನುಭವಿಸಿದೆನು. ನಂತರ ನನಗೆ ಎರಡ ನೆಯ ಜನ್ಮವೊದಗಿತು. ಆಗ ನಾನು ಹುಲಿಯಾಗಿ ಹಿಂಸೆಯಲ್ಲಿಯೇ ಜನ್ಮನೀಗಿದೆನು. ಮುಂದೆ ಮೂರನೆಯ ಜನ್ಮದಲ್ಲಿ ಅಜಗರನಾಗಿ ಹೊರಳಾಡಿದೆನು. ಇದರಂತೆ ನಾಲ್ಕನೆಯ ಜನ್ಮದಿಂದ ಇದುವರೆಗಿನ ಜನ್ಮಗಳಾವ ವೆಂದರೆ— 'ತೋಳ, ನಾಯಿ, ಸರಟ, ಶ್ವಾನ, ನರಿ, ಗಂಡೆರಳೆ, ಒಂಟೆ, ಮಂಗ, ಸಾರಂಗ, ಮುಂಗುಲಿ, ಕಾಗೆ, ಗ್ರಾಮಸೂಕರ, ನೀರ್ಗೋಳಿ, ಕುರುಡಕ್ಕತ್ತೆ, ಬೆಕ್ಕು, ಕಪ್ಪೆ, ಆಮೆ, ಮೀನ, ಇಲಿ, ಕಿಪುಡಗೂಗೆ, ಮದ್ದಾನೆ. ಈ ಎಲ್ಲ ಜನ್ಮಗಳನ್ನು ಸುತ್ತಾಡಿ ಈ ಬ್ರಹ್ಮರಾಕ್ಷಸ ಜನ್ಮತಾಳಿರುವೆನು. ಸ್ವಾಮಿಾ ! ಈ ಜನ್ಮ ದಲ್ಲಿ ನಾನು ಕ್ಷುಧಾಕ್ರಾಂತನಾಗಿ ಹಗಲಿರುಳೂ ನಿರಾಹಾರದಿಂದ ಅರಣ್ಯವಾಸಿಯಾಗಿ ಇರುವೆನು. ನಿಮ್ಮನ್ನು ಭಕ್ಷಿಸುವದಕ್ಕೆ ಪ್ರಯತ್ನಿಸಿದೆನು. ನನ್ನ ಪಾಪ ರೂಪವನ್ನು ನೀವು ಕಂಡಿರಿ. ನಿಮ್ಮ ಅಂಗ ಸ್ಪರ್ಶದಿಂದ ಈಗ ನನಗೆ ಜಾತಿ ಸ್ಮರಣೆಯುಂಟಾಯಿತು. ನನ್ನ ಸಾವಿರ ಜನ್ಮಗಳು ನನ್ನ ನೆನಪಿಗೆ ಬರಹತ್ತಿವೆ. ಸ್ವಾಮಿಾ ! ನನ್ನನ್ನು ಅನುಗ್ರಹಿಸು. ಇನ್ನು ಮುಂದೆ ನನಗೆ ಜನ್ಮಗಳಾಗದಂತೆ ಕರುಣಿಸಿ ನನ್ನನ್ನು ಉದ್ಧರಿಸಿರಿ. ನಿಮ್ಮ ಅಂಗ ಸ್ಪರ್ಶದಿಂದ ನನಗೆ ಎಲ್ಲ ಜ್ಞಾನಗಳುದಯವಾಯಿತು. ಇಂಥ ಮಹಿಮಾವಂತರಾದ ನೀವು ನಿಜವಾ

ಗಿಯೂ ಈಶ್ವರನೇ ಆಗಿರುವಿರಿ'' ಎಂದೆನ್ನಲು ವಾಮದೇವನು ಆ ಬ್ರಹ್ಮರಾಕ್ಷಸವನ್ನು ಕುರಿತು— 'ಎಲೋ ! ಒಮ್ಮೆಲೆ ನಿನ್ನ ವೃತ್ತಿ ಬದಲಾಪುದು ಭಸ್ಮ ಮಹಿಮೆಯಿಂದಲೇ ನಿಜ. ನನ್ನ ಅಂಗಾಂಗಲಿಪ್ತ ಭಸ್ಮವು ನಿನ್ನ ಮೈಗೆ ಸೋಂಕಿ ನೀನು ಪುನೀತನಾದಿ. ಭಸ್ಮ ಮಹಿಮೆಯು ಅಪರಂಪಾರವಿದೆ. ಸಾಕ್ಷಾತ್ ಈಶ್ವರನೇ ಅದನ್ನು ಧರಿಸಿಕೊಳ್ಳುವನೆಂದಮೇಲೆ ಅದರ ಮಹಿಮೆ ಅಷ್ಟಿಷ್ಟಲ್ಲ. ಈ ಭಸ್ಮ ಮಹಿಮೆಯನ್ನು ವ್ಯಕ್ತಗೊಳಿಸುವ ಒಂದು ದೃಷ್ಟಾಂತ ಹೇಳುವೆ ಕೇಳು.

"ಬ್ರಹ್ಮರಾಕ್ಷಸಾ ! ದ್ರಾವಿಡ ದೇಶದಲ್ಲಿ ಆಚಾರಹೀನ ಬ್ರಾಹ್ಮಣನೊಬ್ಬನಿದ್ದನು. ಶೂದ್ರ ಸ್ತ್ರೀಯಳನ್ನು ಬೆರೆತು ಅವನು ಕರ್ಮಭ್ರಷ್ಟನಾದನು. ಜಾತಿಯಿಂದ ಬಹಿಷ್ಕೃತನಾದನು. ಸಕಲ ದುಷ್ಕೃತ್ಯಗಳಿಗೆ ತೌರಮನೆಯಾದ ಆತನು ಒಂದು ಸಾರೆ ಜಾರ–ತಸ್ಕರ ಕ್ರಿಯೆ ಸಾಧ್ಯತೆಗಾಗಿ ಒಬ್ಬ ಶೂದ್ರನ ಮನೆ ಸೇರಿ ಸಿಕ್ಕುಬಿದ್ದನು. ಶೂದ್ರನು ಅವನನ್ನು ಹೊಡೆದು ಬಡಿದು ಕೊಂದುಹಾಕಿದನು ಹಾಗು ಆದೇ ರಾತ್ರಿಯಲ್ಲಿ ಆ ಪಾಪಿಯ ಹೆಣವನ್ನು ಎಳೆದೊಯ್ದು ಊರ ಅಗಸೆಯ ಮುಂದೆ ಚೆಲ್ಲಿದನು. ಶವವು ಕೊಳೆಯಿತು, ನಾಯಿ ನರಿಗಳು ಅದನ್ನು ಹರಿಹರಿದು ತಿನ್ನಹತ್ತಿದವು. ಮಸಣಮಟ್ಟಿಯ ಬೂದಿಯಲ್ಲಿ ಹೊರಳಾಡಿದ ಒಂದು ನಾಯಿಯು ಕೊಳೆತು ದುರ್ಗಂಧವಿಡಿಗಿದ ಈ ಬ್ರಾಹ್ಮಣ ಹೆಣ ತಿನ್ನಲು ಬಂದಿತು. ಅದರ ಮೇಲೆ ಹತ್ತಿ ಹರಿಹರಿದು ತಿನ್ನುವಾಗ ಆ ನಾಯಿಯ ಮೈಗೆ ಮೆತ್ತಿದ್ದ ಬೂದಿಯು ಹೆಣದ ಸರ್ವಾಂಗಕ್ಕೆ ಲೇಪಿಸಿತು. ಅಷ್ಟರಲ್ಲಿ ಯಮದೂತರು ಅಲ್ಲಿಗೆ ಬಂದು ಆ ಭ್ರಷ್ಟ ಬ್ರಾಹ್ಮಣನನ್ನು ಯಮಪುರಿಗೆ ಎಳೆದೊಯ್ಯಹತ್ತಿದರು. ಮುಂದೆ ತುಸು ವೇಳೆಯಲ್ಲಿ ಶಿವದೂತರು ಅವನನ್ನು ಕರೆದೊಯ್ಯಲು ವಿಮಾನಸಹಿತ ಬಂದರು. ಆ ಶವದ

ಸ್ವಾಮಿತ್ವದ ಬಗೆಗೆ ಶಿವದೂತ–ಯಮದೂತರಲ್ಲಿ ಕಲಹ ನಡೆಯಿತು. ಈ ಬ್ರಾಹ್ಮಣನು ಭಸ್ಮಧಾರಿಯಾದುದರಿಂದ ಇವನನ್ನು ಶಿವಲೋಕಕ್ಕೆ ಕರೆದೊಯ್ಯುವೆವೆಂದು ನುಡಿಯಲು ಯಮದೂತರು—'ಇವನು ಪಾಪಿಷ್ಠನಾದುದರಿಂದ ನರಕಕ್ಕೆ ಎಳೆದೊಯ್ಯುವೆವೆಂದು ಹೇಳಿ ಒಯ್ಯುಹತ್ತಿದರು. ಈ ಪ್ರಕಾರ ಅವರಲ್ಲಿ ದೊಡ್ಡ ಕಲಹ ನಡೆಯಿತು. ಕಡೆಗೆ ಶಿವದೂತರು ಯಮದೂತರನ್ನು ಹೊಡೆದಟ್ಟಿ ಬ್ರಾಹ್ಮಣನನ್ನು ತಮ್ಮ ಶಿವಲೋಕಕ್ಕೆ ಕರೆದೊಯ್ದರು.

ಯಮದೂತರು ಯಮನ ಮುಂದೆ ಹೋಗಿ ಶಿವದೂತರಿಂದ ತಮಗಾದ ತೊಂದರೆಯನ್ನು ದೂರಿಕೊಂಡರು. ಆಗ ಯಮನು ಉರಿದೆದ್ದು ಹೋಗಿ ಶಿವದೂತರೊಡನೆ ವಾದಿಸಿದನು. ಕಡೆಗೆ ಭಸ್ಮಧಾರಿಯಾದವನು ಶಿವಲೋಕಕ್ಕೇ ತಕ್ಕವನು ಎಂಬ ನಿರ್ಣಯವಾಗಿ ಯಮನು ಹಿಂದಿರುಗಿದನು. ಆ ಬಳಿಕ ಅವನು ತನ್ನ ಯಮದೂತರಿಗೆ— "ಸೇವಕರೆ! ಭೂಮಿಯ ಮೇಲೆ ಭಸ್ಮಾಂಕಿತರು ಯಾರಾದರು ಇದ್ದರೆ ನೀವು ಅವರನ್ನು ಮುಟ್ಟತಕ್ಕದ್ದಲ್ಲ, ಅವರಂತೆ ತ್ರಿಪುಂಡ್ರಕರು, ರುದ್ರಾಕ್ಷಧಾರಿಗಳು ಇವರಾರನ್ನೂ ನೀವು ಸ್ಪರ್ಶ ಮಾಡಬೇಡಿರಿ. ಇದರಂತೆ ನಮಗೆ ಶಿವಾಜ್ಞೆಯಾಗಿದೆ" ಎಂದು ಹೇಳಿದನು.

ವಾಮದೇವರು ಬ್ರಹ್ಮರಾಕ್ಷಸನಿಗೆ ಈ ದೃಷ್ಟಾಂತ ಕಥೆ ಹೇಳಿದರು. ರಾಕ್ಷಸವು ವಾಮದೇವರ ಆಭಾರವನ್ನಿಸಿ ಮತ್ತೆ— "ಸ್ವಾಮಿ! ನನಗೆ ಸಾವಿರ ಜನ್ಮಗಳ ಸ್ಮೃತಿಯುಂಟಾಗಿದೆ. ಒಂದು ಜನ್ಮದಲ್ಲಿ ನಾನು ರಾಜನಾಗಿದ್ದಾಗ ಎಷ್ಟೋ ಪುಣ್ಯ ಕಾರ್ಯ ಮಾಡಿದೆನು. ಆದರೂ ಈ ದುರವಸ್ಥೆ ನನಗೇಕೆ ಬಂದಿತು?" ಎಂದು ಕೇಳಲು ವಾಮದೇವರು— "ರಾಕ್ಷಸಾ! ಆ ಪುಣ್ಯವೇ ಈಗ ನಿನಗೆ ಭಸ್ಮಲೇಪನದಿಂದ ವ್ಯಕ್ತವಾ

ಯಿತು. ಈ ಭಸ್ಮಲೇಪನದಿಂದ ನೀನು ಬ್ರಹ್ಮರಾಕ್ಷಸ ಜನ್ಮದಿಂದ ನಿವೃತ್ತನಾದಿ'' ಎನ್ನಲು ಆ ಬ್ರಹ್ಮ ರಾಕ್ಷಸವು— "ಸ್ವಾಮಿ ! ಆ ಭಸ್ಮಲೇಪನದ ಮಹಿಮೆಯನ್ನೂ ವಿಧಾನವನ್ನೂ ಹೇಳಬೇಕು'' ಎಂದು ಪ್ರಾರ್ಥಿಸಿತು. ಆಗ ವಾಮದೇವರು ವಿಭೂತಿಧಾರಣದ ಬಗೆಗೆ ಶಿವನು ಇಂದ್ರಾದಿ ದೇವತೆಗಳಿಗೆ ಬೋಧಿಸಿದ ಸಂಗತಿಯನ್ನು ಹೇಳಿದರು. ಎಂತೆಂದರೆ—

"ಪೂರ್ವಕಾಲದಲ್ಲಿ ಶಿವ-ಪಾರ್ವತಿಯರು ಮಂದರಾಚಲದಲ್ಲಿ ಕುಳಿತಿದ್ದರು. ಅವರನ್ನು ಬಳಿಸಿ ಕೋಟಿ ಶಿವಗಣವು ಇದ್ದಿತು. ಆಗ ಇಂದ್ರನು ಸಕಲ ಸುರರಿಂದ ಕೂಡಿಕೊಂಡು ಶಿವದರ್ಶನಕ್ಕೆಂದು ಅಲ್ಲಿಗೆ ಬಂದನು. ಎಲ್ಲರದೊಂದು ದೊಡ್ಡ ಸಭೆಯೇ ಅಲ್ಲಿ ನೆರೆಯಿತು. ಆ ಸಭೆಯಲ್ಲಿ ದೇವತೆಗಳು, ಅಗ್ನಿ, ವರುಣ, ಕುಬೇರ, ಯಕ್ಷ, ಗಂಧರ್ವ, ಖೇಚರರು, ಪನ್ನಗರು, ವಿದ್ಯಾಧರರು, ಸಿದ್ಧರು, ಸಾಧ್ಯರು, ಕಿಂಪುರುಷರು, ಗುಹ್ಯಕರು, ಪಿತರುಗಳು, ದಕ್ಷಾದಿಬ್ರಹ್ಮರು, ಸಮಸ್ತ ಋಷಿವರ್ಗವು, ಅಪ್ಸರೆಯರು, ಶಕ್ತಿದೇವತೆಗಳು, ದ್ವಾದಶವಾರ್ಷಿಕರು, ಅಷ್ಟವಸುಗಳು, ಅಶ್ವಿನೀ ಕುಮಾರರು, ವಿಶ್ವೇದೇವರು ಇವರೆಲ್ಲ ಪರಿವಾರದೊಂದಿಗೆ ಬಂದು ಕೂಡಿದ್ದರು. ಇವರಲ್ಲದೆ ಮಹಾಂಕಾಲ, ನಂದಿಕೇಶ್ವರ, ಮಹಾನೀಲ, ಪಾರ್ಷದರು, ವೀರಭದ್ರ, ಶಂಖಕರ್ಣ, ಮಣಿಭದ್ರ, ವೃಕೋದರ, ಕುಂಡೋದರ, ಮುಂತಾದವರೂ, ರುದ್ರಗಣಗಳೂ, ತರತರದ ಸ್ವರೂಪಿನ ಶಿವಗಣವೂ ಆ ಸಭೆಯಲ್ಲಿ ಕಿಕ್ಕಿರಿದು ತುಂಬಿದ್ದರು. ಶಿವನು ತನ್ನ ಸಿಂಹಾಸನದಲ್ಲಿ ಅಧಿಷ್ಠಿತನಾಗಿದ್ದನು. ಪಾರ್ವತಿದೇವಿಯು ಅಲಂಕೃತಳಾಗಿ ಶಿವನ ಬದಿಯಲ್ಲಿ ಶೋಭಿಸುತ್ತಿದ್ದಳು. ಎಲ್ಲ ದೇವತೆಗಳು ಶಿವ-ಪಾರ್ವತಿಯರನ್ನು ವಂದಿಸಿ ಪ್ರಾರ್ಥಿಸುತ್ತಲಿದ್ದರು. ಸನತ್ಕುಮಾರಾದಿ ಋಷಿಗಳು ಆಗ ಶಿವನನ್ನು

ಕುರಿತು— "ದೇವಾ ! ತಾತ್ಕಾಲದಲ್ಲಿ ಧರ್ಮಪ್ರಾಪ್ತವಾಗುವ ಪುಣ್ಯವನ್ನು ಬೋಧಿಸಬೇಕು" ಎಂದು ಕೇಳಲು ಶಿವನು— "ಋಷಿಗಳೆ ! ವೇದಶಾಸ್ತ್ರ ಸಮ್ಮತ ಧರ್ಮವಾವುದೆಂದರೆ ತ್ರಿಪುಂಡ್ರಧಾರಣ ಹಾಗು ಭಸ್ಮಾಂಕಿತ ಇವೇ ಮಹತ್ವದವಾಗಿರುವವು'' ಎಂದು ಹೇಳಿ ಭಸ್ಮಧಾರಣ ವಿಧಿ ಮೊದಲಾದವುಗಳನ್ನು ಮಂತ್ರಪೂರ್ವಕ ವಿವರಿಸಿ ಹೇಳಿದನು. ಮತ್ತು ಭಸ್ಮಧಾರಣದಿಂದ ಅದೆಷ್ಟೋ ಪಾಪಗಳ ನಿವಾರಣೆಯಾಗುವದೆಂಬದನ್ನೂ ತಿಳಿಸಿ ಹೇಳಿದನು.

ಈ ಪ್ರಕಾರ ಶಿವನು ಸನತ್ಕುಮಾರಾದಿ ಋಷಿಗಳಿಗೆ ತ್ರಿಪುಂಡ್ರ ಮಹಿಮೆಯನ್ನು ಹೇಳಿದನು. ನಂತರ ಶಿವನು ಕೈಲಾಸಲೋಕಕ್ಕೆ ಗಮನಿಸಿದನು. ಸನತ್ಕುಮಾರರು ಬ್ರಹ್ಮಲೋಕಕ್ಕೆ ತೆರಳಿದರು.

ಈ ಪ್ರಕಾರ ವಾಮದೇವರು ಆ ಬ್ರಹ್ಮರಾಕ್ಷಸನಿಗೆ ವಿಸ್ತರಿಸಿದರು. ಮತ್ತು ಭಸ್ಮವನ್ನು ಅಭಿಮಂತ್ರಿಸಿ ಆ ರಾಕ್ಷಸನಿಗೆ ಕೊಟ್ಟರು. ಕೂಡಲೆ ಆ ಬ್ರಹ್ಮರಾಕ್ಷಸನು ತ್ರಿಪುಂಡ್ರ ಧರಿಸಿಕೊಂಡನು. ತತ್ಪರಿಣಾಮವಾಗಿ ಆಗಲೇ ಅವನು ಬ್ರಹ್ಮರಾಕ್ಷಸ ಜನ್ಮ ನೀಗಿ ದಿವ್ಯ ದೇಹಿಯಾದನು. ಬಳಿಕ ಅವನು ವಾಮದೇವ ಯೋಗಿಗಳಿಗೆ ನಮಸ್ಕರಿಸಿದನು.

ಅಷ್ಟರಲ್ಲಿಯೇ ಸ್ವರ್ಗಲೋಕದಿಂದ ಓಂದು ವಿಮಾನು ಭೂಮಿಗೆ ಇಳಿದು ಬಂದಿತು. ವಾಮದೇವ ಮುನಿಯು ಆ ದಿವ್ಯ ದೇಹಿಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಪರಲೋಕಕ್ಕೆ ಕರೆದೊಯ್ದನು.

ವಾಮದೇವನು ಮನುಷ್ಯನಂತೆ ಕಂಡರೂ ಅವನು ಮಹಾದೇವನು. ಭವವನ್ನು ಉದ್ಧರಿಸುವದಕ್ಕಾಗಿ ಜಗತ್ತಿನಲ್ಲಿ ಸಂಚರಿಸುತ್ತಿರುವನು. ತ್ರಿಮೂರ್ತಿಯ ಅವತಾರಿಕ ಸರ್ವೇಶ್ವರನೇ ವಾಮದೇವನು.

ಭಸ್ಮ ಮಹಾತ್ಮ್ಯವು ಹೆಚ್ಚಿನದು. ಗುರುಹಸ್ತದಿಂದ ಭಸ್ಮಲೇಪನವಾದೊಡನೆ ಬ್ರಹ್ಮರಾಕ್ಷಸನ ಉದ್ಧಾರವಾಯಿತು !

ಈ ಪ್ರಕಾರ ಶ್ರೀ ಗುರುಗಳು ತ್ರಿವಿಕ್ರಮ ಭಾರತಿಗೆ ಬೋಧಿಸಿದರು. ಬಳಿಕ ಅವನು ಗುರುಗಳಿಗೆ ವಂದಿಸಿ ತನ್ನ ಸ್ಥಾನವಾದ ಕುಮಸೀ ಗ್ರಾಮಕ್ಕೆ ಹೋದನು.

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೩೦ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು–– "ಸ್ವಾಮಿ ! ಶ್ರೀ ಗುರುಗಳು ತ್ರಿವಿಕ್ರಮ ಭಾರತಿ ಯತಿಗೆ ಜ್ಞಾನ ಬೋಧೆ ಮಾಡಿ ಕಳಿಸಿದರು. ತರುವಾಯ ವರ್ತಿಸಿದ ಕಥೆಯನ್ನು ಹೇಳುವದಾಗಬೇಕು'' ಎನ್ನಲು ಸಿದ್ಧಮುನಿಯು ಶ್ರೀ ಗುರು ಚರಿತ್ರೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ––

"ನಾಮಧಾರಕ ! ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ವರ್ತಿಸಿದ ಅಪೂರ್ವ ಸಂಗತಿಯನ್ನು ಹೇಳುವೆನು ಕೇಳು. ಉತ್ತರ ದೇಶದಲ್ಲಿ ಮಾಹುರ ಎಂಬ ಗ್ರಾಮದಲ್ಲಿ ಒಬ್ಬ ಸಿರಿವಂತ ಬ್ರಾಹ್ಮಣನಿದ್ದನು. ಅವನಿಗೆ ಗೋಪೀನಾಥ ಎಂಬ ಹೆಸರಿದ್ದಿತು. ಅವನಿಗೆ ಮೊದಲು ಹುಟ್ಟಿದ ಮಕ್ಕಳೆಲ್ಲವು ಜನ್ಮಿಸಿ

ದಾಗಲೇ ಸತ್ತು ಸತ್ತು ಹೋದವು. ಅದಕ್ಕಾಗಿ ಅವನು ತನ್ನ ಸತಿಯೊಡನೆ ಶ್ರೀ ದತ್ತಾತ್ರೇಯನ್ನು ಆರಾಧಿಸಿದನು. ತತ್ಫಲದಿಂದ ಆ ದಂಪತಿಗಳಿಂದ ಒಂದು ಗಂಡು ಮಗುವು ಜನಿಸಿತು. ಬದುಕಿತು. ಅವರು ಶ್ರೀ ದತ್ತನ ಕೃಪೆಯಿಂದ ಲಭಿಸಿದ ಆ ಮಗುವಿಗೆ 'ದತ್ತ' ಎಂದೇ ನಾಮಕರಣ ಮಾಡಿದರು.

ದತ್ತನು ತಾಯಿ-ತಂದೆಗಳ ರಕ್ಷಣೆಯಿಂದ ಬೆಳೆದು ಐದು ವರ್ಷದ ಬಾಲಕನಾದನು. ಏಕಪುತ್ರ ವಿಷಯುವಾದುದರಿಂದ ಆ ಬಾಲಕನ ಪಾಲನೆ-ಪೋಷಣೆಗಳಲ್ಲಿ ತಾಯಿ ತಂದೆಗಳು ಬಹು ದಕ್ಷತೆ ವಹಿಸಿದರು. ಅಕ್ಕರತೆಯಿಂದ ಬೆಳೆಯಿಸಿದ ಆ ಬಾಲಕನ ವ್ರತಬಂಧ ಸಂಸ್ಕಾರವನ್ನು ವೈಭವದಿಂದ ಮಾಡಿದರು. ಮುಂದೆ ದತ್ತನು ಹನ್ನೆರಡು ವರ್ಷದ ವಯದವನಾಗಲು ತಾಯಿ-ತಂದೆಗಳು ಯೋಗ್ಯ ಮನೆತನದಲ್ಲಿ ದತ್ತನಿಗೆ ತಕ್ಕ ಕನ್ನೆಯನ್ನು ಗೊತ್ತುಮಾಡಿ ಲಗ್ನಮಾಡಿಯೇ ಬಿಟ್ಟರು. ಈ ನೂತನ ಬಾಲದಂಪತಿಗಳು ಚೆಲುವಿಕೆಯಲ್ಲಿ ರತಿ-ಕಾಮರಂತೆ ಶೋಭಿಸುತ್ತಿದ್ದರು. ಇಬ್ಬರು ಒಂದೇ ಕಡೆಯಲ್ಲಿದ್ದುಕೊಂಡು ಬೆಳೆಯಹತ್ತಿದರು. ಸ್ವಲ್ಪ ಹೆಚ್ಚು ಕಡಿಮೆ ಓರಿಗೆಯವರಾದ ಆ ಹುಡುಗರು ದಾಂಪತ್ಯಭಾವದಲ್ಲಿಯೇ ಪ್ರೌಢಾವಸ್ಥೆಯ ದ್ವಾರಕ್ಕೆ ಬಂದು ಮುಟ್ಟಿದರು. ಈ ಗಂಡ ಹೆಂಡಿರು ಅನ್ಯೋನ್ಯ ಬಲು ಜೀವ, ಅತ್ಯಂತ ಪ್ರೀತಿ. ಸಹಜ ಪ್ರೇಮ ಪಾಶವು ಆ ಸತಿ ಪತಿಯರನ್ನು ಬಿಗಿಯಾಗಿ ಬಂಧಿಸಿತು. ಹೀಗೆ ದತ್ತ ಹಾಗು ಅವನ ಸತಿ ಸಾವಿತ್ರಿಯು ಸಮನ್ವಯವಾಗಿ ಕೆಲ ಕಾಲ ಕಳೆಯಲು ದತ್ತನಿಗೆ ದೀರ್ಘಕಾಲದ ಬೇನೆಯು ಆವರಿಸಿತು. ಅನೇಕ ಪ್ರಕಾರದಿಂದ ಅವನ ರೋಗ ನಿವಾರಣೆಗೆ ಔಷಧ ಪಥ್ಯೋಪಚಾರ ನಡೆದವು. ಒಂದೇಸವನೆ ಮೂರು ವರುಷಗಳವರೆಗೂ ಆರೈಕೆ ನಡೆಯಿತು. ಅವನಿಗೆ ಆರೋಗ್ಯ ಲಭಿಸಲಿಲ್ಲ. ಅವನಿಗೆ ಅನ್ನವು ರುಚಿಸದಾಯಿತು.

ಉಪವಾಸನಾಗಿಯೇ ಬಿದ್ದುಬಿಟ್ಟನು. ಅವನೊಡನೆ ಅವನ ಸತಿಯೂ ಕೂಡ ತಾನೂ ಅನ್ನ ಸ್ವೀಕರಿಸ ದಾದಳು. ಅವನು ಉಂಡರೆ ತಾನು ಉಣ್ಣುವಳು. ಅವನು ಸ್ವೀಕರಿಸಿದಷ್ಟೇ ತಾನು ಸ್ವೀಕರಿಸುತ್ತಿದ್ದಳು. ತನ್ನ ಪತಿಯು ಕಷ್ಟದೊಡನೆ ತಾನು ಕಷ್ಟಪಡುವ ಆ ದತ್ತನ ಸತಿ ಸಾವಿತ್ರಿಯು ನಿಜಕ್ಕೂ ಪತಿವ್ರತೆಯು. ಬರಬರುತ್ತ ದತ್ತನ ದೇಹ ಕ್ಷೀಣವಾಗಹತ್ತಿತು, ದುರ್ಗಂಧವಿಡಗಿತು, ವೈದ್ಯರೂ ಇತರರೂ ಆ ರೋಗಿಯ ಸನಿಹಕ್ಕೆ ಹೋಗದಾದರು. ಹೆಂಡತಿಯು ತಾನೇ ಅವನಿಗೆ ಔಷಧ-ಪಥ್ಯೆ-ಆರೈಕೆಯನ್ನು ಪರೋಪರಿಯಿಂದ ಮಾಡಹತ್ತಿದಳು. ಆದರೂ ಉಪಯೋಗವಾಗದಂತಾಯಿತು, ದತ್ತನ ತಾಯಿ--ತಂದೆಗಳ ಸಂತಾಪ ಮಿಕ್ಕಿತು. ದತ್ತನ ಅತ್ತೆ-ಮಾವಂದಿರೂ ಬಂದು ಅಳಿಯನ ಸ್ಥಿತಿ ನೋಡಿ ಹೌಹಾರಿದರು, ದತ್ತನ ಹೆಂಡತಿ ಸಾವಿತ್ರಿಯು ಪತಿಯ ಶುಶ್ರೂಷೆ ಮಾಡುವದನ್ನು ಕಂಡು ಎಲ್ಲರೂ ಬೆರಳು ಕಚ್ಚಿದರು, 'ದತ್ತನ ರೋಗವು ದುರ್ಧರವೂ ಸಾಂಕ್ರಾಮಿಕವೂ ಹಾಗು ಪ್ರಾಣನಾಶಕವೂ ಆಗಿರುವದರಿಂದ ಇನ್ನು ನೀನು ಪತಿಯು ಬದಕುವ ಆಸೆಬಿಡು, ಇತ್ಯಾದಿ ಅನೇಕರು ಆಕೆಗೆ ಹೇಳಿದರೂ ಆಕೆ ಅವರ ಹೇಳಿಕೆಯನ್ನು ಲಕ್ಷಿಸಲಿಲ್ಲ. ಪತಿ ಸೇವೆ--ಶುಶ್ರೂಷೆಗಳಿಂದ ಅಂತರಿಸಲಿಲ್ಲ. ದತ್ತನ ಹಾಗು ಆಕೆಯ ತಾಯಿ ತಂದೆಗಳು ದತ್ತನಿಗೆ ಆರೋಗ್ಯಲಭಿಸಲೆಂಬ ಆಸೆಯಿಂದ ದೇವತೋಪಾಸನೆ, ದಾನ ಧರ್ಮ, ಯಂತ್ರ-ಮಂತ್ರ--ತಾಯಿತ ಮುಂತಾದವುಗಳನ್ನೆಲ್ಲ ಅವಲಂಬಿಸಿ ವಿಪುಲ ದ್ರವ್ಯ ವೆಚ್ಚ ಮಾಡಿದರು, ನಾಮಾಂಕಿತ ವೈದ್ಯರನ್ನು ಕರೆಯಿಸಿ ಚಿಕಿತ್ಸೆ, ಔಷಧ ಯೋಜನೆ ಮಾಡಿಸಿದರು. ವೈದ್ಯರು ಪ್ರಯತ್ನಿಸಿ ನಿಷ್ಫಲತೆ ಹೊಂದಿದರು, ಅವರು 'ಈ ದತ್ತನು ಗುಣವಾಗುವದಕ್ಕೆ ಇನ್ನು ಈಶ ಯತ್ನವೇ ಹೊರತು ಅವಾಪ ಮಾನವನಿಂದ ಸಾಧ್ಯವಿಲ್ಲ' ಎಂದು ಸ್ಪಷ್ಟ ಅಭಿ

ಪ್ರಾಯ ತಿಳಿಸಿದನು, ಅದನ್ನು ಕೇಳಿಯಂತೂ ದತ್ತನ ಹಾಗು ಅವನ ಹೆಂಡತಿ ಸಾವಿತ್ರಿಯ ತಾಯಿ ತಂದೆಗಳ ಸಂತಾಪವು ಶೋಕ ಸ್ವರೂಪ ಹೊಂದಿತು, ಸಾವಿತ್ರಿಯು ಇದಾವದನ್ನೂ ಲೆಕ್ಕಿಸದೆ ಸದಾ ಪತಿಯ ಸನ್ನಿಧಿಯಲ್ಲಿದ್ದುಕೊಂಡೇ ಅವನ ಆರೋಗ್ಯ ಚಿಂತಿಸುತ್ತಿದ್ದಳು. ಈ ರೀತಿಯಿಂದ ಆಕೆ ಇರುತ್ತಿರಲು ಮುಂದೆ ಒಂದೆರಡೇ ದಿನಗಳಲ್ಲಿ ಅವನಿಗೆ ಅನ್ನವೇಕೆ? ನೀರು ಸಹ ಗಂಟಲಿಗಿಳಿಯದಾಯಿತು, ಹಾಕಿದ ಔಷಧ ಹಿಂತಿರುಗಹತ್ತಿತು. ಆಗ ದತ್ತನು ತನ್ನ ಹೆಂಡತಿಯನ್ನು ನೋಡಿ ಕರಳು ಕೊರೆಯುವ ನುಡಿಗಳನ್ನಾಡಿದನು, ಹಾಗು ಇನ್ನು ನನ್ನ ಬದುಕುವಿಕೆಯ ಆಸೆ ಬೇಡ' ಎಂದು ಹೇಳಿದನು, ಇದರಿಂದ ಆಕೆಗೆ ಅತ್ಯಂತ ಕಸವಿಸಿಯಾಯಿತು. ಆದರೂ ಅದನ್ನು ಧೈರ್ಯದಿಂದ ನುಂಗಿ ಅವನೊಡನೆ ಧೈರ್ಯದ ನುಡಿಯಾಡಿದಳು, ಅಷ್ಟರಲ್ಲಿ ಆಕೆಯಲ್ಲಿ ಒಂದು ಭಾವಿಕ ವಿಚಾರ ಸುಳಿದು ಅದು ಆಕೆಯನ್ನು ಇನ್ನಿಷ್ಟು ಆ ಕಾರ್ಯಕ್ಕೆ ಪ್ರಚೋದಿಸಿತು. ಅವಳು ತನ್ನಲ್ಲಿ— "ಈ ನನ್ನ ಪತಿಯನ್ನು ನನ್ನ ಅತ್ತೆ ಮಾವಂದಿರು ದತ್ತಾತ್ರೇಯನ ಆರಾಧನೆ ಮಾಡಿ ಹಡೆದಿರುವರಂತೆ, ನಾನಾದರೂ ಶ್ರೀ ದತ್ತನ ಮೇಲೆ ನನ್ನ ಪತಿಯ ಆರೋಗ್ಯದ ಭಾರ ಚೆಲ್ಲಿ ನನ್ನ ಸೌಭಾಗ್ಯವನ್ನು ರಕ್ಷಿಸಿಕೊಳ್ಳುವೆನು. ಗಾಣಗಾಪುರವು ದತ್ತನ ಸ್ಥಾನವೆನ್ನಿಸಿದೆ, ಅಲ್ಲಿ 'ನೃಸಿಂಹ ಸರಸ್ವತಿ' ಗುರುಗಳು ವಾಸನಾಗಿರುವರಂತೆ, ಈಗಲೇ ಈ ನನ್ನ ಪತಿಯನ್ನು ಅಲ್ಲಿ ಕರೆದೊಯ್ಯಲು ನಿಶ್ಚಯವಾಗಿಯೂ ನನ್ನ ಪತಿಯು ಗುಣಮುಖ ಹೊಂದುವನು." ಇದೇ ವಿಚಾರವು ಆಕೆಯಲ್ಲಿ ಹುಟ್ಟಿತು. ಆಗಲೇ ಅವಳು ತನ್ನ ಅತ್ತೆ ಮಾವಂದಿರರಿಗೆ ತನ್ನ ವಿಚಾರ ತಿಳಿಸಿದಳು, ಹಾಗು ತನಗೆ ಗಾಣಗಾಪುರಕ್ಕೆ ಹೋಗಲು ಸಿದ್ಧತೆ ಮಾಡಿಕೊಡಲಿಕ್ಕೇಬೇಕು" ಎಂದು ಬೇಡಿಕೊಂಡಳು, ಗೋಪೀನಾಥ ಹಾಗು ಅವನ ಹೆಂಡತಿ

ಇವರು ದತ್ತಾತ್ರೇಯನ ನಿಸ್ಸೀಮ ಭಕ್ತರು. ತಮ್ಮ ಸೊಸೆಯ ವಿಚಾರವು ಅವರಿಗೆ ಒಪ್ಪಿತವಾಯಿತು, ಅವರು ಇನ್ನೊಂದು ಮಾತಾಡದೆ ದತ್ತನನ್ನು ಗಾಣಗಾಪುರಕ್ಕೆ ಕಳಿಸಿಕೊಡುವದಕ್ಕೆ ಡೋಲಿ ಹಾಗು ವಾಹಕರನ್ನು ಸಿದ್ಧಮಾಡಿ ಸೊಸೆಗೆ ಅಪ್ಪಣೆ ಕೊಟ್ಟರು.

ದತ್ತರ ಪತ್ನಿಗೀಗ ಬಲು ಹರುಷ ! ಗಾಣಗಾಪುರಕ್ಕೆ ತನ್ನ ಗಂಡನನ್ನು ಕರೆದೊಯ್ದು ಅವನನ್ನು ರೋಗದಿಂದ ಮುಕ್ತನನ್ನಾಗಿ ಮಾಡಿಕೊಂಡೇ ಬರುವೆನೆಂದು ಆಕೆಯ ವಿಶ್ವಾಸ, ಹಾಗು ಭರವಸೆ ! ಕೂಡಲೆ ಅವಳು ತನ್ನ ಗಂಡನನ್ನು ಡೋಲಿಯಲ್ಲಿ ಮಲಗಿಸಿ ಆಳುಗಳಿಂದ ಅದನ್ನು ಹೊರಿಸಿಕೊಂಡು ಗಾಣಗಾಪುರದ ಮಾರ್ಗದಿಂದ ನಡೆದಳು. ಅಲ್ಲಲ್ಲಿಗೆ ಪತಿಯ ಮುಖ ನಿರೀಕ್ಷಿಸುತ್ತ ಅವನಿಗೆ ಧೈರ್ಯ ಕೊಡುತ್ತ ಭರಭರನೆ ಸಾಗಿ ಗಾಣಗಾಪುರಕ್ಕೆ ಪ್ರವೇಶಮಾಡಿದಳು, ಪತಿಯ ಮುಖ ನಿರೀಕ್ಷಿಸಿದಳು, ಸ್ವಾಮಿಗಳ ಸ್ಥಾನವೆಲ್ಲಿ? ಎಂದು ಅಲ್ಲಿಯವರನ್ನು ಕೇಳಿದಳು. 'ಅವರು ಸಂಗಮದಲ್ಲಿರುವರು' ಎಂದು ಕೇಳಿಕೊಂಡಳು, ಇನ್ನು ಸಂಗಮಕ್ಕೇ ಹೋಗಿಬಿಡಬೇಕೆಂದ. ನಿರ್ಧರಿಸಿ ಅವಳು ಡೋಲಿಯ ಹತ್ತರ ಬಂದಳು. ಅದರ ಮುಸುಕು ಓರೆ ಮಾಡಿ ಪತಿಯ ಮುಖ ನೋಡುವಷ್ಟರಲ್ಲಿಯೇ ಅವನ ಪ್ರಾಣಪಕ್ಷಿಯು ಹಾರಿಹೋಗಿತ್ತು. ಸತಿಯು ನೋಡಿದಳು, ಹೌಹಾರಿದಳು, ಎದೆ ಎದೆ ಬಡಿದುಕೊಂಡಳು, ಅನೇಕ ಸಂಗತಿಗಳನ್ನು ನೆನಪಿಗೆ ತಂದುಕೊಂಡು ಉಚ್ಚರಿಸಿ ಅಳಹತ್ತಿದಳು. ಆಕೆಯ ಸಂತಾಪ ನೋಡಿ ಆ ಊರಿನ ನರ ನಾರಿಯರು ಅಲ್ಲಿ ಕೂಡಿದರು, ಆಕೆಯ ಸಂತಪ್ತ ಹೃದಯದಿಂದ ಹೊರಟ ಕೋಲಾಹಲ ಉಚ್ಚಾರಣೆಗಳು ಅಲ್ಲಿ ನೆರೆದವರೆಲ್ಲರ ಅಂತಃಕರಣಗಳನ್ನು ಕದಡಿಸಿ ಅವರ ಕಣ್ಣೀರು ಸುರಿಸಹತ್ತಿದವು, ಹೆಚ್ಚುತ್ತ ನಡೆದಿರುವ ಶೋಕಭಾರ ಕಡಿಮೆ

ಮಾಡುವದಕ್ಕಾಗಿ ಎಲ್ಲರೂ ಕಳಕಳಿಯಿಂದ ಆಕೆಯನ್ನು ಸಾಂತ್ವನಪಡಿಸಲು ಯತ್ನಿಸಿದರು. ಆದರೆ ಅದರಿಂದೇನೂ ಉಪಯೋಗವಾಗಲಿಲ್ಲ. ಆಕೆಯ ಒಡಲುರಿ ಹೆಚ್ಚಾಯಿತು, ಶೋಕವಿಮ್ಮಡಿಸಿತು. ಅಷ್ಟರಲ್ಲಿ ಕೂಡಿದ ಜನಜಂಗುಳಿಯೊಳಗೆ ಹಾಯ್ದು ಒಬ್ಬ ಸಿದ್ಧಮುನಿಯು ಆಕೆಯ ಮುಂದೆ ಬಂದು ನಿಂತನು. ಆತನ ಭಸ್ಮಾಂಕಿತ ದೇಹವನ್ನೂ ಜಡೆಯನ್ನೂ ರುದ್ರಾಕ್ಷಿ ಹಾಗು ತ್ರಿಶೂಲಗಳನ್ನೂ ನೋಡಿ ಒಮ್ಮೆಲೆ ಆಕೆಯ ಅಳುವಿಕೆ ನಿಂತಿತು. ಹಾಗು ಅವಳು ಹೃದಯದಿಂದ ಆ ಸಾಧುವಿನ ಮುಖ ನಿರೀಕ್ಷಿಸುತ್ತಿರುವಾಗಲೇ ಆತನು— "ಮಾನಿನಿ ! ಇದೇಕೆ ಅಳುವಿ? ವಿಧಿಲಿಖಿತದಂತೆ ಎಲ್ಲ ವರ್ತಿಸುವದು, ದೇಹವು ಪೂರ್ವಜನ್ಮದ ಫಲಭೋಗಿಯು, ಎಷ್ಟೊಂದು ನೀನು ರೊದಿಸಿದರೂ ಈ ಶವವು ಸಜೀವಗೊಳ್ಳದು, ಎಲ್ಲರಿಗೂ ಸಾವು ಇದ್ದಷ್ಟೇ, ಇವನೆಲ್ಲಿ ಹುಟ್ಟಿದನು? ನೀನೆಲ್ಲಿ ಹುಟ್ಟಿದಿ? ಮಹಾಪೂರಿನಲ್ಲಿ ತೇಲಿ ಬಂದ ಕಟ್ಟಿಗೆಗಳಂತೆ ಕೂಡಿದ್ದಿರಿ. ಈಗ ಅವುಗಳಂತೆ ಅಗಲಿವಿರಿ. ದೇಹವು ಸ್ಥಿರವಲ್ಲ, ಇದು ಪಂಚಭೂತಾತ್ಮಕವು, ಅವಕ್ಕೆ ಸಂಬಂಧಿಸಿ ಗುಣಗಳು ಇದಕ್ಕಿರುವವು, ಆ ಗುಣಗಳು ಕರ್ಮಕ್ಕನುಸರಿಸಿ ಹುಟ್ಟುವವು; ಎಲ್ಲವೂ ಮಾಯೆಗೆ ಸಂಬಂಧಿಸಿರುವವು. ಸುಖ ದುಃಖಗಳು ಗುಣಗಳಿಗೆ ಸಂಬಂಧಿಸಿರುವವು, ದೇವತೆಗಳಿಗೆ ಕಲ್ಪಕೋಟಿ ಆಯುಷ್ಯವಿದ್ದರೂ ಅವರಿಗೂ ಕಾಲ ತಪ್ಪಿದಲ್ಲ. ಮಾನವನ ಪಾಡೇನು? ಹುಟ್ಟಿದರೆ ಸಂತೋಷ ! ಸತ್ತರೆ ದುಃಖ. ಹೀಗೇಕೆ? ಸಂಸಾರವು ಸ್ವಪ್ನದಂತಿರುವದು, ಶರೀರವು ಕಶ್ಮಲಯುಕ್ತವು. ಇದಕ್ಕಾಗಿ ಶೋಕಿಸಬೇಕೇ? ನಿನ್ನ ಮುಂದಿನ ವಿಚಾರ ತಿಳಿದುಕೊಳ್ಳು, ಸಂಸಾರ ಸಾಗರ ದಾಟುವ ಮಾರ್ಗ ಶೋಧಿಸು" ಈ ಪ್ರಕಾರ ಆ ತಪಸ್ವಿಯು ಆಕೆಗೆ ಬೋಧಿಸಲು ಆಕೆಯಲ್ಲಿ ಜ್ಞಾನೋದಯವಾಯಿತು. ಅವಳು— ಸ್ವಾಮಿ !

ನಾನು ಇನ್ನು ಅದಾವ ಮಾರ್ಗ ಹಿಡಿಯಬೇಕು?" ಎಂದು ಕೇಳಲು ಆ ಯೋಗಿಯು ಸಂತೋಷಬಟ್ಟು ಆಕೆಗೆ ಪ್ರಸನ್ನನ್ನಾಗಿ ಆಚಾರಧರ್ಮ ಬೋಧಿಸಹತ್ತಿದನು

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೩೧ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಯೋಗೇಶ್ವರರು ಮೃತನಾದ ದತ್ತನ ಸತಿ ಸಾವಿತ್ರಿಯನ್ನು ಉದ್ದೇಶಿಸಿ ಅವಳಿಗೆ ಆಚಾರ ಧರ್ಮವನ್ನು ಹೇಳಹತ್ತಿದರು. ಎಂತೆಂದರೆ—

"ಮಾನಿನಿ ! ಈ ಭವಸಾಗರ ದಾಟುವದಕ್ಕೆ ಆಚಾರ ಧರ್ಮವು ಶ್ರೇಷ್ಠ ಸಾಧನವು. ಪತಿಯು ಜೀವಿಸಿರುವಾಗಲೂ ಅಥವಾ ಅವನು ಮರಣಹೊಂದಿದವೇಲೂ ಆಕೆಯು ಅನುಸರಿಸುವ ಆಚಾರಗಳು ಕಥೆಯ ರೂಪದಿಂದ ಸ್ಕಂದ ಪುರಾಣಾಂತರ್ಗತ ಕಾಶೀಖಂಡದಲ್ಲಿ ವಿಸ್ತೃತನಾಗಿರುವದು. ಅದರಲ್ಲಿಯ ಸ್ತ್ರೀಧರ್ಮಗಳನ್ನು ಹೇಳುವೆನು ಕೇಳು.

"ಕಾಶೀಕ್ಷೇತ್ರದಲ್ಲಿ ಪ್ರಸಿದ್ಧ ಅಗಸ್ತ್ಯ ಋಷಿಗಳಿದ್ದರು. ಲೋಪಾಮುದ್ರೆಯು ಅವರ ಸತಿಯು. ಆ ಋಷಿ ಪತಿ ಪತ್ನಿಯರಿಬ್ಬರೂ ಮಹಾಜ್ಞಾನಿಗಳು. ವಿಂಧ್ಯಾಚಲನೆಂಬುವನು ಆ ಅಗಸ್ತ್ಯರ ಶಿಷ್ಯನು.

ಒಂದು ದಿನ ನಾರದರು ಸಂಚಾರ ಮಾಡುತ್ತ ವಿಂಧ್ಯನಿರುವ ಸ್ಥಾನಕ್ಕೆ ಹೋದರು. ವಿಂಧ್ಯನು ನಾರದರನ್ನು ಸ್ವಾಗತಿಸಿ ಪರಾಮರಿಕೆ ಮಾಡಿದನು. ನಾರದರು ಸಂತುಷ್ಟತೆ ಬೀರುತ್ತ— "ವಿಂಧ್ಯ ! ನೀನು ಎಲ್ಲ ಗಿರಿಗಳಲ್ಲಿಯೂ ಶ್ರೇಷ್ಠನು, ಆದರೂ ಉನ್ನತಿಯ ದೃಷ್ಟಿಯಿಂದ ಮೇರುಗಿರಿಗೆ ನೀನು ಸರಿಯಲ್ಲವೆಂದು ಎಲ್ಲರೂ ಮಾತಾಡುವರು" ಎಂದು ನುಡಿದನು. ಕೂಡಲೆ ವಿಂಧ್ಯನು ಸಿಟ್ಟಿನಿಂದ ಒಂದೇಸವನೆ ಮೇಲಕ್ಕೆ ಬೆಳೆಯಹತ್ತಿದನು. 'ನಾರದರೆ ! ನೋಡಿ. ನೋಡಿರಿ' ಎನ್ನುವನು. ಮತ್ತೆ ಬೆಳೆಯುವನು, ನಾರದರು— 'ಬೆಳೆ, ಬೆಳೆ. ಇನ್ನಿಷ್ಟು ಬೆಳೆ' ಎನ್ನುವರು. ಹೀಗಾಗಿ ಆ ವಿಂಧ್ಯನು ಸೂರ್ಯಮಂಡಲಕ್ಕೆ ತಲುಪುವವರೆಗೂ ಬೆಳೆದನು, ಮತ್ತೂ ಬೆಳೆದು ಸ್ವರ್ಗ ಭುವನಕ್ಕೆ ತನ್ನ ನತ:ನೆತ್ತಿಯನ್ನು ಹತ್ತಿಸಿಕೊಂಡು ನಿಂತನು. ನಾರದರು ನೋಡಿ ಆನಂದ ಹೊಂದಿ ಹಿಂದಿರುಗಿದರು.

ವಿಂಧ್ಯನ ಉನ್ನತ ಸಾಹಸದಿಂದ ದಾಕ್ಷಿಣಾತ್ಯರು ಘೋರ ಸಂಕಟಕ್ಕೀಡಾದರು. ಸೂರ್ಯ ದರ್ಶನವಿಲ್ಲ, ಯಜ್ಞಾದಿ ಕರ್ಮ ಕಟ್ಟಾದವು. ಆಗ ಋಷಿಗಳೆಲ್ಲ ಕೂಡಿಕೊಂಡು ಇಂದ್ರನ ಬಳಿಗೆ ಹೋಗಿ ಮೊರೆಯಿಟ್ಟರು. ವಿಂಧ್ಯನು ತೊಂದರೆಯನ್ನು ತಿಳಿಸಿದನು. ಅದನ್ನು ಕೇಳಿ ಇಂದ್ರನಿಗೆ ಕೋಪ ಹೆಚ್ಚಿತು. ಅವನು ಬ್ರಹ್ಮನಿಗೆ ಈ ವಾರ್ತೆ ತಿಳಿಸಿದನು. ವಿಂಧ್ಯನ ಗರ್ವ ಖಂಡಿಸುವ ಉಪಾಯವನ್ನು ಆತನು ಅರಿತು ಆಗಲೇ ಅವರಿಬ್ಬರು ಭೂಲೋಕಕ್ಕೆ ಬಂದರು. ಕಾಶಿಯಲ್ಲಿ ವಾಸವಾಗಿದ್ದ ಅಗಸ್ತ್ಯನನ್ನು ಕಂಡರು. ನಿಜ ವಾರ್ತೆಯನ್ನು ಅವನಿಗೆ ಹೇಳಿ ಅವನನ್ನು ದಕ್ಷಿಣ ದಿಶೆಗೆ ಹೋಗುವಂತೆ ಪ್ರಚೋದಿಸಿದರು. ಬ್ರಹ್ಮೇಂದ್ರರ ಸೂಚನೆಯಂತೆ ಅಗಸ್ತ್ಯನು ದಕ್ಷಿಣಕ್ಕೆ ಹೊರಟನು. ವಿಂಧ್ಯನು ನಿಂತಿರುವ ಪ್ರದೇಶಕ್ಕೆ ಬಂದನು.

ವಿಂಧ್ಯನು ಅಗಸ್ತ್ಯನ ಕೇವಲ ಶಿಷ್ಯನು. ಒಂದೇ ಗುಟುಕಿನಿಂದ ಸಮುದ್ರ ಪ್ರಾಶನ ಮಾಡಿದ ಅಗಸ್ತ್ಯನ ಪ್ರಭಾವವನ್ನು ಕಂಡು ಅವನೂ ಹೆದರಿದ್ದನು. ಹಾಗು ಅವನನ್ನು ತನ್ನ ಗುರುವೆಂದು ನಂಬಿದ್ದನು. ತನ್ನ ಗುರು ಅಗಸ್ತ್ಯನು ಬರುತ್ತಿರುವದನ್ನು ದೂರಿನಿಂದಲೇ ಕಂಡು ಒಮ್ಮೆಲೇ ತಾನು ಸಾಷ್ಟಾಂಗ ವಂದಿಸಿದನು. ಅಗಸ್ತ್ಯನು— "ಶಿಷ್ಯ ವಿಂಧ್ಯನೆ ! ನಾನು ದಕ್ಷಿಣಕ್ಕೆ ಹೋಗುವದು ಅವಶ್ಯವಿದೆ. ನಾನು ಹಿಂದಿರುಗಿ ಬರುವ ಮಾರ್ಗ ನಿರೀಕ್ಷಿಸುತ್ತಲಿರು" ಎಂದು ಅಪ್ಪಣೆ ಕೊಟ್ಟು ಆಶೀರ್ವದಿಸದೆ ಹಾಗೇ ದಕ್ಷಿಣಕ್ಕೆ ಹೋದನು. ಅಂದಿನಿಂದ ಶಿರಬಾಗಿದ ವಿಂಧ್ಯನು ಅದೇ ಸ್ಥಿತಿಯಲ್ಲಿ ಉಳಿದನು 'ಸೂರ್ಯಾದಿಗಳಿಗೂ ದಾಕ್ಷಿಣಾತ್ಯರಿಗೂ ಉಂಟಾದ ತೊಂದರೆಯು ಈ ಪ್ರಕಾರ ಅಗಸ್ತ್ಯರಿಂದ ನಿವಾರಣೆಯಾಯಿತು.

ಬ್ರಹ್ಮೇಂದ್ರರೊಡನೆ ಗುರುಬೃಹಸ್ಪತಿಯೂ ಸಕಲ ದೇವಋಷಿಗಳೂ ಅಗಸ್ತ್ಯಾಶ್ರಮಕ್ಕೆ ಬಂದಿದ್ದರು. ಅವರೆಲ್ಲರು ಋಷಿದಂಪತಿಗಳಿಂದ ಒಳ್ಳೆ ಸತ್ಕಾರ ಹೊಂದಿದರು. ಅಗಸ್ತ್ಯಪತ್ನಿ ಲೋಪಾಮುದ್ರೆಯ ಸತೀತ್ವವನ್ನು ಕಂಡು ಅವರೆಲ್ಲರು ಬೆರಗಾದರು. ಬೃಹಸ್ಪತಿಯಂತೂ ಆ ಲೋಪಾಮುದ್ರೆಯನ್ನು ಕೊಂಡಾಡಿ ಆಕೆಯ ಪಾತಿವ್ರತ್ಯದ ಮಹಿಮೆಯನ್ನು ದೇವಋಷಿಗಳಿಗೆ ಅರುಹಿದರು. ಎಂತೆಂದರೆ—

"ದೇವ-ಋಷಿಗಳೆ ! ಅಗಸ್ತ್ಯಪತ್ನಿ ಈ ಲೋಪಾಮುದ್ರೆಯಂಥ ಹದಿಬದೆಯರು ಈ ಮೊದಲು ಯಾರೂ ಆಗಿರಲಿಲ್ಲ. ಈ ಮಹಾಸತಿಯು ಅರುಂಧತಿ, ಸಾವಿತ್ರಿ, ಅನಸೂಯೆ, ಶಾಂಡಿಲ್ಯಪತ್ನಿ, ಹರಿ-ಹರ-ಬ್ರಹ್ಮರ ಹೆಂಡಂದಿರು, ಹಿಮಾಲಯನ ಪತ್ನಿ ಮೇನಕೆ, ಧ್ರುವನ ತಾಯಿ ಸುನೀತೆ, ರವಿಪತ್ನಿ ಸಂಜ್ಞೆ, ಅಗ್ನಿಸತಿ ಸ್ವಾಹಾ, ಇವರೆಲ್ಲರು ಪತಿವ್ರತೆಯರು. ಇವರಿಗಿಂತಲೂ ಈ ಲೋಪಾಮುದ್ರೆಯು ಶ್ರೇಷ್ಠ ಸಾಧ್ವಿಯು.

ಈಕೆಯಲ್ಲಿಯ ಪತಿವ್ರತೆಯ ಲಕ್ಷಣಗಳು ಎಂತಿರುವವೆಂದರೆ—

ಪತಿಯ ಭೋಜನದ ನಂತರ ಸತಿಯು ಪತಿ ಪ್ರಸಾದವೆಂದು ತಾನು ಉಣ್ಣುವಳು. ಪತಿಯಿಂದ ತನಗೆ ಸೇವೆಯ ಆಜ್ಞೆ ಬರುವದನ್ನು ಸತಿಯು ನಿರೀಕ್ಷಿಸುತ್ತಲಿರುವಳು. ಪತಿಯಾಜ್ಞೆಯನ್ನು ಎಂದೂ ಉಲ್ಲಂಘಿಸಳು. ಪತಿಯ ಅಖಂಡ ಸೇವೆ ಮಾಡುವದೂ, ಅತಿಥಿ ಪೂಜೆಯಲ್ಲಿ ಅವನಿಗೆ ಸಹಕಾರಿಯಾಗುವದೂ, ಪತಿಯು ಅಪ್ಪಣೆ ಕೊಟ್ಟರೆ ದಾನ ಧರ್ಮ ಮಾಡುವದೂ ಸತಿಗೆ ಬಲು ಸೇರುವದು. ಪತಿಯೇ ಶ್ರೀಪತಿಯು ಎಂಬ ಭಾವನೆಯಿಂದ ಸೇವೆ ಮಾಡುವದು ಸತಿಯಳಿಗೆ ಉಕ್ತವು. ಶಯನ ಕಾಲದಲ್ಲಿ ಸಹ ಭಕ್ತಿಯಿಂದ ಪತಿ ಸೇವೆ ಮಾಡುವಳು. ಪತಿಯು ನಿದ್ರಿಸ್ಥನಾದ ನಂತರ ತಾನು ಮಲಗುವಳು. ಅವನು ಏಳುವ ಮೊದಲೇ ತಾನು ಏಳುವಳು. ಗೃಹಕೃತ್ಯಗಳನ್ನು ಮಾಡುವಳು. ಸ್ನಾನ ಮಾಡಿ ಪತಿಯನ್ನು ಪೂಜಿಸಿ ಪಾದ ತೀರ್ಥ ಸ್ವೀಕರಿಸುವಳು, ಗಂಡನು ಮನೆಯಲ್ಲಿ ಇದ್ದಾಗಲೇ ಸತಿಯು ಸಿಂಗರಿಸಿಕೊಳ್ಳುವಳು, ಪತಿಯು ನಿಷ್ಠುರ ನುಡಿಯನ್ನಾಡಲು ಸಿಟ್ಟಾಗದೆ ಕ್ಷಮೆಗಾಗಿ ಅವನ ಪಾದ ಹಿಡಿಯುವಳು, ಅವನು ಹೊರಗಿನಿಂದ ಮನೆಗೆ ಬರಲು ಪ್ರೀತಿಯಿಂದ ಎದುರ್ಗೊಳ್ಳುವಳು. ತನ್ನ ಪತಿಯ ಇಚ್ಛೆಗನುಸರಿಸಿ ನಡೆಯುವಳು. ದೇವ–ಋಷಿಗಳೆ ! ಸತಿಯ ಈ ಲಕ್ಷಣಗಳಲ್ಲದೆ ಆಕೆಯ ವರ್ತನೆಯ ಬಗೆಗಿರುವ ಇನ್ನೂ ಕೆಲವು ಲಕ್ಷಣಗಳಿವೆ. ಯಾವವೆಂದರೆ—

ಪತಿವ್ರತೆಯು ತನ್ನ ಮನೆ ಬಿಟ್ಟು ಅನ್ಯ ಕಡೆಗೆ ಹೋಗಳು. ಕಾರ್ಯಪರತ್ವ ಹೋಗಲು ತೀವ್ರವೇ ಹಿಂದಿರುಗುವಳು. ಈ ಪತಿವ್ರತೆಯು ದಿನದ ಪ್ರಾತಃಕಾಲದಲ್ಲಿ ಸಂಮಾರ್ಜನೆ ಮಾಡುವಳು.

ದೇವ ಪೂಜೆಗಾಗಿ ಸರ್ವಸಿದ್ಧತೆ ಮಾಡುವಳು, ತನ್ನ ಗಂಡನ ಉಚ್ಛಿಷ್ಟವನ್ನು ಮನೋಭಾವದಿಂದ ಭುಂಜಿಸುವಳು. ಅವಳು ಅತಿಥಿಗೆ ಅನ್ನ ಹಾಕುವಳು, ಗೋಮಾತೆಯನ್ನು ಪೂಜಿಸುವಳು, ಪತಿಯಾಜ್ಞೆಯಿಲ್ಲದೆ ವ್ರತೋಪವಾಸ ಮಾಡಳು, ರಜಸ್ವಲೆಯಾದಾಗ ಉಕ್ತ ಆಚರಣೆಯಿಂದಲೇ ವರ್ತಿಸುವಳು. ಪತಿಯ ಆಯುಷ್ಯ ವರ್ಧನೆಗಾಗಿ ಕುಂಕುಮಾದಿ ಸೌಭಾಗ್ಯ ದ್ರವ್ಯಗಳಿಂದ ಅಲಂಕರಿಸಿಕೊಳ್ಳುವಳು.

ಪತಿವ್ರತೆಯು ನೆರೆಹೊರೆಯವರ ಸಂಪರ್ಕದಿಂದ ದೂರಿರುವಳು. ಅಗಸಗಿತ್ತಿ, ಕುಂಟಣಿ, ಜೈನಿತಿ, ದ್ರವ್ಯಹೀನೆ ಇವರ ಸ್ನೇಹಿತಿಯಾಗಳು. ತನ್ನ ಗಂಡನನ್ನು ನಿಂದಿಸುವ ಹೆಂಗಸಿನ ಕೂಡ ಮಾತಾಡಳು, ಅತ್ತೆ-ಮಾವ ಮೊದಲಾದವರಿಂದ ದೂರಿರಲು ಸತಿಯು ಎಂದೂ ಒಪ್ಪುವದಿಲ್ಲ. ಈಕೆ ನಿರವಸ್ತ್ರದಿಂದೆ ಸ್ನಾನ ಮಾಡುವಳು, ಹೊಸ್ತಿಲು, ಒರಳು, ಒನಕೆಗಳ ಮೇಲೆ ಕುಳಿತುಕೊಳ್ಳಳು. ಹಿರಿಯರ ಸಮ್ಮುಖದಲ್ಲಿ ನಿಲ್ಲಳು ಹಾಗು ಕುಳಿತುಕೊಳ್ಳಳು. ಮತ್ತೂ—

ಪತಿವ್ರತೆಯು ಗಂಡನೊಡನೆ ವಾದಿಸಲಾರಳು, ಅವನ ಅಂತಃಕರಣದಲ್ಲಿ ಉದ್ವೇಗ ಹುಟ್ಟುವಂತೆ ವರ್ತಿಸಲಾರಳು. ಗಂಡನು ಎಂಥ ಸ್ವರೂಪದವನೇ ಇದ್ದರೂ ಅವನನ್ನು ಪತಿವ್ರತೆಯು ಹರಿಯ ಸಮಾನನೆಂದೇ ನಿಶ್ಚಿತ ಮತಿ ತಾಳುವಳು. ತನಗೆ ಗೃಹಾವಶ್ಯಕ ಪದಾರ್ಥಗಳು ಬೇಕಾಗಿದ್ದರೆ ತಾನೇ ತನ್ನ ಗಂಡನಿಗೆ ಮಕ್ಕಳ ಮುಖಾಂತರ ತಿಳಿಸಬೇಕು. ಮನೆಯಲ್ಲಿ ಹುಡುಗರಿಲ್ಲದಿದ್ದರೆ ಆವಶ್ಯಕ ಪದಾರ್ಥಗಳನ್ನು ತೋರಿಸಿ ಸೂಚಿಸಬೇಕು. ಇಂಥದೇ ಬೇಕೆಂದು ಹಟ ಹಿಡಿಯಬಾರದು. ಪತಿವ್ರತೆಯು ತನ್ನ ಗಂಡನಿಗೆ ದೊರೆತಷ್ಟರಲ್ಲಿಯೇ ಸಂತುಷ್ಟತೆ ಪಡುವಳು. ಪತಿನಿಂದೆ ಮಾಡಳು. ಪತಿಸೇವೆಗಿಂತಲೂ ತೀರ್ಥ

ಯಾತ್ರೆಗಳು ಹೆಚ್ಚಿನವಲ್ಲವೆಂದು ಅವಳು ಭಾವಿಸುವಳು. ದೇವ–ಋಷಿಗಳೆ ! ಇನ್ನೂ ಕೆಲವು ಸಂಗತಿಗಳನ್ನು ಕೇಳಿರಿ. ಆ ಸತಿಯು ಮನೋನಿರ್ಧಾರವೆಂತಿರುವದೆಂದರೆ—

ಪತಿಯಾಜ್ಞೆಯಿಲ್ಲದೆ ವ್ರತೋಪವಾಸ ಮಾಡುವವಳು ತನ್ನ ಪತಿಯ ಆಯುಷ್ಯ ಕ್ಷೀಣಿಸುವಳು. ಹಾಗು ತನ್ನ ಪತಿಯೊಡಗೂಡು ನರಕಕ್ಕೆ ಹೋಗುವಳು. ಗಂಡನಿಗೆ ಸಿಟ್ಟಿನಿಂದ ಉತ್ತರ ಕೊಡುವವಳಿಗೆ ನಾಯಿಯ ಜನ್ಮ ಬರುವದಲ್ಲದೆ ಅವಳು ರಾತ್ರಿ ಊರ ಸನಿಹಕ್ಕೆ ಬಂದು ಒದರುವ ನರಿಯಾಗುವಳು. ಸತಿಯು ವನಭೋಜನ, ನೆರೆಮನೆಗಳಿಗೆ ಕಾರಣವಿಲ್ಲದೆ ದಿನಂಪ್ರತಿ ಹೋಗಕೂಡದು. ಪತಿಯು ಆಚಾರಹೀನನಾದಲ್ಲಿ ಅವನನ್ನು ನಿಂದಿಸಬಾರದು, ಅತ್ತೆ–ಮಾವಂದಿರ ಮುಂದೆ ನಿಂತು ಗಟ್ಟಿಸಿ ಮಾತಾಡಬಾರದು. ಹಾಗು ಗಹಗಹಿಸಿ ನಗಬಾರದು. ಪತಿಯ ವೃತ್ತಿಗೆ ಬೇಜಾರುಗೊಂಡು ಉದಾಸೀನತೆ ತೋರಿಸುವವಳು ಹೆಣ್ಣು ಹುಲಿಯಾಗಿ ಅಡವೀ ಸೇರುವಳು. ಪರಪುರುಷನನ್ನು ದೃಷ್ಟಿಸುವವಳು ಮೇಲ್ಗಣ್ಣಿನವಳಾಗಿ ಹುಟ್ಟುವಳು. ಗಂಡನನ್ನು ವಂಚಿಸಿ ಪಿರಿದುಂಬುವವಳು ಗ್ರಾಮಸೂಕರ ಜನ್ಮ ತಾಳುವಳು. ಪತಿಗೆ ಬಿರು ನುಡಿಯನ್ನಾಡುವವಳು ಮೂಕೆಯಾಗಿ ಹುಟ್ಟುವಳು. ಸವತೀ ಮತ್ಸರದವಳು ದರಿದ್ರೆಯಾಗಿ ಜನಿಸುವಳು. ಇತ್ಯಾದಿ.

"ದೇವ ಋಷಿಗಳೆ ! ಶರೀರವು ಜೀವವಿದ್ದರೆ ಮಾತ್ರ ಪವಿತ್ರವು. ಅದರಂತೆ ಸತಿಯಳಿಗೆ ಪತಿಯಿಂದಲೇ ಪಾವಿತ್ರ್ಯ ಹಾಗು ಸೌಭಾಗ್ಯವು. ಆದ್ದರಿಂದ ಸ್ತ್ರೀಯಳಿಗೆ ಪತಿ ಸೇವೆ ಯೋಗ್ಯವು. ಹಾಗು ಅವಳು ಪತಿಯೊಡನೆ ಇರುವದೇ ಶ್ರೇಯಸ್ಕರವು ಪತಿಯು ಮೃತನಾಗಲು ಅವನ ಶವದೊಡನ ಸಹಗಮನ

ಮಾಡುವವಳ ಪುಣ್ಯಕ್ಕೆ ಎಣೆಯಿಲ್ಲ. ಆಕಿಯಿಂದ ನಾಲ್ವತ್ತೆರಡು ಕುಲಗಳ ಉದ್ಧಾರವಾಗುವದು. ಇಂಥ ಪವಿತ್ರತೆಯು ಯಾವದೊಂದು ಮನೆತನಕ್ಕೆ ಸುಕೃತದಿಂದ ದೊರೆಯುವಳು.

ದೇವ ಋಷಿಗಳೆ ! ಗಂಗಾ ಸ್ನಾನವೂ, ಪತಿವ್ರತೆಯ ದರ್ಶನವೂ ಪುಣ್ಯ ಸಂಚಿತದಿಂದ ಲಭಿಸುವವು'' ಎಂದು ಗುರು ಬೃಹಸ್ಪತಿಯು ಸತಿ ಲೋಪಾಮುದ್ರೆಯ ಪತಿವ್ರತಾ ಧರ್ಮವನ್ನು ವಿವರಿಸಿ ಹೇಳಿದನು. ಅದನ್ನೇ ದತ್ತನ ಪತ್ನಿಗೆ ದರ್ಶನವಿತ್ತ ಯೋಗೇಶ್ವರನು ಆಕೆಗೆ ಆಚಾರ ಧರ್ಮವೆಂದು ಬೋಧಿಸಿದನು.

ಇನ್ನು ಮುಂದೆ ಬೃಹಸ್ಪತಿಯು ದೇವ ಋಷಿಗಳಿಗೆ ವಿಧವಾಧರ್ಮ ಹೇಳಿದುದನ್ನು ಯೋಗೇಶ್ವರನು ಆ ದತ್ತನ ಪತ್ನಿಗೆ ಬೋಧಿಸುವನು.

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೩೨ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ದೇವಗುರು ಬೃಹಸ್ಪತಿಯು ದೇವ–ಋಷಿಗಳಿಗೆ ಹೇಳಿದ ವಿಧವಾಧರ್ಮವನ್ನೇ ಯೋಗೇಶ್ವರನು ದತ್ತನ ಸತಿ ಸಾವಿತ್ರಿಯಳಿಗೆ ಹೇಳಹತ್ತಿದನು. ಎಂತೆಂದರೆ–

"ಪತಿಯು ಸತಿಯ ಹತ್ತಿರ ಮೃತನಾಗದೆ ಅನ್ಯ ಪ್ರದೇಶದಲ್ಲಿ ಮೃತನಾದರೆ ಆ ಸತಿಯು ಸಹಗಮನ ಮಾಡಬಾರದು. ಅದರಂತೆ ಆಕೆ ಗರ್ಭಿಣಿಯಾಗಿದ್ದರೆ ಅಥವಾ ಅವಳಿಗೆ ಮೊಲೆಯುಣ್ಣುವ ಮಗು ಇದ್ದರೆ ಸಹಗಮನ ಮಾಡಬಾರದು. ಹಾಗೆ ಮಾಡಿದರೆ ಮಹಾಪಾಪವೊದಗುವದು. ಆ ಮೂಲಕ ಆಕೆ ವಿಧವಾಧರ್ಮದಿಂದ ಆಚರಿಸಬೇಕು. ಅದರಿಂದಲೇ ಅವಳಿಗೆ ಪುಣ್ಯಪ್ರಾಪ್ತಿಯು. ಭರ್ತಾರನು ಮೃತಿ ಹೊಂದಿದ ನಂತರ ಸಹಗಮನ ಹೋಗದೆ ವಿಧವಾಧರ್ಮವನ್ನಾಚರಿಸುವವಳು ಕೇಶವಪನ ಮಾಡಿಸಿಕೊಳ್ಳಬೇಕು. ಸಕೇಶಿಯಾಗಿದ್ದವಳು ತನ್ನ ಪತಿ ಸಹಿತ ನರಕ ಸೇರುವಳು. ವಿಧವೆಯು ನಿತ್ಯ ಪ್ರಾತಃಸ್ನಾನ, ಒಪ್ಪತ್ತಿನ ಭೋಜನ ಮಾಡಬೇಕು. ಒಂದೇ ಧಾನ್ಯದ ಆಹಾರ ಸೇವಿಸಬೇಕು. ತಪ್ಪಿದರೆ ಮೂರು ದಿನ ನಿಷ್ಠೆಯಿಂದ ಉಪವಾಸ ಮಾಡಬೇಕು. ಪಕ್ಷಮಾಸದಲ್ಲಿ ಐದು ದಿನ ಉಪವಾಸ ಮಾಡಬೇಕು. ಅಥವಾ ಚಾಂದ್ರಾಯಣದಂತೆ ಗ್ರಾಸ ಭೋಜನ ಮಾಡಬೇಕು. ಬಿದಿಗೆಯ ಚಂದ್ರೋದಯ ದಿನ ಒಂದೇ ತುತ್ತು ಸ್ವೀಕರಿಸಿ ಮುಂದೆ ದಿನದಿನವೂ ಒಂದೊಂದು ಗ್ರಾಸ ಹೆಚ್ಚಿಸುತ್ತ ಪೌರ್ಣಿಮೆಯ ದಿನ ಪೂರ್ಣ ಭೋಜನ ಮಾಡಬೇಕು. ಇದರ ವಿಪರೀತವಾಗಿ ಕೃಷ್ಣಪಕ್ಷದಲ್ಲಿ ಒಂದೊಂದು ತುತ್ತು ಕಡಿಮೆ ಮಾಡುತ್ತ ಅಮಾವಾಸ್ಯೆಯ ದಿನ ಒಂದೇ ತುತ್ತು ಸ್ವೀಕರಿಸಬೇಕು. ಉಪವಾಸ ಮಾಡುವ ಸಾಮರ್ಥ್ಯವಿಲ್ಲದವರು ಒಂದೇ ಅನ್ನ ಉಣ್ಣಬೇಕು. ಅಥವಾ ಫಲಹಾರ, ಶಾಖಾಹಾರ ಇಲ್ಲವೆ ಕ್ಷೀರಪಾನ ಮಾಡಬೇಕು. ಯಾವುದರಲ್ಲಿ ಹೆಚ್ಚು-ಕಡಿಮೆ ಮಾಡಬಾರದು. ಪ್ರಾಣಧಾರಣ ಹಾಗು ಶ್ವಾಸೋಚ್ಛ್ವಾಸಗಳ ಮಟ್ಟಿಗೆ ಆಹಾರ ಸ್ವೀಕರಿಸಬೇಕು. ವಿಧವೆಯು ಹೊರಸು-ಪಲ್ಲಂಗಗಳ ಮೇಲೆ ಮಲಗಿದರೆ ಅವಳು ಪತಿಸಹಿತ ನರಕ ಸೇರುವಳು. ಎಣ್ಣೆ ಹೂಸಿ

ಕೊಂಡು ಎರಕೊಳ್ಳುವದು, ಅಂಗಮರ್ದನ ಮಾಡಿಸಿಕೊಳ್ಳುವದು, ಗಂಧ-ಪರಿಮಳ ತಾಂಬೂಲಗಳನ್ನು ಸೇವಿಸುವದು, ಹೂ-ಹೂಮಾಲೆ ಧರಿಸುವದು, ಇವೆಲ್ಲವು ವಿಧವೆಯಳಿಗೆ ನಿಷಿದ್ಧವಾದವುಗಳು. ಪುತ್ರನಿಲ್ಲದ ವಿಧವೆಯು ಪುತ್ರನೋಪಾದಿ ಎಳ್ಳು, ದರ್ಭೆಗಳನ್ನು ಹಿಡಿದುಕೊಂಡು ಗೋತ್ರ ನಾಮವನ್ನು ಉಚ್ಚರಿಸಬೇಕು. ನಿತ್ಯವೂ ವಿಷ್ಣುವಿನ ಅರ್ಚನೆ ಮಾಡಬೇಕು. ತನ್ನ ಪತಿಯನ್ನು ವಿಷ್ಣುವೆಂದೇ ಗ್ರಹಿಸಬೇಕು. ತೀರ್ಥಯಾತ್ರೆ ಉಪವಾಸಾದಿಗಳನ್ನು ವಿಷ್ಣು ನಿರೋಪದಿಂದ ಅಥವಾ ಗುರು ಇಲ್ಲವೆ ಯೋಗ್ಯ ಬ್ರಾಹ್ಮಣ ಇವರ ನಿರೋಪದಿಂದ ಕೈಕೊಳ್ಳಬೇಕು. ಬ್ರಾಹ್ಮಣರಿಗೆ ತನ್ನ ಇಚ್ಛಿತ ವಸ್ತುವನ್ನು ಕೊಡಬೇಕು. ವೈಶಾಖ-ಕಾರ್ತಿಕ-ಮಾಘ ಸ್ನಾನಗಳನ್ನು ತಪ್ಪದೆ ಆಚರಿಸಬೇಕು. ವೈಶಾಖದಲ್ಲಿ ಜಲಕುಂಭದಾನ, ಕಾರ್ತಿಕದಲ್ಲಿ ದೀಪದಾನ-ಘೃತದಾನ ಹಾಗು **ಮಾಘಮಾಸದಲ್ಲಿ** ಎಳ್ಳು-ತುಪ್ಪಗಳ ದಾನ ಕೊಡಬೇಕು. ಬೇಸಿಗೆಯಲ್ಲಿ ಅರವಟ್ಟಿಗೆ ಇಡಿಸಬೇಕು. ಶಿವಲಿಂಗಕ್ಕೆ ಸಂತತ ಧಾರೆಯ ಅಭಿಷೇಕ ನಡೆಯಬೇಕು. ಹಾಗು ಗಂಧ-ಪರಿಮಳದಿಂದ ಪೂಜಿಸಬೇಕು. ಬ್ರಾಹ್ಮಣನ ಮನೆಮನೆಗೆ ತನಗೆ ಶಕ್ತಿಗನುಸರಿಸಿ ನೀರು ತಂದು ಹಾಕಬೇಕು. ಹಾಗು ಯೋಗ್ಯತೆಗೆ ತಕ್ಕ ಅನ್ನವನ್ನೀಯಬೇಕು. ತೀರ್ಥ-ಯಾತ್ರೆಗೆ ಹೋಗುವ ವಿಪ್ರರಿಗೆ ಛತ್ರ ಹಾಗು ಪಾದರಕ್ಷೆಗಳನ್ನು ಕೊಡಬೇಕು. ತನ್ನ ಮನೆಗೆ ಬಂದ ಯಾತ್ರಿಕರ ಪಾದ ಪ್ರಕ್ಷಾಲನೆ, ಗಾಳಿ ಹಾಕುವಿಕೆ ಮಾಡಬೇಕು. ಹಾಗು ಧರಿಸುವದಕ್ಕೆ ಅರಿವೆ-ಅಂಚಡಿಗಳನ್ನು ಕೊಡಬೇಕು. ತಾಂಬೂಲಾದಿಗಳನ್ನು ಕೊಡಬೇಕು. ಜಲಪಾತ್ರೆ ಕೊಡಬೇಕು. ಸರಬತ್ತು, ಆಮ್ರರಸ, ದ್ರಾಕ್ಷೆ ಬಾಳೆಹಣ್ಣು ಕೊಡಬೇಕು. ಈ ಪ್ರಕಾರ ಕೊಡುವ ದಾನಗಳನ್ನೆಲ್ಲ ವಿಧವೆಯು ತನ್ನ ಪತಿಯ ಹೆಸರಿನಿಂದಲೇ ಅರ್ಪಿಸಬೇಕು.

ಈ ಪ್ರಕಾರ ಧರ್ಮವನ್ನಾಚರಿಸಬೇಕೆಂದು ಯೋಗೇಶ್ವನು ಹೇಳಿದನು. ಮತ್ತು ಆತನು ಗುರು ಬೃಹಸ್ಪತಿಯು ಹೇಳಿದ ಅನೇಕ ವ್ರತಗಳ ನಿಯಮಗಳನ್ನು ಆಕೆಗೆ ಹೇಳಿದನು. 'ಶಂಕರ ಪೂಜೆ' ರುದ್ರಾಭಿಷೇಕಗಳ ವಿಧಿ ವಿಧಾನಗಳನ್ನು ಹೇಳಿದನು. ವಿಧವಾ ನಾರಿಯು ನೇಮದಿಂದ ನಡೆಯಬೇಕು. ಎತ್ತಿನ ಮೇಲೆ ಹತ್ತಬಾರದು, ಆಭರಣ ಧರಿಸಬಾರದು, ಬಿಳಿ ವಸ್ತ್ರವನ್ನುಡಬೇಕು' ಇತ್ಯಾದಿ ಆಚರಣೆಗಳನ್ನು ಬೋಧಿಸಿದನು. ಪತಿಯು ಉತ್ತಮ ಗತಿ ಹೊಂದುವದಕ್ಕೆ ಆವಶ್ಯಕವಿರುವ ಎಲ್ಲ ಧರ್ಮಗಳನ್ನು ವಿಧವೆಯು ಆಚರಿಸಲಿಕ್ಕೇಬೇಕು. ಎಂದು ತಿಳಿಸಿದನು. ಮತ್ತು ಯೋಗೇಶ್ವರನು ಆಕೆಗೆ ಬೃಹಸ್ಪತಿಯ ವಚನಗಳನ್ನೆಲ್ಲ ಹೇಳಿ— "ಸ್ತ್ರೀಯೆ ! ಪರಲೋಕ ಸಾಧನ ವಿಚಾರವನ್ನೆಲ್ಲ ನಿನಗೆ ತಿಳಿಸಿದೆನು. ನಿನ್ನಲ್ಲಿ ಧೈರ್ಯವಿದ್ದರೆ ಸಹಗಮನ ಮಾಡು. ಇಲ್ಲದಿದ್ದರೆ ವಿಧವಾ ಧರ್ಮದಂತೆ ಆಚರಿಸು. ಈ ಎರಡೂ ಸಮ ಪುಣ್ಯದಾಯಕಗಳು. ನಿನ್ನ ಮನಕ್ಕೆ ಬಂದ ಮಾರ್ಗ ಹಿಡಿ" ಎಂದು ಯೋಗೇಶ್ವರನು ಆಕೆಯ ಮಸ್ತಕದ ಮೇಲೆ ಹಸ್ತವನ್ನಿಟ್ಟು ಹೇಳಿದನು.

ಯೋಗೇಶ್ವರನ ಬೋಧೆಯನ್ನು ಕೇಳಿ ದತ್ತನ ಪತ್ನಿ ಸಾವಿತ್ರಿಯು— "ಸ್ವಾಮಿ ! ವಿಧವಾ ಧರ್ಮವು ಪ್ರಾಯದ ಹೊಸ್ತಿಲಲ್ಲಿ ಕಾಲಿಟ್ಟ ನನಗೆ ಅತ್ಯಂತ ದುಸ್ತರವು. ಆದುದರಿಂದ ಸಹಗಮನದ ಮಾರ್ಗವನ್ನೇ ಅವಲಂಬಿಸಿ ಸಂತೋಷದಿಂದ ನನ್ನ ಪತಿಯೊಡನೆ ಗಮನಿಸುವೆನು" ಎಂದು ಹೇಳಿ ನಮಸ್ಕರಿಸಿದಳು. ಯೋಗೇಶ್ವರನು ಆಕೆಯನ್ನು ಮೇಲಕ್ಕೆಬ್ಬಿಸಿ— "ನೀನು ನಿನ್ನ ಪತಿಯನ್ನೊಯ್ದು ಸಂಗಮ ತೀರದಲ್ಲಿ ಇಡು. ಚಿತೆಯನ್ನು ಸಿದ್ಧಪಡಿಸು. ನಂತರ ನೀನು ಸಂಗಮದಲ್ಲಿರುವ ಗುರುಗಳ ದರ್ಶನ ಪಡೆದು

ನಿನ್ನ ಪತಿಯು ಹತ್ತಿರ ಹೋಗು. ನಾನು ನಿನಗೆ ಭಸ್ಮ-ರುದ್ರಾಕ್ಷಿಗಳನ್ನು ಕೊಡುವೆ. ಅವನ್ನು ನಿನ್ನ ಪತಿಗೆ ಧರಿಸು. ಅಲ್ಲಿಯ ಗುರುಚರಣ ತೀರ್ಥ ತಂದು ನಿನ್ನ ಪತಿಗೆ ಪ್ರೋಕ್ಷಿಸು. ನಂತರ ನೀನು ಸುವಾಸಿನಿಯರಿಗೆ ಬಾಗಿನು ನೀಡಿ ಸಹಗಮನ ಹೋಗು' ಎಂದು ಹೇಳಿ ಯೋಗೇಶ್ವರನು ಭಸ್ಮ-ರುದ್ರಾಕ್ಷಿಗಳನ್ನು ಕೊಟ್ಟು ಅಲ್ಲಿಂದ ಮರೆಯಾದನು. ಆ ಬಳಿಕ ಆಕೆ ಯೋಗೇಶ್ವರನು ಹೇಳಿದಂತೆ ಸುಸ್ನಾತಳಾದಳು. ಅಲಂಕೃತಳಾದಳು. ಬ್ರಾಹ್ಮಣರನ್ನು ಕರೆಯಿಸಿ ಅವರಿಂದ ತನ್ನ ಪತಿಯ ಶವವನ್ನು ಹೊರಿಸಿಕೊಂಡು ಸಂಗಮಕ್ಕೆ ನಡೆದಳು, ಆಕೆಯ ಈ ಸ್ಥಿತಿಯು ಕೂಡಿದವರಲ್ಲೆಲ್ಲ ಅನುತಾಪ-ಆಶ್ಚರ್ಯ ಹುಟ್ಟಿಸಿತು. ಹದಿನಾರು ವರ್ಷದ ಅಬಲೆಯು ಸಹಗಮನಕ್ಕೆ ಸಿದ್ಧಳಾದುದು ಅಪೂರ್ವವೆಂದು ಎಲ್ಲರೂ ನುಡಿಯಹತ್ತಿದರು. ವಾಹಕರು ಪ್ರೇತವನ್ನು ಸಾಗಿಸಿದರು, ಆಕೆ ತಾನೇ ಅಗ್ನಿಯನ್ನು ಹಿಡಿದುಕೊಂಡು ಮುಂದೆ ಮುಂದೆ ಗಂಭೀರವಾಗಿ ನಡೆಯಹತ್ತಿದಳು. ಊರಿನ ಸಾವಿರಾರು ಸ್ತ್ರೀ ಪುರುಷರು ಪ್ರೇತ ಕಾರ್ಯಕ್ಕೆಂದು ಬೆಂಬಳಿಸಿದರು. ಇದುವರೆಗೆ ಒಂದೇಸಮನೆ ಕಣ್ಣೀರುಕ್ಕಿಸಿ ಶೋಕಮಾಡುತ್ತಿದ್ದ ಅವಳ ಈಗಿನ ಧೀರ ವೃತ್ತಿಯನ್ನು ನೋಡಿ ಎಲ್ಲರೂ ಬೆರಳು ಕಚ್ಚಿದರು. ಹಾಗು ಆಕೆಯನ್ನು ಎಲ್ಲರೂ 'ನಿಜವಾದ ಪತಿವ್ರತೆ' ಎಂದು ಕೊಂಡಾಡುತ್ತ ಸ್ಮಶಾನಕ್ಕೆ ಸಾಗಿದರು. ಆಯಿತು, ಎಲ್ಲರೂ ಕೂಡಿಕೊಂಡು ಪ್ರೇತದೊಡನೆ ಸ್ಮಶಾನಕ್ಕೆ ಬಂದರು, ವಾಹಕರು ಚಟ್ಟವನ್ನು ಕೆಳಗಿಳಿಸಿದರು. ಚಿತೆಯು ಸಿದ್ಧವಾಗಿತ್ತು. ಬ್ರಾಹ್ಮಣರು ಮೃತನ ಪತ್ನಿಯಿಂದ, ಶವಕ್ಕೆ ಮಾಡಿಸತಕ್ಕ ಕ್ರಿಯೆ ಮಾಡಿಸಿದರು. ಆಕೆಯಿಂದ ಸುವಾಸಿನಿಯರಿಗೆ ಬಾಗಿನು ಕೊಡಿಸಿದರು, ಇನ್ನು ಆ ಶವವನ್ನೂ ಮೃತನ ಪತ್ನಿಯನ್ನೂ ಸಿದ್ಧವಾದ ಚಿತೆಯ ಮೇಲಿಟ್ಟು ಅಂತ್ಯಕ್ರಿಯೆ

ಮುಗಿಯಿಸುವವರಿದ್ದರು ಅಷ್ಟರಲ್ಲಿ ಒಮ್ಮೆಲೆ ಆ ಸತಿಯಳು ಈ ಮೊದಲು ತನಗೆ ಬೋಧಿಸಿದ ಯೋಗೇಶ್ವರನು ಹೇಳಿದ ಸಂಗತಿಗಳನ್ನು ತನ್ನ ಸ್ಮರಣೆಗೆ ತಂದುಕೊಂಡಳು, ಪ್ರೇತವನ್ನು ಚಿತೆಯಮೇಲಿರಿಸಲು ಸಿದ್ಧರಾದ ಬ್ರಾಹ್ಮಣರನ್ನು ಕುರಿತು— "ಓಹೊ ! ತಡೆಯಿರಿ, ನಾನು ಈಗಲೇ ಇಲ್ಲಿಯ ಸಂಗಮದಲ್ಲಿದ್ದ ಗುರುಗಳ ಪಾದಕ್ಕೆ ನಮಸ್ಕರಿಸಿ ಬರುವೆನು'' ಎಂದು ಹೇಳಿ ಸಾವಿತ್ರಿಯು ಗುರುಗಳಿದ್ದಲ್ಲಿಗೆ ನಡೆದಳು. ಅಲ್ಲಿ ಕೂಡಿದವರೆಲ್ಲ ಆಕೆಯನ್ನು ಬೆಂಬಳಿಸಿದರು. ಕೇವಲ ಪ್ರೇತವಾಹಕರಷ್ಟೇ ಅಲ್ಲಿ ಉಳಿದರು.

ಬ್ರಾಹ್ಮಣರಿಂದ ಅಪ್ಪಣೆ ಪಡೆದು ಸಾವಿತ್ರಿಯು ಗುರುಗಳ ಸನ್ನಿಧಿಗೆ ಬಂದಳು. ಅಲ್ಲಿ ಶ್ರೀ ನೃಸಿಂಹ ಸರಸ್ವತಿ ಗುರುಗಳು ಕುಳಿತಿದ್ದರು. ತಮ್ಮ ಕಡೆಗೇ ಬರುತ್ತಿರುವ ಆ ಸತಿಯಳನ್ನೂ ಅವಳನ್ನು ಬೆಂಬಳಿಸಿ ಬರುತ್ತಿರುವ ಜನಜಂಗುಳಿಯನ್ನೂ ಕಂಡರು, ತಮ್ಮನ್ನು ಹಲವು ಪರಿಯಿಂದ ಸ್ತೋತ್ರ ಮಾಡುತ್ತ ಬರುತ್ತಿದ್ದ ಆ ಸತಿಯಳ ಮನೋಭಾವವನ್ನೂ ಭಕ್ತಿಯನ್ನೂ ಕಂಡು ಸಂತುಷ್ಟಪಡುತ್ತಿರುವಷ್ಟರಲ್ಲಿಯೇ ಸತಿಯು ಅಶ್ವತ್ಥವೃಕ್ಷದಡಿಯಲ್ಲಿ ಸ್ಥಾನಾಪನ್ನರಾಗಿದ್ದ ಗುರುಗಳ ಮುಂದೆ ಓಡಿ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿದಳು. ನಮಸ್ಕಾರ ಮಾಡಿ ಆಕೆ ಮೇಲಕ್ಕೇಳುವಷ್ಟರಲ್ಲಿಯೇ ಶ್ರೀ ಗುರುಗಳು ತಮ್ಮ ಅಮೃತವಾಣಿಯಿಂದ— "ಸುಭಗೆ ! ನೀನು ಅಷ್ಟಪುತ್ರವತಿಯಾಗು" ಎಂಬ ವರದ ವಾಕ್ಯವನ್ನು ಉಚ್ಚರಿಸಿದರು !

ಶ್ರೀ ಗುರುಗಳ ಮುಖದಿಂದ ಹೊರಬಂದ ವಾಕ್ಯವನ್ನು ಕೇಳಿ ಅಲ್ಲಿಗೆ ಬಂದಿದ್ದ ಜನವೆಲ್ಲ ನಗಹತ್ತಿತು. ಸಾವಿತ್ರಿಯು ದಂಗುಬಡೆದು ನಿಂತಳು. ಗುರುಗಳು ಗಂಭೀರ ಮುದ್ರೆಯಿಂದ ಎಲ್ಲರನ್ನು ನೋಡಿದರು. ಆ ಜನರಲ್ಲಿಂದ ಒಬ್ಬ ಬ್ರಾಹ್ಮಣನು ಶ್ರೀ ಗುರುಗಳ ಮುಂದೆ ಬಂದು— "ಸ್ವಾಮಿ ! ಈ ಅಬಲೆಯ

ಪತಿಯು ಮೃತಹೊಂದಿರುವನು. ಪತಿಯೊಡನೆ ಈಕೆ ಸಹಗಮನಕ್ಕೆ ಸಿದ್ಧಳಾಗಿ ಬಂದಿರುವಳು. ಶವವನ್ನು ತಂದು ಸ್ಮಶಾನದಲ್ಲಿ ಇಳಿಸಿರುವೆವು, ಅಂತಿಮ ವಿಧಿಗಳೆಲ್ಲ ಮುಗಿದು ಇನ್ನು ಚಿತೆ ಹೊತ್ತಿಸಿ ಈಕೆ ಪತಿಯೊಡನೆ ಚಿತೆಯನ್ನೇರುವದಿಷ್ಟೇ ಉಳಿದಿದೆ, ಅಂತ್ಯದಲ್ಲಿ ತಮ್ಮ ಪಾದದರ್ಶನಕ್ಕೆಂದು ಇಲ್ಲಿಗೆ ಬಂದಳು. 'ಅಷ್ಟಪುತ್ರೀಭವ' ಎಂದು ನೀವು ಆಶೀರ್ವಾದ ವಾಕ್ಯವನ್ನು ಉಚ್ಚರಿಸಿದಿರಿ" ಎನ್ನಲು ಶ್ರೀ ಗುರುಗಳು ಆ ಬ್ರಾಹ್ಮಣನ ಹೇಳಿಕೆ ಕೇಳಿ ನಕ್ಕು— "ಎಲೋ ವಿಪ್ರ ! ಈ ಸ್ತ್ರೀಯಳ ಮಾಂಗಲ್ಯ ಸ್ಥಿರವಿದೆ. ಅಂದಮೇಲೆ ಈಕೆಯ ಪತಿಗೆ ಮರಣವೇ? ಶಕ್ಯವಿಲ್ಲ. ಹೋಗಿರಿ, ಈಗಲೇ ನೀವು ಸ್ಮಶಾನಕ್ಕೆ ಹೋಗಿ ಈಕೆಯ ಪತಿಯನ್ನು ಆ ಚಟ್ಟಸಹಿತ ಇಲ್ಲಿಗೆ ತಂದಿಳಿಸಿರಿ. ಏನೊಂದು ನಿರ್ಧರಿಸದೆ ಪ್ರೇತಸಂಸ್ಕಾರ ಮಾಡಬೇಡಿರಿ'' ಎಂದು ಹೇಳಿದ ಕೂಡಲೆ ಎಲ್ಲ ಜನರಲ್ಲಿ ಶ್ರೀ ಗುರು ವಾಕ್ಯದಿಂದ ಕೌತುಕದ ಗಾಳಿ ಸುಳಿದಾಡಹತ್ತಿತು. ಆ ಬ್ರಾಹ್ಮಣರು ಆಗಲೇ ಸ್ಮಶಾನಕ್ಕೆ ಹೋದರು. ಚಟ್ಟಸಹಿತ ಮೃತನ ಶವವನ್ನು ಹೊತ್ತು ತಂದರು, ಶ್ರೀ ಗುರುಗಳ ಸನ್ನಿಧಿಯಲ್ಲಿ ಪ್ರವಾಹದ ಮಗ್ಗುಲಿಗೆ ಇಳಿಸಿದರು.

ಶ್ರೀ ಗುರುಗಳು ಅಲ್ಲಿ ಕೂಡಿದವರಿಂದ ಚಟ್ಟದ ಮೇಲೆ ಪ್ರೇತಕ್ಕೆ ಬಿಗಿದಿದ್ದ ಬಂಧನಗಳನ್ನು ಬಿಚ್ಚಿಸಿದರು. ಒಬ್ಬ ಬ್ರಾಹ್ಮಣನ ಕೈಯಲ್ಲಿ ಚರಣತೀರ್ಥ ಕೊಟ್ಟು ಪ್ರೇತಕ್ಕೆ ಪ್ರೋಕ್ಷಣೆ ಮಾಡಲು ಹೇಳಿದರು. ಗುರು ನಿರೂಪಣೆಯಂತೆ ಆ ಬ್ರಾಹ್ಮಣನು ಪ್ರೇತಕ್ಕೆ ಚರಣತೀರ್ಥ ಸಿಂಪಡಿಸಿದನು. ಹಾಗು ಕೂಡಿದವರೆಲ್ಲ ಗುರುಗಳನ್ನೇ ನೋಡುತ್ತ ನಿಂತಿರುವಾಗ ಶ್ರೀ ಗುರುಗಳು ತಮ್ಮ ಅಮೃತ ದೃಷ್ಟಿಯಿಂದ ಪ್ರೇತವನ್ನು ನಿರೀಕ್ಷಿಸಿದರು. ಗುರುಗಳ ದೃಷ್ಟಿ ತಾಗಿದ ಕೂಡಲೆ ಮೃತನಿಗೆ ಅದು ಸಂಜೀವನದಂತಾಗಿ ತತ್‌ಕ್ಷಣವೇ ಎದ್ದು

ಕುಳಿತನು. ಎಲ್ಲರ ನೋಟಗಳು ಗುರು ಮುಖ ನಿರೀಕ್ಷಿಸುವಲ್ಲಿಯೇ ತೊಡಗಿದ್ದರಿಂದ ಮೃತನಲ್ಲಿ ಚೇತನವು ಅದೆಂತು ಉಂಟಾಯಿತು ಹಾಗು ಅವನು ಅದೆಂತು ಎದ್ದು ಕುಳಿತನು ಎಂಬದನ್ನು ಯಾರೂ ಕಾಣಲಿಲ್ಲ ಒಮ್ಮೆಲೆ ಅವನು ಚಟ್ಟದ ಮೇಲೆ ಕುಳಿತದ್ದನ್ನು ನೋಡಿ ಎಲ್ಲರೂ ವಿಸ್ಮಯಗೊಂಡರು, ಶ್ರೀ ಗುರುವಿನಲ್ಲಿ ಭಕ್ತಿ ಯುತರಾಗಿ ಎಲ್ಲರೂ ಏಕಕಂಠದಿಂದ ಶ್ರೀ ಗುರುಗಳ ಜಯಜಯಕಾರ ಮಾಡಿದರು. ನಂತರ—

ಗುರುಗರ ಆಜ್ಞೆಯ ಪ್ರಕಾರ ನಗ್ನಸ್ಥಿತಿಯಲ್ಲಿ ಸಜೀವಗೊಂಡ ದತ್ತನಿಗೆ ಜನರು ಹೊಸ ವಸ್ತ್ರ ಗಳನ್ನು ಧಾರಣಮಾಡಿಸಿದರು. ಕೂಡಲೆ ಅವನು ತನ್ನ ಹೆಂಡತಿಯನ್ನು ಮುಂದೆ ಕರೆದು— "ನನ್ನನ್ನು ಇದೆಲ್ಲಿಗೆ ತಂದಿರುವಿರಿ? ಈ ಯತೀಶ್ವರರು ಯಾರು?" ಎಂದು ಕೇಳಿದನು. ಆಗಲಾಕೆ ಎಲ್ಲ ಸಂಗತಿಯನ್ನು ಅವನಿಗೆ ಹೇಳಿದಳು. ಬಳಿಕ ಆ ಸತಿ-ಪತಿಯರು ಗುರುಗಳಿಗೆ ವಂದಿಸಿ ಸ್ತುತಿಸಿದರು. ಹಲವು ಬಗೆಯಿಂದ ಗುರು ಮಹಿಮೆಯನ್ನು ಕೊಂಡಾಡಿದರು. ಶ್ರೀ ಗುರುಗಳು ಆ ದಂಪತಿಗಳ ಭಕ್ತಿಗೆ ಮೆಚ್ಚಿದರು. ಅವರು ಆ ದಂಪತಿಗಳಿಗೆ ನಿಮಗೆ ನಿಜವಾಗಿಯೂ ಅಷ್ಟಪುತ್ರರ ಭಾಗ್ಯ ಲಭಿಸುವದು. ಸಂಶಯ ಬೇಡ ಸುಖಿಯಾಗಿ ಇದ್ದುಬಿಡಿರಿ" ಎಂದು ಹೇಳಿದರು. ಆಗ ಕೂಡಿದ ಜನವೆಲ್ಲ ಜಯಜಯಕಾರ ಧ್ವನಿಯಿಂದ ಆಕಾಶವನ್ನೆಲ್ಲ ತುಂಬಿಸಿದರು. ಎಲ್ಲರು ಶ್ರೀ ಗುರುಗಳಿಗೆ ನಮಿಸಿ ತಮ್ಮ ತಮ್ಮ ಭಕ್ತಿಯನ್ನು ಪ್ರಕಟಿಸಿದರು.

ಆಗ ಕೂಡಿದ ಜನಜಂಗುಳಿಯಲ್ಲಿ ಧೂರ್ತನೂ ಕುಬುದ್ಧಿಯೂ ಆದ ಬ್ರಾಹ್ಮಣನೊಬ್ಬನಿದ್ದನು. ಅವನು— "ಸ್ವಾಮಿ! ಬ್ರಹ್ಮಲಿಖಿತವು ಸತ್ಯವೆಂದು ವೇದಾದಿಗಳೆಲ್ಲವೂ ಹೇಳುವವು. ಅದೆಂದಿಗೂ ಸುಳ್ಳಾಗದು. ಹೀಗಿದ್ದು ಅಪಮೃತ್ಯುವಿಗೊಳಗಾಗಿದ್ದ ಹಾಗು ಹಗಲಿನಲ್ಲಿ ಮೃತನಾಗಿದ್ದ ಈ ದತ್ತನು ಅದೆಂತು

ಸಜೀವಗೊಂಡನು? ಇದರಿಂದ ಸತ್ಯವಾದ ಬ್ರಹ್ಮಲಿಖಿತವು ಮಿಥ್ಯೆಯಾಯಿತಲ್ಲ! ಇದಕ್ಕೆ ತಮ್ಮ ಅಭಿಪ್ರಾಯ ವೇನು? " ಎಂದು ಕೇಳಿದನು. ಅವನ ಕೇಳಿಕೆಗೆ ಗುರುಗಳು ನಕ್ಕು— "ಬ್ರಹ್ಮಲಿಖಿತವು ಸತ್ಯ ! ಸತ್ಯವು !! ಆದರೆ ನಾವು ಈ ದತ್ತನ ಮುಂದಿನ ಜನ್ಮದ ಆಯುಷ್ಯದೊಳಗಿನ ಮೂವತ್ತು ವರುಷಗಳನ್ನು ಮುಂಗಡ ತೆಗೆದುಕೊಂಡು ಇವನ ಆಯುಷ್ಯವನ್ನು ಹೆಚ್ಚಿಸಿದೆವು. ಕೇವಲ ಭಕ್ತರಕ್ಷಣೆಗಾಗಿ ನಾವು ಈ ಮಾರ್ಗ ಹಿಡಿದೆವು" ಎಂದು ಅಲ್ಲಿ ಕೂಡಿದ ಬ್ರಾಹ್ಮಣರಿಗೆಲ್ಲ ಶ್ರೀ ಗುರುಗಳು ಸ್ಪಷ್ಟವಾಗಿ ವಿಸ್ತರಿಸಿ ಹೇಳಿದರು. ಆಗ ಎಲ್ಲರೂ ಗುರುಗಳಿಗೆ ವಂದಿಸಿ ಗುರುಸ್ಮರಣೆಯೊಂದಿಗೆ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ದತ್ತನ ಪತ್ನಿ ಪತಿವ್ರತೆಯು ಗಂಡನೊಡನೆ ಸಂಗಮ ಸ್ನಾನ ಮಾಡಿದಳು. ಉಭಯತರೂ ಸಂತೋಷದಿಂದ ಶ್ರೀ ಗುರುಗಳನ್ನು ಪೂಜಿಸಿದರು. ಬ್ರಾಹ್ಮಣರನ್ನು ಆರಾಧಿಸಿದರು. ಇಷ್ಟಾಗುವಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಆ ಸತಿ–ಪತಿಯರು ಊರೊಳಗಿನ ಗುರುಮಠಕ್ಕೆ ಬಂದರು. ಶ್ರೀ ಗುರುಗಳನ್ನು ಪೂಜಿಸಿ ಆರತಿ ಮಾಡಿದರು. ಆನಂದ ಸಾಗರದಲ್ಲಿ ಮಗ್ನರಾದರು.

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

# ೩೩ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ || ಸಿದ್ಧಮುನಿಯು ನಾಮಧಾರಕನಿಗೆ ಈ ಮೊದಲಿನ ಕಥೆಯನ್ನು ಮುಂದುವರಿಸಿ ಹೇಳಹತ್ತಿದನು. ಎಂತೆಂದರೆ:—

"ನಾಮಧಾರಕ ! ಮಾಹುರಿಯ ದತ್ತನೂ ಅವನ ಸತಿ ಸಾವಿತ್ರಿಯೂ ಅಂದಿನ ಇರುಳನ್ನು ಗಾಣಗಾಪುರದ ಗುರುಮಠದಲ್ಲಿ ಆನಂದದಿಂದ ಕಳೆದರು. ಮರುದಿನ ಬೆಳಗಿನಲ್ಲಿ ಆ ದಂಪತಿಗಳು ಶ್ರೀಗುರುಗಳ ಸನ್ನಿಧಿಗೆ ಬಂದು ನಮಸ್ಕಾರ ಮಾಡಿ ಕುಳಿತರು. ಸಾವಿತ್ರಿಯು ಗುರುಗಳನ್ನು ಕುರಿತು— "ನಿನ್ನಿನ ದಿನ ನಾನು ಪ್ರಲಾಪಿಸುತ್ತಿರುವಾಗ ಕೂಡಿದ ಜನಜಂಗುಳಿಯ ಮಧ್ಯದಿಂದ ಒಬ್ಬ ಯೋಗೇಶ್ವರರು ಬಂದು ನನಗೆ ಬುದ್ಧಿವಾದ ಹೇಳಿದರು. ಹಾಗು ಪ್ರೇತಕ್ಕೆ ಧರಿಸುವ ಕುರಿತು ನನ್ನ ಕೈಯಲ್ಲಿ ಭಸ್ಮ ಹಾಗು ರುದ್ರಾಕ್ಷಿಗಳನ್ನು ಕೊಟ್ಟು 'ಇವನ್ನು ಪ್ರೇತಕ್ಕೆ ಧರಿಸು ಹಾಗು ಸಂಗಮದಲ್ಲಿಯ ಗುರುಗಳಿಂದ ಚರಣೋದಕ ತಂದು ಪ್ರೋಕ್ಷಿಸು' ಎಂದು ಅಪ್ಪಣೆ ಮಾಡಿ ಆಗಲೇ ಮರೆಯಾದರು. ಅವರು ಕೊಟ್ಟ ರುದ್ರಾಕ್ಷಿಗಳು ನನ್ನಲ್ಲಿಯೇ ಉಳಿದಿವೆ" ಎಂದು ಹೇಳಿದಳು. ಆಕೆಯ ಹೇಳಿಕೆಯನ್ನು ಕೇಳಿ ಗುರುಗಳು ನಕ್ಕು— "ಸಾಧ್ವಿ ! ನಿನ್ನ ಕೈಯಲ್ಲಿ ರುದ್ರಾಕ್ಷಿ ಕೊಟ್ಟು ನಾವು ನಿನ್ನ ಭಕ್ತಿಯನ್ನು ಪರೀಕ್ಷಿಸಿದೆವು. ಆ ರುದ್ರಾಕ್ಷಿಯ ಮಹಿಮೆಯನ್ನು ನೀನು ಅರಿತಿರುವದಿಲ್ಲ ಹೇಳುವೆವು ಕೇಳು.

"ಸಾಧ್ವಿ ! ರುದ್ರಾಕ್ಷಿಯ ಮಹಿಮೆ ಅಗಮ್ಯವಾಗಿರುವದು. ಭಕ್ತಿಯಿಂದಾಗಲಿ ಭಕ್ತಿಯಿಲ್ಲದಾ

ಗಲಿ ರುದ್ರಾಕ್ಷಿಯನ್ನು ಧರಿಸುವವನು ನಿಷ್ಪಾಪಿಯಾಗುವನು. ರುದ್ರಾಕ್ಷಿಗಳನ್ನು ಧರಿಸುವದರಿಂದ ಅಗಣ್ಯ ಪ್ರಾಪ್ತಿಯಾಗುವದು. ಶ್ರುತಿಗಳು ರುದ್ರಾಕ್ಷಿಯಂಥ ಇನ್ನೊಂದು ದೇವರಿಲ್ಲ ಎಂದು ಸಾರುವವು. ಒಂದು ಸಾವಿರ ರುದ್ರಾಕ್ಷ ಧರಿಸುವವನು ರುದ್ರ ಸ್ವರೂಪನೇ ಆಗುವನು. ಇನ್ನು ಒಂದು ಸಾವಿರ ರುದ್ರಾಕ್ಷಿಗಳು ದೊರೆಯದಿದ್ದಲ್ಲಿ ಎರಡೂ ತೋಳಗಳಲ್ಲಿ ಹದಿನಾರರಂತೆ ಧರಿಸಬೇಕು. ಚಂಡಿಕೆಗೆ ಒಂದು, ಎರಡೂ ಎರಡೂ ಕೈಗಳಲ್ಲಿ ಇಪ್ಪತ್ನಾಲ್ಕು, ಕಂಠದಲ್ಲಿ ಮೂವತ್ತೆರಡು, ಮಸ್ತಕದಲ್ಲಿ ಮೂವತ್ತೆರಡು ಹಾಗು ಕಿವಿಗಳಲ್ಲಿ ಹನ್ನೆರಡು ಈ ಸಂಖ್ಯೆಗಳಂತೆ ರುದ್ರಾಕ್ಷಿಗಳನ್ನು ಧರಿಸಿಕೊಳ್ಳಬೇಕು. ಕಂಠದಲ್ಲಿ ಒಂದ ನೂರಾ ಎಂಟು ರುದ್ರಾಕ್ಷಿಯ ಮಾಲೆ ಧರಿಸಿದವನು ರುದ್ರಪುತ್ರನ ಸಮಾನನಾಗುವನು. ರುದ್ರಾಕ್ಷಿ ಮಾಲೆಯಲ್ಲಿ ಮುತ್ತು, ಹವಳ ಸ್ಫಟಿಕ, ಬೆಳ್ಳಿ, ಬಂಗಾರ, ವೈಢೂರ್ಯ ಇವುಗಳನ್ನು ಸಮನ್ವಯಗೊಳಿಸಿ ಧರಿಸಬೇಕು. ಕೊರಳಲ್ಲಿ ರುದ್ರಾಕ್ಷಿ ಮಾಲೆ ಧರಿಸಿದವನು ರುದ್ರ ಲೋಕದಲ್ಲಿ ಚಿರಂತನ ವಾಸವಾಗುವನು. ರುದ್ರಾಕ್ಷಿಯಂತೆ ಭಸ್ಮ ಮಹಿಮೆಯೂ ಇರುವದು. ಹಣೆಯ ಮೇಲೆ ತ್ರಿಪುಂಡ್ರ ಧರಿಸದವನ ಜನ್ಮವು ವ್ಯರ್ಥವು. ತಲೆ ಹಾಗು ಕಿವಿಗಳಿಗೆ ರುದ್ರಾಕ್ಷಿ ಕಟ್ಟಿಕೊಂಡು ಸ್ನಾನ ಮಾಡಲು ಗಂಗಾಸ್ನಾನದ ಫಲವು ಲಭಿಸುವದು. ಶಿವ ಪೂಜೆಗೆ ರುದ್ರಾಕ್ಷಿಯನ್ನಿಟ್ಟು ರುದ್ರಸೂಕ್ತದಿಂದ ಅಭಿಷೇಕ ಮಾಡಬೇಕು. ರುದ್ರಾಕ್ಷಿಗಳಲ್ಲಿ ಏಕಮುಖ, ಪಂಚಮುಖ, ಏಕಾದಶಮುಖ ಹಾಗು ಚತುರ್ದಶಮುಖ ಹೀಗೆ ಬೇರೆ ಬೇರೆ ಪ್ರಕಾರಗಳಿರುವವು. ಇವುಗಳನ್ನು ಧರಿಸಿದವರಿಗೆ ಚತುರ್ವಿಧ ಪುರುಷಾರ್ಥ ದೊರಕೊಳ್ಳುವವು.

ರುದ್ರಾಕ್ಷಿಯ ಮಹಿಮೆಯನ್ನು ಬೋಧಿಸುವ ಪೂರ್ವಕಾಲದ ಕಥೆಯೊಂದು ವಿಶಿಷ್ಟವೂ ಗಹನವೂ

ಆಗಿರುವದು. ಆ ಕಥೆಯ ಶ್ರವಣದಿಂದ ಪಾಪಗಳು ಓಡಿ ಹೋಗುವವು. ಆ ಕಥೆ ಯಾವುದೆಂದರೆ—

'ಕಾಶ್ಮೀರ ದೇಶದಲ್ಲಿ ಭದ್ರಸೇನನೆಂಬ ರಾಜನಿದ್ದನು. ಸುಧರ್ಮನೆಂಬವನು ಅವನ ಮಗನು. ರಾಜನ ಪ್ರಧಾನಿಗೆ ಒಬ್ಬ ಮಗನಿದ್ದನು. ಅವನ ಹೆಸರು 'ತಾರಕ' ಎಂದು ಇದ್ದಿತು. ಸುಧರ್ಮ-ತಾರಕ ಇವರೀರ್ವರೂ ಓರಗೆಯುವರು, ಇಬ್ಬರೂ ಜ್ಞಾನವಂತರು. ಶಿವಭಕ್ತರು. ವಿದ್ಯೆ-ಆಟ-ನೋಟ ಮುಂತಾದ ಪ್ರತಿಯೊಂದು ಪ್ರಸಂಗದಲ್ಲಿ ಅವರು ಅಗಲುತ್ತಿರಲಿಲ್ಲ. ಇಬ್ಬರೂ ತಮ್ಮ ಐಶ್ವರ್ಯಕ್ಕನುಸರಿಸಿ ಅಮೂಲ್ಯ ಆಭರಣಗಳನ್ನು ಧರಿಸಲಿಕ್ಕೆ ಮೆಚ್ಚುತ್ತಿರಲಿಲ್ಲ. ಕೇವಲ ರುದ್ರಾಕ್ಷಿ-ಭಸ್ಮಗಳಿಂದಲೇ ಅವರು ತಮ್ಮನ್ನು ಅಲಂಕರಿಸಿಕೊಳ್ಳುತ್ತಿದ್ದರು. ಅವರವರ ತಾಯಿ-ತಂದೆಗಳು ಮಕ್ಕಳ ಅಕ್ಕರತೆ ನೋಡುವದಕ್ಕೆಂದು ಅವರ ಮೈಮೇಲೆ ರನ್ನ-ಚಿನ್ನಗಳ ಒಡವೆ ಹಾಕಿದರೂ ಅವರು ಆಗಲೇ ಅವುಗಳನ್ನು ತೆಗೆದು ಬ್ರಾಹ್ಮಣರಿಗೆ ದಾನ ಕೊಟ್ಟು ಬಿಡುತ್ತಿದ್ದರು.

ಹೀಗಿರಲು ಒಂದು ದಿನ ರಾಜಮಂದಿರಕ್ಕೆ ಪರಾಶರ ಋಷಿಗಳು ಬಂದರು. ಅವರು ತ್ರಿಕಾಲ ಜ್ಞಾನಿಗಳು. ರಾಜನು ಆ ಋಷಿಗಳನ್ನು ಸತ್ಕರಿಸಿ ಸುಧರ್ಮ-ತಾರಕರ ಸ್ಥಿತಿಗತಿಯನ್ನು ತಿಳಿಸಿ ಇದರ ಕಾರಣವೇನಿರಬಹುದೆಂದು ಕೇಳಿದನು. ಪರಾಶರರು ರಾಜನ ಪ್ರಶ್ನೆ ಕೇಳಿ ಆ ಎರಡೂ ಹುಡುಗರ ಜನ್ಮಾಂತರ ವೃತ್ತವನ್ನು ಜ್ಞಾನದೃಷ್ಟಿಯಿಂದ ನೋಡಿ ಹೇಳಹತ್ತಿದರು. ಎಂತೆಂದರೆ—

"ರಾಜ ! ಹಿಂದಕ್ಕೆ ನಂದಿಗ್ರಾಮದಲ್ಲಿ ಒಬ್ಬ ವೇಶ್ಯೆಯಿದ್ದಳು, ಆಕೆಯ ಸಿರಿವಂತಿಕೆಯು ಅನುಪಮ್ಯವಾಗಿತ್ತು. ಆಕೆ ವೇಶ್ಯೆಯಾದರೂ ಪತಿವ್ರತೆಯಂತೆ ಆಕೆಯ ಆಚರಣೆಯಿದ್ದಿತು. ಅವನು ತನ್ನ ನಾಟ್ಯ

ಮಂದಿರದಲ್ಲಿ ಒಂದು ಕೋಳಿ ಹಾಗು ಒಂದು ಮಂಗವನ್ನು ಸಾಕಿದ್ದಳು. ವಿನೋದಕ್ಕಾಗಿ ಆ ವೇಶ್ಯೆಯು ಆ ಎರಡೂ ಪ್ರಾಣಿಗಳ ಕೊರಳುಗಳಿಗೆ ರುದ್ರಾಕ್ಷಿಗಳನ್ನು ಕಟ್ಟಿದ್ದಳು. ಹಾಗು ಅವೆರಡನ್ನೂ 'ಸದಾಶಿವ' ಎಂಬ ಹೆಸರಿನಿಂದ ಸಂಬೋಧಿಸುತ್ತಿದ್ದಳು.

ಹೀಗಿರಲು ಒಂದು ದಿನ 'ಶಿವವೃತ್ತಿ' ಎಂಬ ಧನಿಕ ಬಣಜಿಗನು ಆ ವೇಶ್ಯೆಯ ಮನೆಗೆ ಬಂದನು. ಅವನು ಭಸ್ಮ-ರುದ್ರಾಕ್ಷಿಗಳನ್ನು ಧರಿಸಿದ್ದನಲ್ಲದೆ ಬಲಗೈಯಲ್ಲಿ ಒಂದು ಅಮೂಲ್ಯ ರತ್ನದ ಲಿಂಗವನ್ನು ಕಟ್ಟಿಕೊಂಡಿದ್ದನು. ವೇಶ್ಯೆಯು ತನ್ನಲ್ಲಿ ಬಂದ ಆ ಬಣಜಿಗನನ್ನು ಸತ್ಕರಿಸಿ ತನ್ನ ನಾಟ್ಯಮಂದಿರದಲ್ಲಿ ಇಳಿಸಿದಳು. ಅವನ ಕೈಯಲ್ಲಿಯ ರತ್ನ ಲಿಂಗನನ್ನು ನೋಡಿದಳು. ಆಕೆ ಆ ಬಣಜಿಗನಿಗೆ— "ನೀವು ಈ ಲಿಂಗವನ್ನು ಕೊಟ್ಟರೆ ನಾನು ಮೂರು ದಿನಗಳ ಮಟ್ಟಿಗೆ ನಿಮ್ಮ ಕುಲಸ್ತ್ರೀಯಾಗಿ ಧರ್ಮದಂತೆ ಆಚರಿಸುವೆನು" ಎಂದು ನುಡಿದು ತನ್ನ ಆಸೆಯನ್ನು ಪ್ರಕಟಿಸಿದಳು. ಬಣಜಿಗನು ಆಕೆಯ ಹೇಳಿಕೆಗೆ ಆಕೆಯಿಂದ ಪ್ರತಿಜ್ಞೆ ಮಾಡಿಸಿಕೊಂಡು ಒಪ್ಪಿಕೊಂಡನು. ಹಾಗು ಆಕೆಯ ಕೈಗೆ ಆ ಲಿಂಗವನ್ನು ಕೊಟ್ಟು— "ಗಣಿಕೆ! ಈ ಲಿಂಗವೆಂದರೆ ನನ್ನ ಪ್ರಾಣವಾಗಿದೆ, ಇದನ್ನರಿತು ಇದನ್ನು ಕಾಯ್ದಿರಿಸು. ಇದರಲ್ಲಿ ತಪ್ಪಿಯಾದರೆ ನಾನು ನಿನ್ನೆದುರಿನಲ್ಲಿಯೇ ಸಾಯುವೆನು" ಎನ್ನಲು ಆಕೆ ಒಪ್ಪಿದಳು.

ಆ ಬಳಿಕ ಇಬ್ಬರೂ ನೃತ್ಯಶಾಲೆಯಲ್ಲಿ ಸೊಗಸಿನಿಂದ ಇರುತ್ತಿರನಾಗ ಅಂದಿನ ಸೂರ್ಯನು ಅಸ್ತಂಗತನಾದನು. ವೇಶ್ಯೆಯು ಸಂಭೋಗ ಸಮಯದಲ್ಲಿ ಆ ರತ್ನಲಿಂಗವನ್ನು ಸ್ಪರ್ಶಿಸಬಾರದೆಂಬ ಭಾವನೆಯಿಂದ ಅದನ್ನು ನೃತ್ಯಶಾಲೆಯ ಮಂಟಪದಲ್ಲಿಯೇ ಇಟ್ಟಳು ಹಾಗು ಆ ಶಿವವೃತ್ತಿ ಬಣಜಿಗನನ್ನು ತನ್ನ

ವಾಸ್ತವ್ಯದ ಮನೆಗೆ ಕರೆದೊಯ್ದಳು. ರಾತ್ರಿಯಾಯಿತು ಅವಳು ಅವನನ್ನು ತನ್ನ ಶಯ್ಯಾಮಂದಿರಕ್ಕೆ ಕರ ಕೊಂಡು ಹೋದಳು. ಅಲ್ಲಿ ಅವರು ನೂತನ ಪತಿ-ಪತ್ನಿಯರಂತೆ ಕ್ರೀಡಿಸುತ್ತ ಕೆಲ ಹೊತ್ತು ಕಳೆಯು ವಷ್ಟರಲ್ಲಿಯೇ ಮಧ್ಯರಾತ್ರಿ ಸುಮಾರಕ್ಕೆ ಆ ನಾಟ್ಯಮಂದಿರಕ್ಕೆ ಬೆಂಕೆಬಿದ್ದಿತು. ಕ್ಷಣದಲ್ಲಿಯೇ ಪ್ರಜ್ವಲಿಸಿತು. ಓಣಿಯಲ್ಲಿ ಜನರ ಕೋಲಾಹಲ ನಡೆಯಿತು. ಗದ್ದಲದ ಸಪ್ಪಳಕ್ಕೆ ವೇಶ್ಯೆಯೂ ಶಿವವೃತ್ತಿಯೂ ಶಯ್ಯಾ ಮಂದಿರದಿಂದ ಹೊರ ಬಂದು ನೋಡುತ್ತಾರೆ! ನಾಟ್ಯಮಂದಿರವೆಲ್ಲವೂ ಸುಟ್ಟು ಭಸ್ಮವಾಗಿತ್ತು. ಆಗ ವೇಶ್ಯೆಯು ಎದೆ ಎದೆ ಬಡಿದುಕೊಂಡು ಅಳಹತ್ತಿದಳು. 'ನನ್ನ ಪ್ರಾಣಲಿಂಗ ಹೋಯಿತು' ಎಂದು ಚೀರ ಹತ್ತಿದಳು. ಕೂಡಿದವರೆಲ್ಲ ಕೆದಕಿದರಿ ನೋಡಿದರು. ಆ ರತ್ನಲಿಂಗವು ಸುಟ್ಟು ಭಸ್ಮವಾಗಿತ್ತು. ಆ ಅಗ್ನಿ ಯಲ್ಲಿಯೇ ಆಕೆ ಸಾಕಿದ ಕೋಳಿ-ಮಂಗ ಇವೆರಡೂ ದಗ್ಧವಾದವು. ಬಣಜಿಗನು ಆ ವೇಶ್ಯೆಯ ಹತ್ತಿರ ನಿಂತು ದೊಡ್ಡ ದನಿ ತೆಗೆದು ಅಳುತ್ತ ತನ್ನ ಪ್ರಾಣತ್ಯಾಗಕ್ಕೆ ಸಿದ್ಧನಾದನು. ಆ ಅಗ್ನಿಯನ್ನು ಮತ್ತೆ ಪ್ರಜ್ವಲನಗೊಳಿಸಿದನು. 'ನನ್ನ ಲಿಂಗವು ದಹನವಾಯಿತು' ಎಂದು ಉಚ್ಚರಿಸುತ್ತ ಅವನು ಆ ಅಗ್ನಿಯಲ್ಲಿ ದುಮ್ಮಿಕ್ಕಿದನು. ಎಲ್ಲರೂ ಚಕಿತರಾದರು.

ಬಣಜಿಗನು ಸುಟ್ಟು ಸತ್ತುದನ್ನು ನೋಡಿ ವೇಶ್ಯೆಯು— "ನನ್ನ ಪ್ರಾಣೇಶ್ವರನು ಗತಿಸಿದನು. ಇನ್ನು ನಾನೂ ಸಹಗಮನ ಹೋಗುವೆನು" ಎಂದು ಹೇಳಿ ಆಗಲೇ ಬ್ರಾಹ್ಮಣರನ್ನು ಕರೆಯಿಸಿದಳು. 'ಸಹಗಮನದ ಸಂಕಲ್ಪ ಮಾಡಿಸಿರಿ' ಎಂದು ಹೇಳಿಕೊಂಡಳು. ಅವರಿಗೆ ವಸ್ತ್ರ ಭೂಷಣ ಕೊಟ್ಟಳು. ಅಗ್ನಿಗೆ ಮೈಗೊಡಲು ಸಿದ್ಧಳಾದಳು. ಕೂಡಿದ ಜನವು ಆಕೆಯ ಈ ಸಾಹಸವನ್ನು ಧಿಕ್ಕರಿಸಿ ನುಡಿದರೂ ಲೆಕ್ಕಿ

ನಡೆ ಅವಳು ಸೂರ್ಯನನ್ನೂ ಸರ್ವೇಶ್ವರನನ್ನೂ ನಮಿಸಿ ಚಿತೆಗೆ ಪ್ರದಕ್ಷಿಣೆ ಹಾಕಿ ಅಗ್ನಿಯಲ್ಲಿ ಹಾರಿಕೊಳ್ಳಲು ಆಗಲೇ-ಶಿವನು ತನ್ನ ಸಗುಣಸ್ವರೂಪದಿಂದ ಆ ಅಗ್ನಿಕುಂಡದಿಂದ ಪ್ರಕಟನಾದನು. ಹಾಗು ಆ ವೇಶ್ಯೆಯಳ ಕೈಹಿಡಿದು ಕುಂಡದಿಂದ ಹೊರಕ್ಕೆ ಕರೆತಂದನು. ಆಗ ಈಶ್ವರನು ಅವಳಿಗೆ— “ವೇಶ್ಯೆ ! ನಿನ್ನ ಧರ್ಮ-ಧೈರ್ಯ ಪರೀಕ್ಷಿಸಲು ನಾನೇ ಶಿವವೃತ್ತಿ ಬಣಜಿಗನಾಗಿ ಇಲ್ಲಿಗೆ ಬಂದೆನು. ಮಾಯೆಯಿಂದ ಅಗ್ನಿ ನಿರ್ಮಿಸಿ ನಿನ್ನ ನಾಟ್ಯಮಂದಿರ ದಗ್ಧಗೊಳಿಸಿದೆನು. ನೀನು ವೇಶ್ಯೆಯಾಗಿದ್ದರೂ ಶ್ರೇಷ್ಠ ಪತಿವ್ರತೆಯೆಂಬುದನ್ನು ಕಂಡೆನು. ಸಂತುಷ್ಟನಾದೆನು. ನಿನ್ನ ಇಚ್ಛಿತ ವರವೇನು? ” ಎಂದು ಕೇಳಲು ವೇಶ್ಯೆಯು— “ನಾನು ನಿಮ್ಮ ಚರಣಕಮಲದ ಭೃಂಗವಾಗಿರುವಂತೆಯೂ ನನ್ನ ಆಪ್ತೇಷ್ಟರೆಲ್ಲ ನಿಮ್ಮ ಸನ್ನಿಧಿ ಸೇರುವಂತೆಯೂ ಕರುಣಿಸು'' ಎಂದು ಬೇಡಿಕೊಂಡಳು. ಶಿವನು ತಥಾಸ್ತು ಎಂದು ಅವರನ್ನೆಲ್ಲ ಕೂಡಿಕೊಂಡು ವಿಮಾನದಿಂದ ಸ್ವರ್ಗಕ್ಕೆ ಹೋದನು'' ಎಂದು ಪರಾಶರರು ಹೇಳಿ— ‘ರಾಜಾ ! ಆ ನಾಟ್ಯಮಂದಿರದಲ್ಲಿ ದಗ್ಧವಾದ ಕೋಳಿಯು ಮಂತ್ರಿಯ ಮಗನಾಗಿಯೂ ಮಂಗನು ನಿನ್ನ ಮಗನಾಗಿಯೂ ಈಗ ಜನ್ಮಿಸಿ ಬಂದಿರುವರು. ಪೂರ್ವ ಸಂಸ್ಕಾರದಿಂದ ಇವರು ರುದ್ರಾಕ್ಷಿ ಧರಿಸುತ್ತಿರುವರು. ಇಬ್ಬರೂ ಜ್ಞಾನಿಗಳೂ ಈಶ್ವರಭಕ್ತರಾಗಿರುವರು. ಇವರ ಪುಣ್ಯಕ್ಕೆ ಎಣೆಯಿಲ್ಲ” ಎಂದು ಪರಾಶರರು ಭದ್ರಸೇನರಾಜನಿಗೆ ಹೇಳಿದರು. ಶ್ರೀ ಗುರುಗಳು ದತ್ತನ ಪತ್ನಿ ಸಾವಿತ್ರಿಗೆ ಈ ಕಥೆಯಿಂದ ರುದ್ರಾಕ್ಷಿಯ ಮಹಿಮೆ ಬೋಧಿಸಿದರು.

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೩೪ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಶ್ರೀ ಗುರುಗಳು ದತ್ತ ದಂಪತಿಗೆ ರುದ್ರಾಕ್ಷಿಯ ಮಹಿಮೆಯನ್ನು ಹೇಳಿದರು. ಇನ್ನು ಮುಂದೆ ಪರಾಶರರು ಭದ್ರಸೇನ ರಾಜನಿಗೆ ರುದ್ರಜಪದ ಮಹಿಮೆಯನ್ನು ಹೇಳಿದ ವರ್ಣನೆಯನ್ನು ಆ ದಂಪತಿಗಳಿಗೆ ಬೋಧಿಸುವರು.

ರಾಜನು ಪರಾಶರರನ್ನು ಕುರಿತು— “ಸ್ವಾಮಿ ! ನೀವು ತ್ರಿಕಾಲಜ್ಞರು. ಇನ್ನು ಮುಂದೆ ನನ್ನ ಮಗನ ಭವಿಷ್ಯ ಸ್ಥಿತಿಯು ಎಂತೊದಗುವದು? ” ಎಂದು ಕೇಳಲು ಪರಾಶರರು— ‘‘ರಾಜಾ ! ನಿನ್ನ ಮಗನ ಭವಿಷ್ಯ ಸ್ಥಿತಿಯು ನಿನಗೆ ದುಃಖದಾಯಕವಿರುವದು. ಅದನ್ನು ಹೇಳುವೆನು ಕೇಳು. ನಿನ್ನ ಮಗನಿಗೆ ಕೇವಲ ಹನ್ನೆರಡೇ ವರುಷ ಆಯುಷ್ಯವು. ಅದರಲ್ಲಿಯ ಎಲ್ಲ ದಿನಗಳು ಗತಿಸಿ ಇನ್ನು ಏಳೇ ದಿನಗಳು ಮಾತ್ರ ಉಳಿದಿವೆ. ಎಂಟನೆಯ ದಿನವೇ ನಿನ್ನ ಮಗನು ಮೃತ್ಯುವಿನ ದವಡೆಗೆ ಸಿಕ್ಕುಬೀಳುವನು” ಎಂದು ಹೇಳಲು ರಾಜನು ಬಲು ದುಃಖಪಡಹತ್ತಿದನು. ಅವನ ಆ ಸ್ಥಿತಿಯನ್ನು ನೋಡಿ ಪರಾಶರರು— ರಾಜಾ ! ನೀನು ಇನ್ನು ಜಗದ್ಗುರು ಶಿವನಿಗೆ ಮೊರೆಯಿಡು. ಶಿವ ಸ್ಮರಣೆಯೊಂದಿಗೆ ಆ ದೇವನನ್ನು ಆರಾಧಿಸು. ಆತನಿಂದ ನಿನ್ನ ಮಗನ ಅಪಮೃತ್ಯು ದೂರಾಗುವದು” ಎನ್ನಲು ರಾಜನು ಅದು ಹೇಗೆ? ’’ ಎಂದು ಕೇಳಿದನು. ಅದಕ್ಕೆ ಪರಾಶರರು—

‘‘ರಾಜಾ ! ಆ ಮೂರ್ತಿಮಂತ ದೇವನು ಸೃಷ್ಟಿಯ ಕಾರಣಕ್ಕಾಗಿ ಬ್ರಹ್ಮನನ್ನು ನಿಯಮಿಸಿ

ದನು. ಆ ಬ್ರಹ್ಮನಿಂದ ಚತುರ್ವೇದ ಹಾಗು ಉಪನಿಷದುಗಳನ್ನು ಹುಟ್ಟಿಸಿಸಿದನು. ಉಪನಿಷದ ಗಳನ್ನು ಆತ್ಮತತ್ವ ಸಂಗ್ರಹವೆಂದು ಸರ್ವೇಶ್ವರನು ತನ್ನಲ್ಲಿಟ್ಟುಕೊಂಡನು. ಅವುಗಳಲ್ಲಿಯು ರುದ್ರಾಧ್ಯಾಯವನ್ನು ಮಾತ್ರ ಬ್ರಹ್ಮನಿಗೆ ಕೊಟ್ಟನು. ಆ ರುದ್ರಾಧ್ಯಾಯದ ಮಹಿಮೆ ಶ್ರೇಷ್ಠವಿದೆ. ಅದು ಯಜುರ್ವೇದಾತ್ಮಕ ಉಪನಿಷದ ಸಾರವು. ಬ್ರಹ್ಮನು ತನಗೆ ದೊರೆತ ಆ ರುದ್ರಾಧ್ಯಾಯವನ್ನು ಮರೀಚಿ, ಅತ್ರಿ ಮೊದಲಾದ ದೇವ ಋಷಿಗಳಿಗೆ ಬೋಧಿಸಿದನು. ಆ ಋಷಿಗಳು ಮುಂದೆ ತಮ್ಮ ಪುತ್ರಾದಿಕರಿಗೆ ಪಠಣ ಮಾಡಿಸಿದರು. ಶಿಷ್ಯರಿಗೆ ಕಲಿಸಿದರು. ಹೀಗೆ ಮುಂದೆ ಪರಂಪರೆಯಿಂದ ಆ ರುದ್ರಾಧ್ಯಾಯವು ಭೂಮಿಯಲ್ಲಿ ಹರಡಿತು. ರಾಜಾ ! ರುದ್ರಜಪವು ಶ್ರೇಷ್ಠ ಮಂತ್ರವು. ಆ ಮಂತ್ರದಿಂದ ತಪಸ್ಸಾಧ್ಯವಾಗದು. ಹಾಗು ಚತುರ್ವಿಧ ಪುರುಷಾರ್ಥಗಳು ಆ ಮಂತ್ರ ಪ್ರಭಾವದಿಂದ ಲಭಿಸುವವು. ರಾಜಾ ! ಬ್ರಹ್ಮನಿಂದ ರಚಿತ ವೇದ ತೀರ್ಥದಲ್ಲಿ ಸ್ನಾನಮಾಡಿ ಧರ್ಮ-ಕರ್ಮಗಳನ್ನು ಆಚರಿಸಬೇಕು. ಇದರಿಂದ ಇಹ-ಪರ ಸೌಖ್ಯ ಲಭಿಸುವದು. ಮಹಾ ಪಾತಕಗಳು ಹಾಗು ಉಪಪಾತಕಗಳು ದೂರಾಗುವವು.

ರಾಜಾ ! ಒಂದು ಸಾರೆ ಯಮನು ತನ್ನಲ್ಲಿಯ ಪಾತಕಗಳನ್ನು ಕುರಿತು— "ನೀವು ಭೂಮಿಗೆ ಹೋಗಿರಿ, ಅಲ್ಲಿ ಸುತ್ತಾಡಿ ಅಧರ್ಮವನ್ನು ಹಬ್ಬಿಸಿರಿ. ನಿಮ್ಮ ಜೊತೆಗೆ ಉಪಪಾತಕಗಳನ್ನು ಸಹಾಯಕ್ಕೆಂದು ಕರೆದುಕೊಂಡು ಹೋಗಿರಿ. ಹೀಗೆ ನೀವು ಯತ್ನಿಸಿದರೆ ನಮ್ಮಲ್ಲಿಯು ನರಕಗಳು ತುಂಬಿಕೊಳ್ಳುವವು. ಹಾಗು ನಮ್ಮ ಲೋಕದ ಮಹತ್ವವು ಬೆಳೆಯುವದು" ಎಂದು ಅಪ್ಪಣೆ ಕೊಟ್ಟು ಕಳಿಸಿದನು.

ಯಮನ ಆಜ್ಞೆಯಿಂದ ಪಾತಕಗಳೆಲ್ಲ ಭೂಮಿಗೆ ಬಂದವು. ಸುತ್ತಾಡಹತ್ತಿದವು. ಎಲ್ಲಿ ನೋಡಿ

ದಲ್ಲಿ ರುದ್ರಜಾಪ್ಯವು, ರುದ್ರಮಂತ್ರವು. ಹಾಗು ರುದ್ರಾಭಿಷೇಕವು. ಅವನ್ನೆಲ್ಲ ಪಾತಕಗಳು ಕಂಡವು.
ಅಂಜಿ ಹಿಂಜರಿದು ಹೋಗಿ ಯಮನನ್ನು ಸೇರಿದವು. ಆ ಪಾತಕೋಪಪಾತಕಗಳು ಯಮನನ್ನು ಕುರಿತು—
"ಸ್ವಾಮಿ! ನಿನ್ನ ಆಜ್ಞೆಯಿಂದ ಭೂಲೋಕಕ್ಕೆ ಹೋದೆವು. ಅಲ್ಲಿ ಎಲ್ಲ ಕಡೆಗೂ ಸಂಚರಿಸಿದೆವು. ಎಲ್ಲಿ
ನೋಡಿದಲ್ಲಿ ಎಲ್ಲರಲ್ಲಿ ರುದ್ರಾನುಷ್ಠಾನವೇ ನಡೆದುದರಿಂದ ಅಲ್ಲಿ ನಿಲ್ಲುವದಕ್ಕೂ ಅಧರ್ಮದ ಜಾಲವನ್ನು
ಬೀಸಿ ಚೆಲ್ಲುವದಕ್ಕೂ ನಾವು ಸಮರ್ಥರಾಗಲಿಲ್ಲ. ಅಲ್ಲಿಯ ಪ್ರತಿಯೊಂದು ಗ್ರಾಮ, ನಗರ, ನದೀತೀರ,
ದೇವಾಲಯ, ಪುಣ್ಯಕ್ಷೇತ್ರ ಮುಂತಾದವುಗಳಲ್ಲೆಲ್ಲ ಬ್ರಾಹ್ಮಣರು ರುದ್ರಜಾಪ್ಯ ರುದ್ರಾನುಷ್ಠಾನಗಳನ್ನೇ ನಡೆ
ಯಿಸಿರುವರು. ನೂರಾರು ಪ್ರಾಯಶ್ಚಿತ್ತಗಳಿಗಿಂತಲೂ ಮಿಗಿಲಾದ ಪುರುಷಸೂಕ್ತ ಪಠಣಮಾಡುವ ಜನರಿಗೆ
ಅಲ್ಲಿ ಮಿತಿಯಿಲ್ಲ. ಮಹಾಪಾಪಿಷ್ಠನು ಆ ಭೂಮಿಯಲ್ಲಿ ತನ್ನ ಪಾಪ ಕಳೆದುಕೊಂಡು ಪುಣ್ಯವಂತನಾಗುವ
ನೆಂದಮೇಲೆ ಅಂಥಲ್ಲಿ ಹೋಗಲು ನಮಗೆ ಮಹಾ ಭಯವು! ಸ್ವಾಮಿ! ಆ ರುದ್ರಜಾಪ್ಯವು ನಮಗೆ ಕಾಲ
ಕೂಟದ ವಿಷದಂತೆ ತೋರಹತ್ತಿದ್ದರಿಂದ ಅಲ್ಲಿ ನಿಲ್ಲಲು ನಮಗೆ ಅಶಕ್ಯವಾಯಿತು" ಎಂದವು. ಅವರ ನುಡಿ
ಗಳನ್ನು ಕೇಳಿ ಯಮನು ಸಿಟ್ಟಾಗಿ ಆಗಲೇ ಬ್ರಹ್ಮನ ಬಳಿಗೆ ಹೋದನು. ಅವನನ್ನು ಕುರಿತು— "ಚತು
ರ್ಮುಖನೆ! ನಿನ್ನ ಆಜ್ಞೆಯಂತೆ ಭೂಲೋಕಕ್ಕೆ ನನ್ನ ದೂತರನ್ನು ಕಳಿಸಿದೆನು. ಆದರೆ ಅಲ್ಲಿ ಪಾಪಿಷ್ಠ
ರಾರೂ ದೊರೆಯಲಿಲ್ಲ. ಎಲ್ಲರೂ ರುದ್ರಜಪ-ರುದ್ರಮಂತ್ರ ಪಠಣಗಳಿಂದ ಪುನೀತರಾಗಿ ವರ್ತಿಸುವರಂತೆ.
ಅಂದಮೇಲೆ ಇನ್ನು ನಮ್ಮ ನರಕಾಲಯದ ಗತಿಯೇನು? ನರಕವೇ ಶೂನ್ಯವಾದ ಮೇಲೆ ಇಡೀ ನನ್ನ ರಾಜ್ಯವೇ
ನಿಷ್ಫಲವಾದಂತಲ್ಲವೇ? ಇದಕ್ಕೇನಾದರೂ ನೀವು ಉಪಾಯವನ್ನು ಯೋಜಿಸಬೇಕು" ಎಂದು ಬೇಕೊಂಡಿ

ಡನು. ಬ್ರಹ್ಮನು ಯಮನ ವಿನಂತಿಯನ್ನು ಕೇಳಿ— "ಯಮರಾಜಾ ! ಆ ಲೋಕದಲ್ಲಿ ರುದ್ರಜಪ ನಡೆ ದಿರುವದಂತೂ ಸೂಕ್ತವು, ಆದರೆ ಅಂಥದರಲ್ಲಿಯೇ ನೀನು ನಿನ್ನ ಕರ್ತವ್ಯದ ಮಾರ್ಗ ಹಿಡಿಯುತಕ್ಕದ್ದಿತ್ತು. ನಿನ್ನ ಸೇವಕರು ಹಾಗೆ ಮಾಡಲಿಲ್ಲ. ಆ ಭೂಲೋಕದಲ್ಲಿ ಎಷ್ಟೋ ಜನರು ದಾಂಭಿಕವೃತ್ತಿಯಿಂದಲೂ ಮದೋನ್ಮತ್ತತೆಯಿಂದಲೂ ಅನುಷ್ಠಾನ ಮಾಡುವವರಿರುವರು. ಕೆಲವರು ನಿಂತುಕೊಂಡು ಇಲ್ಲವೆ ಮಲಗಿ ಕೊಂಡು ಪಠಿಸುವರು. ಇವರೆಲ್ಲರು ತಾಮಸಿಗಳೂ ಅಜ್ಞಾನಿಗಳೂ ಆಹುದು. ಇಂಥವರನ್ನು ನೀನು ನಿನ್ನ ಅಧಿಕಾರ ಕ್ಷೇತ್ರದಲ್ಲಿಯ ಅಪರಾಧಿಗಳೆಂದು ಗ್ರಹಿಸು. ಹಾಗು ಇವರೆಲ್ಲರನ್ನು ನೀನು ದಂಡಿಸು. ಸದ್ಭಾವ ದಿಂದ ಜಪಿಸುವವರನ್ನು ಸ್ಪರ್ಶಿಸಕೂಡದು" ಎನ್ನಲು ಯಮನು— "ಬ್ರಹ್ಮದೇವ ! ಒಂದು ವೇಳೆ ಆ ರುದ್ರಜಾಪ್ಯರನ್ನು ಸಹ ತರಬಹುದಲ್ಲವೇ? ಎನ್ನಲು ಬ್ರಹ್ಮನು— "ಬೇಡ, ಬೇಡ. ರುದ್ರಜಪದ ಮಹಿಮೆ ಹೆಚ್ಚಿನದಿದೆ. ಪೂರ್ವ ಜನ್ಮದಲ್ಲಿ ಪಾಪ ಮಾಡಿ ಅಲ್ಪಾಯುಷಿಗಳಾದವರು. ಈ ಜಪದಿಂದ ದೀರ್ಘಾಯು ಗಳಾಗುವರು. ಜಾಪಕರ ತೇಜ, ವರ್ಚಸ್ಸು, ಸಂಪತ್ತು, ಧೃತಿ, ಬುದ್ಧಿ, ಜ್ಞಾನ ಹಾಗು ಆಯುರಾರೋ ಗ್ಯಗಳು ವರ್ಧಿಸುವವು. ಅವರಿಗೆ ಮೃತ್ಯುಭಯವಿಲ್ಲ, ಚಿರಜೀವಿಗಳಾಗುವರು" ಎಂದು ಹೇಳಿದನಲ್ಲದೆ ಶತರುದ್ರಾಭಿಷೇಕದ ಫಲವನ್ನು ಹೇಳಿ— "ಯಮನೆ ! ಇನ್ನು ಮುಂದೆ ರುದ್ರಾನುಷ್ಠಾಯಿ ಬ್ರಾಹ್ಮಣ ರನ್ನು ಮುಟ್ಟಬಾರದೆಂದು ನಿನ್ನ ಸೇವಕರಿಗೆ ಕಟ್ಟಪ್ಪಣೆ ಮಾಡಿ ಭೂಮಿಗೆ ಕಳಿಸು" ಎಂದು ಹೇಳಿದನು.

ಬ್ರಹ್ಮನಿಂದ ಅಪ್ಪಣೆ ಪಡೆದು ಯಮನು ತನ್ನ ಲೋಕಕ್ಕೆ ಹಿಂದಿರುಗಿ ಬಂದನು". ಈ ಪ್ರಕಾರ ಪರಾಶರರು ಭದ್ರಸೇನ ರಾಜನಿಗೆ ಬೋಧಿಸಿದರು. ಅವರು— ರಾಜಾ ! ನಿನ್ನ ಮಗನಿಗೊದಗುವ ಅಪಮೃತ್ಯು

ನಿವಾರಣೆಗೆ ಮೇಲ್ತರದ ಉಪಾಯವೇನೆಂದರೆ— 'ಶಿವನಿಗೆ ಹತ್ತು ಸಾವಿರ ರುದ್ರಾಭಿಷೇಚನ ಮಾಡಿಸು, ಇಂತಾದರೆ ಆ ನಿನ್ನ ಮಗನು ಹತ್ತು ಸಾವಿರ ವರುಷ ಪರಿಯಂತವೂ ರಾಜ್ಯವಾಳುವನು, ಇಂದ್ರನಂತೆ ಕೀರ್ತಿವಂತ ನಾಗುವನು. ರಾಜ್ಯಸಿರಿಯು ಹೆಚ್ಚುವದು. ಅವನು ನಿಷ್ಕಂಟಕ ರಾಜ್ಯವಾಳುವನು. ಇದು ನಿಶ್ಚಯವೆಂದು ಗ್ರಹಿಸು. ಈಗಲೇ ಒಂದು ನೂರು ಜನ ಬ್ರಾಹ್ಮಣರನ್ನು ಕರೆಯಿಸಿ ರುದ್ರಾನುಷ್ಠಾನಕ್ಕಾರಂಭಿಸು" ಎನ್ನಲು ರಾಜನು ಪರಾಶರರು ಹೇಳಿದಂತೆ ಅನುಷ್ಠಾನ ಕೈಕೊಂಡನು. ಏಳು ದಿನಗಳವರೆಗೂ ಈಶ್ವರನ ಆರಾಧನೆಯಾಯಿತು. ಆಗ ರಾಜಪುತ್ರನು ನಿಶ್ಚೇಷ್ಟಿತನಾಗಿ ಬಿದ್ದನು. ಪರಾಶರರು ಜಲ ಪ್ರೋಕ್ಷಿಸಿದರು. ಕೂಡಲೆ ಶಿವನು ಅವನ ರಕ್ಷಣೆಗಾಗಿ ಮಹಾಪುರುಷ ಸ್ವರೂಪದಿಂದ ದಂಡ ಧರಿಸಿಕೊಂಡು ತನ್ನ ದೂತರೊಡನೆ ಪ್ರಕಟನಾದನು. ಅಷ್ಟರೊಳಗೇ ಅಲ್ಲಿಗೆ ಬಂದಿದ್ದ ಯಮದೂತರು ಆ ರುದ್ರತೇಜಕ್ಕೆ ಬೆದರಿ ನಡುಗಹತ್ತಿದರು. ವಿಪ್ರರು ಒಂದೆಸವನೆ ಆ ರಾಜಪುತ್ರನ ಮೇಲೆ ಮಂತ್ರಾಕ್ಷತೆ ಚೆಲ್ಲಹತ್ತಿದರು. ಕೈಯಲ್ಲಿ ಮೃತ್ಯುಪಾಶ ತಕ್ಕೊಂಡು ಆ ಕುಮಾರನ ಕೊರಳಿಗೆ ಚೆಲ್ಲಲು ಹವಣಿಸುವ ಯಮದೂತರ ಆಟ ನಡೆಯಲಿಲ್ಲ. ಅಲ್ಲಿ ಅವರು ನಿಲ್ಲದೆ ಓಡಹತ್ತಿದರು. ಶಿವದೂತರು ಅವರನ್ನು ತಮ್ಮ ದಂಡಕಗಳಿಂದ ಹೊಡೆಯುತ್ತ ಬೆಂಬತ್ತಿದರು. ಇಂತು ಯಮದೂತರು ಬಿಟ್ಟೋಡಿದರು. ಬ್ರಾಹ್ಮಣರ ಆಶೀರ್ವಾದದಿಂದ ರಾಜಪುತ್ರನ ಪ್ರಾಣರಕ್ಷಣೆಯಾಯಿತು ! ರಾಜ ಮುಂತಾಗಿ ಎಲ್ಲರಿಗೂ ಆನಂದವೇ ಆನಂದ !

ರಾಜಪುತ್ರನ ಅಪಮೃತ್ಯುವು ದೂರಾದ ಬಗೆಗೆ ರಾಜನು ಸಂತೋಷ ಸಮಾರಂಭ ಹೂಡಿದನು. ಪರಾಶರರ ಮುಖ್ಯತೆಯಲ್ಲಿ ಎಲ್ಲ ಬ್ರಾಹ್ಮಣರ ಪೂಜೆ ಮಾಡಿದನು. ಈ ಸಮಾರಂಭ ನಡೆದಿರುವಾಗಲೇ

ನಾರದರು ಅಲ್ಲಿಗೆ ಬಂದರು. ರಾಜನು ಸತ್ಕರಿಸಿ ಕುಳ್ಳಿರಿಸಿದನು. ರಾಜನು— "ನಾರದರೆ ! ತ್ರೈಲೋಕ್ಯದಲ್ಲಿಯ ವಿಶೇಷ ವಾರ್ತೆಯೇನು? " ಎಂದು ಕೇಳಲು ನಾರದರು— "ರಾಜಾ ! ನಾನು ಕೈಲಾಸಕ್ಕೆ ಹೋಗಿದ್ದೆನು. ಅಲ್ಲಿಂದ ಹಿಂತಿರುಗಿ ಬರುವಾಗ ಮಾರ್ಗದಲ್ಲಿ ಒಂದು ದೃಶ್ಯಕಂಡೆನು. ಯಮದೂತರು ನಿನ್ನ ಮಗನನ್ನು ಎಳೆದೊಯ್ಯುತ್ತಿದ್ದರು. ಶಿವದೂತರು ಓಡುತ್ತ ಬಂದು ಅವರನ್ನು ಅಡ್ಡಗಟ್ಟಿ ಹೊಡೆಯಹತ್ತಿದರು. ಅದರಿಂದ ಯಮದೂತರು ನಿರ್ವಿಣ್ಣರಾಗಿ ನಿನ್ನ ಮಗನನ್ನು ಬಿಟ್ಟು ಓಡಿಹೋದರು. ಅವರು ಶಿವದೂತರಿಂದ ತಮಗಾದ ವ್ಯಥೆಯನ್ನು ಯಮನಿಗೆ ನಿವೇದಿಸಿದರು. ಆಗ ಯಮನು ಸಿಟ್ಟಾಗಿ ವೀರಭದ್ರನ ಬಳಿಗೆ ಹೋಗಿ—ನಿರಪರಾಧಿಗಳಾದ ತನ್ನ ಸೇವಕರಿಗೆ ಶಿವದೂತರಿಂದಾದ ತೊಂದರೆಯನ್ನು ಹೇಳಿದನು. ಆಗ ವೀರಭದ್ರನು— "ಯಮರಾಜಾ , ರಾಜಪುತ್ರ ಆಯುಷ್ಯ ಮುಗಿಯದೆ ಅವನನ್ನು ನಿನ್ನ ದೂತರು ತರುವದು ಯೋಗ್ಯವೇ? ಅವನ ಆಯುಷ್ಯದ ಬಗೆಗೆ ನಿನ್ನ ಚಿತ್ರಗುಪ್ತನನ್ನು ಕರೆಯಿಸಿ ವಿಚಾರಿಸು'' ಎನ್ನಲು ಯಮನು ಆಗಲೇ ಚಿತ್ರಗುಪ್ತನನ್ನು ಕರೆಯಿಸಿದನು. ರಾಜಪುತ್ರನ ಆಯುಷ್ಯವೆಷ್ಟಿರುವದೆಂಬದನ್ನು ಅವನನ್ನು ಕೇಳಲು ಚಿತ್ರಗುಪ್ತನು— "ಸ್ವಾಮಿ ! ರಾಜಪುತ್ರನಿಗೆ ಹನ್ನೆರಡು ವರ್ಷ ಆಯುಷ್ಯ ಬರೆದುದು ನಿಜ. ಹಾಗು ಅದರ ಕೆಳಗೇ 'ಹತ್ತು ಸಾವಿರ ವರುಷದ ಒಂದು ಅಂಕೆಯಿದೆ' ಎಂದು ಹೇಳಲು ಯಮನು ಸಾಶಂಕಿತನಾಗಿ ನಿರುತ್ತರನಾದನು. ಹಾಗು ವೀರಭದ್ರನಿಗೆ ನಮಿಸಿ ಹಿಂದಿರುಗಿ ಹೋದನು" ಎಂದು ನಾರದರು ಭದ್ರಸೇನನಿಗೆ ಹೇಳಿದರು. ನಂತರ ಪರಾಶರರೂ ನಾರದರೂ ರಾಜನಿಗೆ ಆಶೀರ್ವದಿಸಿ ಅಲ್ಲಿಂದ ತೆರಳಿದರು''.

ಇಂತು ರುದ್ರಾಧ್ಯಾಯದ ಮಹಿಮೆಯನ್ನು ಬೋಧಿಸುವ ಕಥೆಯನ್ನು ಶ್ರೀ ಗುರುಗಳು ದತ್ತ ದಂಪತಿಗೆ ಬೋಧಿಸಿದರು ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೩೫ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ದತ್ತನ ಪತ್ನಿ ಸಾವಿತ್ರಿಯು ಶ್ರೀ ಗುರುಗಳನ್ನು ಕುರಿತು— "ಸ್ವಾಮಿ! ಇನ್ನು ಮುಂದೆ ನಮ್ಮ ಗತಿಯೇನು? ನಿಮ್ಮ ಚರಣ ಸ್ಮರಣೆ ನಮಗೆ ಚಿರಕಾಲ ಉಳಿಯುವಂತೆ ನನಗೆ ಒಂದು ಮಂತ್ರವನ್ನು ಉಪದೇಶಿಸಬೇಕು. ಅಂದರೆ ನಮಗೆ ನಿರಂತರ ಸುಖ ಲಭಿಸುವದೆಂದು ನಂಬಿರುವೆನು" ಎಂದಳು.

ಶ್ರೀ ಗುರುಗಳು ಸಾವಿತ್ರಿಯ ಹವಣಿಕೆಯನ್ನರಿತು ಆಕೆಗೆ— "ಪತಿವ್ರತೆ! ಸ್ತ್ರೀಯರಿಗೆ ಪತಿಭಕ್ತಿಯೇ ಯುಕ್ತ ಮಂತ್ರವು. ಇದರ ಹೊರತು ಅನ್ಯ ಮಂತ್ರೋಪದೇಶ ಮಾಡಬಾರದು. ಒಂದು ವೇಳೆ ಮಂತ್ರ ಬೋಧೆ ಮಾಡಿದರೆ ಆ ಮಂತ್ರಕ್ಕೆ ವಿಘ್ನಬಾರದಿರಲಾರದು. ಇದನ್ನು ನಿನಗೆ ಶುಕ್ರಾಚಾರ್ಯರ ಕಥೆಯಿಂದ ಸ್ಪಷ್ಟಮಾಡಿ ಹೇಳುವೆನು ಕೇಳು. ಎಂತೆಂದರೆ—

"ಹಿಂದಕ್ಕೆ ದೇವ–ದೈತ್ಯರ ಘನಘೋರ ಸಂಗ್ರಾಮ ನಡೆಯಿತು. ಶುಕ್ರಾಚಾರ್ಯನು ದೈತ್ಯರ ಗುರುವು, ಅವನಿಗೆ ಸಂಜೀವನೀ ಮಂತ್ರವಿದ್ಯೆಯು ಪ್ರಾಪ್ತವಾಗಿದ್ದಿತು. ಆ ಮಂತ್ರ ಪ್ರಭಾವದಿಂದ ಅವನು

ದೇವತೆಗಳಿಂದ ಮೃತರಾದ ತನ್ನ ಶಿಷ್ಯ ದೈತ್ಯರನ್ನು ಸಜೀವಗೊಳಿಸುತ್ತಿದ್ದನು. ಹೀಗೆ ಸಜೀವರಾದ ಆ ದೈತ್ಯರು ಪುನಃ ದೇವತೆಗಳೊಡನೆ ಕಾದುವರು, ಮಡಿಯುವರು ಮತ್ತೆ ಶುಕ್ರಾಚಾರ್ಯನ ಮಂತ್ರದಿಂದ ಪ್ರಾಣ ಪಡೆಯುವರು. ಹೀಗಾಗಿ ಬಹುಕಾಲದ ವರೆಗೂ ಆ ದೇವ ದೈತ್ಯರ ಯುದ್ಧ ಸಮಾಪ್ತಿಯೇ ಆಗಲಿಲ್ಲ. ದೇವತೆಗಳು ಶುಕ್ರಾಚಾರ್ಯನ ಈ ಕೃತಿಯನ್ನು ತಿಳಿದು ಶಿವನಿಗೆ ಅರಿಕೆಮಾಡಿದರು. ಶಿವನು ಸಿಟ್ಟಾಗಿ ಶುಕ್ರಾಚಾರ್ಯನನ್ನು ಹಿಡತರುವದಕ್ಕಾಗಿ ತನ್ನ ನಂದಿಯನ್ನು ಕಳಿಸಿದನು. ಶಿವನ ಅಪ್ಪಣೆಯಿಂದ ನಂದಿಯು ಶುಕ್ರನ ಬಳಿಗೆ ಹೋದನು. ಅವನನ್ನು ತನ್ನ ಬಾಯಿಯಿಂದ ಹಿಡತಂದು ಶಿವನೆದುರು ನಿಲ್ಲಿಸಿದನು. ರುದ್ರಾವತಾರಿ ಶಿವನು ಕೋಪದಿಂದ ಆ ಶುಕ್ರನನ್ನು ನುಂಗಿದನು. ಸಿಟ್ಟಿನ ಭರದಲ್ಲಿ ತಾನು ಶುಕ್ರನನ್ನು ತನ್ನ ಒಡಲಲ್ಲಿ ಸೇರಿಸಿಕೊಂಡುದುದು ತನಗೆ ಗೊತ್ತಾಗಲಿಲ್ಲ.

ಮುಂಮೊಂದು ದಿನ ಆ ಗರ್ಭದೇವನ ಮೂತ್ರವಿಸರ್ಜನೆಯಿಂದ ಶುಕ್ರನು ಹೊರಬಿದ್ದನು. ಇದು ಶಿವನ ವಿಸ್ಮೃತಿ ಸ್ಥಿತಿಯಲ್ಲಿಯೇ ಒದಗಿತು. ಹೀಗೆ ಭರ್ಗನ ಮೂತ್ರದ್ವಾರದಿಂದ ಆ ಶುಕ್ರನು ಹೊರಬಂದುವರಿಂದ ಅವನಿಗೆ 'ಭಾರ್ಗವ' ಎಂಬ ಹೆಸರು ಉಂಟಾಯಿತು. ಶಿವನುದರದಿಂದ ಭಾರ್ಗವನಾಗಿ ಸೃಜಿಸಿದರೂ ಆ ಶುಕ್ರಾಚಾರ್ಯನು ತನ್ನ ಕಾಯಕ ಬಿಡಲಿಲ್ಲ. ಮೃತದೈತ್ಯರನ್ನು ಮತ್ತೆ ಮತ್ತೆ ಚೇತನಗೊಳ್ಳಿಸ ಹತ್ತಿದನು. ಈಗಂತೂ ದೇವತೆಗಳಿಗೆ ತಲೆ ಚಿಟ್ಟೆನ್ನಿಸಿತು. ಅವರು ಶುಕ್ರಾಚಾರ್ಯನ ಸಂಜೀವನ ಮಂತ್ರ ಪ್ರಭಾವದ ಶಕ್ತಿಯನ್ನು ಹ್ರಾಸಗೊಳಿಸುವ ವಿಚಾರ ನಡೆಯಿಸಿದರು. ಅವರು ಈ ಬಗೆಗೆ ಗುರುಬೃಹಸ್ಪತಿಯ ವಿಚಾರಕ್ಕಾಗಿ ಅವನ ಬಳಿಗೆ ಹೋದರು, ತಮ್ಮ ವಿಚಾರ ಮುಂದಿಟ್ಟರು. ಬೃಹಸ್ಪತಿಯು—

ಇಂದ್ರಾದಿಗಳೇ ! ನಿಮ್ಮ ಹಂಚಿಕೆ ಯೋಗ್ಯವಿದೆ. ಯಾವದೊಂದು ಮಂತ್ರವು ಷಟ್‌ಕರ್ಣ ಶ್ರುತವಾದರೆ ಆ ಮಂತ್ರ ಶಕ್ತಿಯು ಅಳಿದು ಹೋಗುವದು. ಈ ನೇಮವು ಆ ಶುಕ್ರನ ಮಂತ್ರಕ್ಕೂ ಅನ್ವಯಿಸುವದು. ಅವನಲ್ಲಿಯ ಆ ಮಂತ್ರವನ್ನು ಕಲಿಯುವದಕ್ಕೆ ನಮ್ಮಲ್ಲಿಯ ಬುದ್ಧಿವಂತನೂ ಸೌಮ್ಯನೂ ಆಗಿರುವವನೊಬ್ಬ ನನ್ನ ವಿದ್ಯಾರ್ಥಿಯನ್ನಾಗಿ ವಿದ್ಯಾಭ್ಯಾಸ ಮಾಡಲು ಕಳಿಸಿದರೆ ಸಾಧ್ಯವಾಗಬಹುದು. ನಮ್ಮಲ್ಲಿ ಅಂಥ ವಿದ್ಯಾರ್ಥಿ ಯಾರು? " ಎಂದು ಕೇಳಲು ಎಲ್ಲ ದೇವತೆಗಳು ಏಕ ಕಂಠದಿಂದ— 'ನಿಮ್ಮ ಪುತ್ರ ·ಕಚನೇ ಯೋಗ್ಯನು' ಎಂದರು. ಬೃಹಸ್ಪತಿಯು ತಮ್ಮ ಮಗನನ್ನು ಕಳಿಸುವದಕ್ಕೆ ಹೃದಯದಲ್ಲಿ ಅನುಮಾನ ಗೊಳ್ಳುತ್ತಿರುವಾಗಲೇ ಕಚನು ಮುಂದೆ ಬಂದು ತಾನು ಶುಕ್ರಾಚಾರ್ಯರ ಶಿಷ್ಯತ್ವ ವಹಿಸಿ ಇಷ್ಟಕಾರ್ಯ ಸಾಧಿಸಿ ಕೊಂಡೇ ಬರುವೆನು. ತಮ್ಮೆಲ್ಲರ ವಿಶ್ವಾಸ-ಕೃಪೆಗಳಿರಲಿ'' ಎಂದು ಆಗಲೇ ಶುಕ್ರನ ಆಶ್ರಮಕ್ಕೆ ಹೋದನು. ಆಶ್ರಮದಲ್ಲಿ ಕುಳಿತಿದ್ದ ಶುಕ್ರನಿಗೆ ನಮಸ್ಕರಿಸಿ— ಸ್ವಾಮಿ ! ನಾನೊಬ್ಬ ಬ್ರಾಹ್ಮಣ ಪುತ್ರನು. ತಮ್ಮ ಸೇವೆ ಕೈಕೊಂಡು ವಿದ್ಯೆಕಲಿಯಲು ಇಲ್ಲಿಗೆ ಬಂದಿರುವೆನು. ದಯೆಮಾಡಬೇಕು" ಎಂದು ಕೈಮುಗಿದು ಬೇಡಿಕೊಂಡನು. ಶುಕ್ರಾಚಾರ್ಯನು ತನ್ನ ಮನಸಿನಲ್ಲಿ—"ಇವನು ದೈತ್ಯಪುತ್ರನಲ್ಲ. ಇವನನ್ನು ಛಾತ್ರ ವರ್ಗದಲ್ಲಿ ಸೇರಿಸಿಕೊಳ್ಳಬೇಕೋ ! ಬಾರದೋ ! ಎಂಬ ವಿಚಾರಮಗ್ನನಾಗಿರುವಾಗ—

ಶುಕ್ರಾಚಾರ್ಯನ ಬಳಿಯಲ್ಲಿದ್ದ ಅವನ ಏಕಮೇವ ಮಗಳಾದ ·ದೇವಯಾನಿಯು ತನ್ನ ಮನಸಿನಿಂದ ತನಗೆ ಯೋಗ್ಯ ವಯದ ಆ ಕಚನನ್ನು ಮೋಹಿಸಿ ಕಣ್ಣೆವೆಯಿಕ್ಕದೆ ನೋಡುತ್ತ ಕುಳಿತಿದ್ದಳು. ಆಕೆ ತನ್ನ ತಂದೆಯ ಸಂಶಯಿತ ಭಾವವನ್ನು ಅರಿತು— "ತಾತ ! ಈ ಬ್ರಾಹ್ಮಣ · ತರುಣನು ಒಳ್ಳೆಯವ

ನಾಗಿ ತೋರುವನು. ವಿದ್ಯಾಭ್ಯಾಸಕ್ಕೆ ಯೋಗ್ಯನಿರುವನು. ಇವನನ್ನು ನಿನ್ನ ಶಿಷ್ಯನನ್ನಾಗಿ ಮಾಡಿಕೊಳ್ಳು" ಎಂದಳು. ಶುಕ್ರನು ಆಕೆಯ ಮನಸ್ಸನ್ನು ಕುಂದಿಸದೆ ಆ ಕಚನನ್ನು ತನ್ನ ಶಿಷ್ಯವರ್ಗದಲ್ಲಿ ಸೇರಿಸಿ ಕೊಂಡನು.

ಕಚನು ಒಳ್ಳೆ ದಕ್ಷತೆಯಿಂದ ಗುರುಸೇವೆ ಮಾಡಹತ್ತಿದನು. ಶುಕ್ರನ ಪ್ರೀತಿಯೂ ದೇವಯಾನಿಯ ಮೋಹವೂ ಅವನ ಮೇಲೆ ಒಳಿತಾಗಿ ಬಿಂಬಿಸಹತ್ತಿದವು. ಇದು ರಾಕ್ಷಸ ಶಿಷ್ಯರಿಗೆ ಅಸೂಯೆಯೆನ್ನಿಸಿತು. ಅವರು ಕಚನ ಮೇಲಿರುವ ಗುರುವಿನ ವಿಶಿಷ್ಟ ಪ್ರೀತಿಯ ಮೂಲವನ್ನೇ ಇಲ್ಲದಂತೆ ಮಾಡುವ ಒಳಸಂಚು ಮಾಡಿದರು. ಒಂದು ದಿನ ಕಚನು ಸಮಿಧೆ ತರುವದಕ್ಕೆ ಅರಣ್ಯಕ್ಕೆ ಹೋದನು. ದೈತ್ಯ ಶಿಷ್ಯರು ಅವನ ಸಹಾಯಕರಾಗಿ ಅವನನ್ನು ಬೆಂಬಳಿಸಿದರು. ನಡುಗಾಡಿನಲ್ಲಿ ಆ ದೈತ್ಯರು ಅವನನ್ನು ಕೊಂದುಹಾಕಿದರು.

ಸಮಿಧೆ ತರಲು ಹೋದ ಕಚನು ಹೊತ್ತಾದರೂ ಬರಲಿಲ್ಲ. ದೇವಯಾನಿಯ ಹೃದಯವು ಸಂದೇಹ ತಾಳಿತು. ಆಕೆ ತನ್ನ ತಂದೆಗೆ—'ತಾತ! ಕಚನು ಇನ್ನೂ ಬರಲಿಲ್ಲ!' ಎಂದು ಕಣ್ಣೀರುಕ್ಕಿಸಿದಳು. ಶುಕ್ರನು ಮಗಳ ಮೇಲೆ ಬಲು ಜೀವ! ಆಕೆಯ ದುಃಖಿತ ಭಾವವು ಅವನ ಹೃದಯ ಕೊರೆಯಹತ್ತಿತು. ಕೂಡಲೆ ಅವನು ಅಂತರ್ದೃಷ್ಟಿಯಿಂದ ಕಚನು ಸತ್ತಿರುವದನ್ನು ತಿಳಿದನು, ಸಂಜೀವನೀ ಮಂತ್ರದಿಂದ ಅವನನ್ನು ಸಜೀವನಾಗಿಸಿದನು, ಕಚನು ಆಶ್ರಮಕ್ಕೆ ಬಂದನು, ದೇವಯಾನಿಗೆ ಆನಂದ!

ದೈತ್ಯಶಿಷ್ಯರು ತಮ್ಮ ಕೃತಿಯು ಫಲಿಸದಿರುವದನ್ನು ನೋಡಿ ಎರಡನೇ ಬಾರಿ ಮೊದಲಿನಂ

ತೆಯೇ ಅವರು ಕಚನನ್ನು ಕೊಂದರು ಅವನ ದೇಹಘಟಿತ ರಕ್ತ-ಮಾಂಸಾದಿಗಳನ್ನು ವಿಂಗಡಿಸಿ ದೂರಕ್ಕೆ ಎಸೆದರು. ಈ ಸಾರಿಯೂ ದೇವಯಾನಿಯು ತಂದೆಗೆ— "ತಾತ! ನಾನು ಆ ಕಚನನ್ನು ವಿವಾಹ ಮಾಡಿಕೊಳ್ಳುವೆ. ಅವನು ದೈತ್ಯರಿಂದ ಹತನಾದಂತೆ ನನಗೆ ಭಾಸವಾಗುವದು" ಎಂದಳು. ಆಗ ಶುಕ್ರನು ಮಂತ್ರದಿಂದ ಕಚನನ್ನು ಬರಮಾಡಿಕೊಂಡನು. ದೈತ್ಯರು ಕಚ ಬಂದುದನ್ನು ನೋಡಿ ಇನ್ನಿಷ್ಟು ಕೆರಳಿದರು.

ಮುಂದೊಂದು ಏಕಾದಶಿ ಬಂದಿತು. ಕಚನು ಕಾಡಿಗೆ ಹೋದ ಸಮಯ ಸಾಧಿಸಿ ದೈತ್ಯರು ಅಲ್ಲಿಗೆ ಹೋದರು. ಕಚನನ್ನು ಸಜೀವವಾಗಿ ಸುಟ್ಟರು. ಆ ಚಿತೆಯ ಭಸ್ಮ ತಂದು ಮದಿರೆಯಲ್ಲಿ ಬೆರಸಿ ಅದನ್ನು ತಮ್ಮ ಗುರುವಿಗೆ ಪ್ರಾಶನಮಾಡಿಸಿದರು. ಶುಕ್ರನಿಗೆ ಇದಾವುದೂ ತಿಳಿಯಲಿಲ್ಲ. ಈ ಸಾರಿಯೂ ಕಚನು ಬಾರದ್ದಕ್ಕೆ ದೇವಯಾನಿಯು ತಂದೆಯೆದುರು ಮೊರೆಯಿಟ್ಟಳು. ಶುಕ್ರನು ಜ್ಞಾನದೃಷ್ಟಿಯಿಂದ ನೋಡಿ "ಕಚನು ತನ್ನ ಒಡಲಿನಲ್ಲಿರುವನು, ಅವನನ್ನು ಸಜೀವಗೊಳಿಸಲು ಬರಲಾರದು, ಹಾಗೆ ಮಾಡ ಹೋಗಲು ನನಗೇ ಮರಣವು. ಇನ್ನು ನೀನು ಕಚನಿಗಾಗಿ ಆಸೆ ಮಾಡಬೇಡ" ಎನ್ನಲು— "ತಾತ! ಇನ್ನು ನಾನು ಕಚನ ಆಸೆ ಹಾಗು ನನ್ನ ಪ್ರಾಣದ ಆಸೆಮಾಡೆನು, ನೀನೂ ನನ್ನ ಮೇಲಿನ ಪುತ್ರಿ ಎಂಬ ಮೋಹವನ್ನು ಹಿಡಿಯಬೇಡ" ಎಂದು ಅಳಹತ್ತಿದಳು, ಶುಕ್ರನ ಕಳವಳಿಕೆ ಮಿತಿಮೀರಿ— "ಮಗಳೇ! ಕಚನನ್ನು ಸಜೀವಗೊಳಿಸಲು ನನ್ನ ಮಂತ್ರವು ಅಸಾಧ್ಯವಾಯಿತು!" ಎಂದು ಸ್ಪಷ್ಟ ಹೇಳಿದನು.

ಆಗ ದೇವಯಾನಿಯಲ್ಲಿ ಒಂದು ವಿಚಾರ ಹೊಳೆಯಿತು ಅದರಂತೆ— "ತಾತ! ನಿನ್ನ ಸಂಜೀವನೀಮಂತ್ರ ನನಗೆ ಉಪದೇಶಿಸು. ಕಚನನ್ನು ಸಜೀವಗೊಳಿಸುವಲ್ಲಿ ನಿನಗೆ ಮರಣವಾದರೆ ಮಂತ್ರೋಪ

ದಿಷ್ಟಳಾದ ನಾನು ಮಂತ್ರಬಲದಿಂದ ನಿನ್ನನ್ನು ಸಜೀವಗೋಳಿಸುವೆನು" ಎಂದಳು. ಅದಕ್ಕೆ ಶುಕ್ರನು— "ಮಗಳೆ! ಸ್ತ್ರೀಯರಿಗೆ ಮಂತ್ರೋಪದೇಶ ಮಾಡಬಾರದು. ಹಾಗು ಆರು ಕಿವಿಗಳು ಕೇಳಿದರೆ ನನ್ನ ಮಂತ್ರವು ನನ್ನಿಂದ ದೂರಾಗುವದು" ಎಂದು ಶುಕ್ರನು ಎಷ್ಟು ಪರಿಯಿಂದ ಹೇಳಿದರೂ ದೇವಯಾನಿಯು ತನ್ನ ಹಟ ಬಿಡಲಿಲ್ಲ. ನಿರ್ವಾಹವಿಲ್ಲದೆ ಶುಕ್ರನು ದೇವಯಾನಿಗೆ ಮಂತ್ರವನ್ನು ಬೋಧಿಸಿದನು, ಆಕೆಯು ಪಠಣ ಮಾಡಿದಂತೆ ಅವನ ಹೊಟ್ಟೆಯಲ್ಲಿ ಕುಳಿತ ಕಚನೂ ಪಠಣ ಮಾಡಿದನು. ಮೂರು ಸಾರೆ ಶುಕ್ರನು ಉಚ್ಚರಿಸಿದ್ದನ್ನು ಹೊರಗಿನ ದೇವಯಾನಿಯೂ ಒಳಗಿನ ಕಚನೂ ಗ್ರಹಿಸಿಕೊಂಡು ಉಪದಿಷ್ಟಿತರಾದರು. ಈ ಬಗೆಯಾಗಿ ಉಪದೇಶ ಹೊಂದಿದ ಕಚನು ಆಗಲೇ ಶುಕ್ರನ ಹೊಟ್ಟೆಯನ್ನು ಬಗೆದು ಹೊರಬಂದನು ಶುಕ್ರನು ಸತ್ತುಬಿದ್ದನು. ನಂತರ ದೇವಯಾನಿಯು ತಾನು ಪಡೆದ ಮಂತ್ರದಿಂದ ತಂದೆಯನ್ನು ಬದುಕಿಸಿದಳು ಇಷ್ಟಕ್ಕೆ ಅವಳ ಮಂತ್ರವು ನಿರರ್ಥಕವಾಯಿತು.

ಆ ಬಳಿಕ ದೇವಯಾನಿಯು ಕಚನನ್ನು ಕುರಿತು— "ನನ್ನನ್ನು ನೀನು ವಿವಾಹದಿಂದ ಸ್ವೀಕರಿಸು" ಎಂದಳು ಆತನು— "ತಂಗೀ! ದೇವಯಾನಿ! ನೀನೂ ನಾನೂ ಒಂದೇ ಹೊಟ್ಟೆಯಿಂದ ಹುಟ್ಟಿದವಾದುದರಿಂದ ನಮ್ಮಲ್ಲಿ ವೈವಾಹಿಕ ಸಂಬಂಧವು ಉಂಟಾಗಲಾರದು, ಸಹೋದರ ಸಂಬಂಧವೇ ನಿಶ್ಚಿತವು" ಎಂದು ಹೇಳಲು ದೇವಯಾನಿಯು ಒಮ್ಮೆಲೆ ಕುಪಿತಳಾಗಿ— 'ನಾನು ನಿನ್ನ ಪ್ರಾಣವನ್ನು ಮೂರುಸಾರೆ ಹಿಂತಿರುಗಿ ತರಿಸಿದ ಉಪಕಾರವನ್ನೆಣಿಸದ ಮೂರ್ಖನು ನೀನಾಗಿರುವಿ, ನಿನ್ನ ಕೃತಘ್ನತೆಯು ಪರಿಣಾಮವಾಗಿ ನೀನು ನನ್ನ ತಂದೆಯಿಂದ ಸಂಪಾದಿಸಿದ ವಿದ್ಯೆಗಳಿಂದ ಮುಕ್ತನಾಗು" ಎಂದು ಶಪಿಸಿದಳು, ಕಚನು–

"ದೇವಯಾನಿ! ನೀನು ಕೊಟ್ಟ ಶಾಪವನ್ನು ಆನಂದದಿಂದ ನಾನು ಸ್ವೀಕರಿಸಿಯೇ ನಿನಗೆ ನಾನು ಪ್ರತಿ ಶಾಪ ಕೊಡುವವೇನಂದರೆ—

''ನೀನು ಹೆಂಗುಸಾದ್ದರಿಂದ ನಿನ್ನ ತಂದೆಯಿಂದ ನೀನು ಪಡೆದ ಮಂತ್ರವು ನಿರರ್ಥಕವಾಗಲಿ, ಹಾಗು ಸಹೋದರನಾದ ನನನ್ನು ಬಯಸಿದ ನಿನ್ನನ್ನು ಬ್ರಾಹ್ಮಣನಲ್ಲದ ಇನ್ನೊಂದು ವರ್ಣದವನು ನಿನ್ನ ಪಾಣಿಗ್ರಹಣ ಮಾಡಲಿ'' ಎಂದು ಶಪಿಸಿದನು.

ನಂತರ ಕಚನು ಗುರುವಿಗೆ ನಮಸ್ಕರಿಸಿ— ''ಸ್ವಾಮಿ ! ದೈತ್ಯರಿಂವ ಇಲ್ಲಿರಲು ನನಗೆ ಬಲು ಭಯ! ಇನ್ನು ನನಗೆ ಹೋಗಲು ಅಪ್ಪಣೆಯಿರಲಿ,'' ಎಂದು ನುಡಿದು ನಮಸ್ಕಾರ ಮಾಡಿ ದೇವಲೋಕಕ್ಕೆ ಹೋದನು. ಅಲ್ಲಿ ದೇವತೆಗಳನ್ನು ಕುರಿತು— ಶುಕ್ರಾಚಾರ್ಯರ ಮಂತ್ರವನ್ನು ಷಟ್‌ಕರ್ಣಶ್ರುತವಾಗಿಸಿದೆನು ಹಾಗು ಆಮಂತ್ರವು ಸ್ತ್ರೀಯಳಿಗೆ ಬೋಧಿಸಲಾಯಿತು. ಈ ಪ್ರಕಾರ ಎರಡೂ ಪ್ರಕಾರಗಳಿಂದ ನಾನು ಆ ಸಂಜೀವನೀ ಮಂತ್ರ ಗತಿಗೆಡಿಸಿ ಬಂಡೆನು' ಎಂದು ಹೇಳಿದನು.

ದೇವ–ದೈತ್ಯರ ಯುದ್ಧ ದಿನದಿನವೂ ಸಾಗಿತು. ಕಚನು ಹಿಂದಿರುಗಿ ಬಂದಮೇಲೆಯೂ ನಡೆಯಿತು. ಆದರೆ ಮೃತದೈತ್ಯರನ್ನು ಪುನರುತ್ಥಾಪಿಸುವ ಶುಕ್ರಾಚಾರ್ಯರ ಮಂತ್ರವೇ ಹೀನವಾದುದರಿಂದ ದೈತ್ಯರೆಲ್ಲ ದೇವತೆಗಳಿಂದ ಮೃತರಾಗಿಹೋದರು. ಇಂತು ಎಷ್ಟೋವರ್ಷಗಳಿಂದ ನಡೆದ ದೇವ–ದೈತ್ಯ ಯುದ್ಧ ಮುಕ್ತಾಯವಾಯಿತು. ಹಾಗು ತ್ರೈಲೋಕ್ಯಕ್ಕೆಲ್ಲ ಆನಂದವಾಯಿತು.

ಈ ಪ್ರಕಾರ ಶ್ರೀಗುರುಗಳು ಸಾವಿತ್ರಿಗೆ ಸಂಜೀವನಿ ಮಂತ್ರದ ಕಥೆ ಹೇಳಿ. ''ಸ್ತ್ರೀಯರು—

ಮಂತ್ರೋಪದೇಶ ಕೊಳ್ಳಲು ಅರ್ಹರಲ್ಲ, ಪತಿಯಾಜ್ಞೆಯಿಂದ ವ್ರತೋಪವಾಸ ಕೈಕೊಳ್ಳುವದೇ ಅವರಿಗೆ ಗತಿದಾಯಕವು" ಎಂದು ಹೇಳಲು ಆಕೆ— "ಸ್ವಾಮಿ! ಅಂಥ ವ್ರತವನ್ನು ಭೋಧಿಸುವದಾಗಬೇಕು" ಯನ್ನಲು ಶ್ರೀ ಗುರುಗಳು ಆಕೆಗೆ ಶಿವನ ಸಂಬಂಧವಾಗಿ ಇರುವ ಅನೇಕ ವ್ರತಗಳಲ್ಲಿ ವಿಶಿಷ್ಟವಾದ ಸೋಮವಾರ ವ್ರತವನ್ನು ಕೈಕೊಂಡು ಆಚರಿಸು ಎಂದು ಹೇಳಿದರಲ್ಲದೆ ಪೂರ್ವದಲ್ಲಿ ಆ ಸೋಮವಾರ ವ್ರತವನ್ನಾಚರಿಸಿ ಸುಗತಿಯನ್ನು ಪಡೆದ ಸೀಮಂತಿನಿಯ ಕಥೆಯನ್ನು ಆ ಸಾವಿತ್ರಿಗೆ ಹೇಳಿದರು. ಎಂತೆಂದರೆ—

"ಪೂರ್ವಯುಗದಲ್ಲಿ ಆರ್ಯಾವರ್ತದೊಳಗೆ 'ಚಿತ್ರವರ್ಮ' ನೆಂಬಧರ್ಮಾತ್ಮ ರಾಜನು ಆಗಿ ಹೋದನು ಅವನು ಅನೇಕ ಪುಣ್ಯಕರ್ಮಗಳನ್ನು ಮಾಡಿದನು. ಅವನ ಧರ್ಮ ಪತ್ನಿಯು ಅವನಂತೆಯೇ ಪುಣ್ಯಕರ್ಮಗಳನ್ನೆಸಗುವದರಲ್ಲಿ ತತ್ಪರಳಿದ್ದಳು. ಸಂತತಿಯ ಸಂಪತ್ತು ಇಲ್ಲದ್ದರಿಂದ ಆ ದಂಪತಿಗಳು ಪುತ್ರೇಚ್ಛೆಯಿಂದ ಬಹುಕಾಲ ಶಿವಾರಾಧನೆ ಮಾಡಿದರು. ಅದರ ಫಲವಾಗಿ ಅವರಿಗೆ ಒಂದು ಕನ್ಯಾರತ್ನವು ಲಭಿಸಿತು. ಆ ಮಗುವು ಸುಂದರವಾಗಿಯೂ ಸಲ್ಲಕ್ಷಣಯುಕ್ತವಾಗಿಯೂ ಇದ್ದಿತು. ಆದಕ್ಕೆ 'ಸೀಮಂತಿನಿ' ಎಂದು ಹೆಸರಿಟ್ಟರು. ಶಿಶುವಿನ ಜಾತಕ ನೋಡಿ ಜೋತಿಷಿಗಳು ಕನ್ಯೆಯ ಭವಿಷ್ಯಗತಿಯು ಅಪ್ರತಿಮ ಸುಖದಾಯಕ ಹಾಗು ಸೌಭಾಗ್ಯ ಪೂರ್ಣವೆಂದು ಸಾರಿದರು. ಆಗ ಅಲ್ಲಿ ಕೂಡಿದ ಬ್ರಾಹ್ಮಣರಲ್ಲಿ ಒಬ್ಬ ಜೋತಿಷಿಯು ಎದ್ದುನಿಂತು— "ರಾಜಾ! ಈ ಕನ್ಯೆ ಜನ್ಮಿಸಿದ ವೇಳೆಯಿಂದ ನಿರೀಕ್ಷಿಸಲು ಈಕೆಯ ಹದಿನಾಲ್ಕನೆಯ ವಯಸ್ಸಿನಲ್ಲಿ ಇವಳಿಗೆ ವೈಧವ್ಯ ಪ್ರೊದಗುವ ಯೋಗವಿದೆ." ಎಂದು ಸ್ಪಷ್ಟವಾಗಿ ಹೇಳಿದನು. ಬ್ರಾಹ್ಮಣನ ಈ ಹೇಳಿಕೆಯಿಂದ ರಾಜ-ರಾಣಿಯರು ಅತ್ಯಂತ ಚಿಂತೆಗೊಳಗಾದರು.

ದಿನದಿನವೂ ಕೊರಗಹತ್ತಿದರು. ಅವರ ಈ ಸ್ಥಿತಿಯಲ್ಲಿಯೇ ಸೀಮಂತಿನಿಗೆ ಏಳುವರುಷ ತುಂಬಿದವು. ಆಕೆಯ ತಾಯಿ-ತಂದೆಗಳು ಮಗಳ ಮುಂದಿನ ಭವಿಷ್ಯ ನಂಬಿ ಈಕೆಯ ವಿವಾಹದ ಬಗೆಗೆ ಎಣಿಕೆ ಹಾಕುತ್ತ ಉಸುರ್ಗರೆಯುತ್ತ ಕುದಿಯುತ್ತಲೇ ಇದ್ದರು. ಪಾಪ, ಆ ಚಿಕ್ಕ ಸೀಮಂತಿನಿಗೆ ತನ್ನ ಭವಿಷ್ಯವು ಇದುವರೆಗೆ ಗೊತ್ತಿರಲಿಲ್ಲ-ಒಂದುದಿನ ತನ್ನ ಗೆಳತಿಯರೊಡನೆ ಆಡುತ್ತಿರುವಾಗ ಆಕೆಯ ತಂದೆಯೂ ಬ್ರಾಹ್ಮಣನೂ ತನ್ನ ಭವಿಷ್ಯ ವಿಚಾರ ನಡೆಯಿಸಿದುದನ್ನು ಕಿವಿಯಾರೆ ಕೇಳಿ ಆ ಸೀಮಂತಿನಿಯು ದಿಗ್ಭ್ರಾಂತಳಾದಳು. ಹಿಂದಿನಿಂದ ಆಕೆ ವಿಚಾರ ಮಾಡಿದಳು. ಆಗಲೇ ಯಾಜ್ಞವಲ್ಕ್ಯನ ಪತ್ನಿ ಮೈತ್ರಾಯಿಣಿಯನ್ನು ಕರಿಸಿದಳು. ಆಕೆಯನ್ನು ನಮಸ್ಕರಿಸಿ ಸೀಮಂತಿನಿಯು— "ಪೂಜ್ಯಳೆ! ನನ್ನ ಹದಿನಾಲ್ಕನೆಯ ವರ್ಷದಲ್ಲಿ ವೈಧವ್ಯ ಪೊದಗುವದೆಂಬ ಭವಿಷ್ಯ ಕೇಳಿ ನನ್ನ ಹಡೆದವರು ಚಿಂತಾಗ್ರಸ್ತರಾಗಿರುವರು. ಭವಿಷ್ಯವು ಸಟೆಯೇ ಆಗಲಿ, ದಿಟವೇ ಆಗಲಿ. ಅದರ ವಿಚಾರ ಬೇಡ. ನನ್ನ ಸೌಭಾಗ್ಯವು ಅವ್ಯಾಹತವಾಗಿ ಸ್ಥಿರವಿರಲಿ ಎಂದು ನನ್ನ ಅಪೇಕ್ಷೆಯಿದೆ. ಈ ನನ್ನ ಆಸೆ ಫಲಿಸುವ ಉಪಾಯ ಹೇಳಿರಿ" ಎಂದು ಕೇಳಿದಳು. ಮೈತ್ರಾಯಿಣಿಯು ಸೀಮಂತಿನಿಯ ಆಗಿನ ಚಿಕ್ಕತನವನ್ನೂ ಆಕೆಯ ವಿಚಾರವನ್ನೂ ಕೇಳಿ ಹರ್ಷಗೊಂಡಳು. ಅವಳು ಸೀಮಂತಿನಿಯನ್ನು ಮುದ್ದಿಸಿ— ರಾಜಪುತ್ರಿ! ಸೀಮಂತಿನಿ ಧನ್ಯ! ಈ ಎಳೆ ವಯಸ್ಸಿನಲ್ಲಿ ನಿನ್ನಲ್ಲಿ ಉದಿತವಾದ ವಿಚಾರಗಳನ್ನೂ ಆಸೆಯನ್ನೂ ಕೇಳಿ ನಿನ್ನನ್ನು ಎಷ್ಟು ಪ್ರಶಂಸಿದರೂ ಕಡಿಮೆಯೇ ಸರಿ. ಅದಿರಲಿ. ಈಗ ನಾನು ನಿನಗೆ ಹೇಳುವದೇನೆಂದರೆ— "ಭವಿಷ್ಯವನ್ನು ನಂಬಿ ಕರ್ತವ್ಯವಿಮುಖರಾಗಬಾರದು. ಸೌಭಾಗ್ಯ ಸ್ಥಿರತೆಗಾಗಿ ನಾನು ನಿನಗೆ ಶಿವನ ಸಂಬಂಧವಾದ 'ಸೋಮವಾರ ವ್ರತ'ವನ್ನು ಕೈಕೊಳ್ಳು ಎಂದು ಹೇಳು

ವೆನು. ಆ ವ್ರತವನ್ನು ನೀನು ತಪ್ಪದೆ ಕೊನೆಗಾಣಿಸಿವೆಯಾದರೆ ನೀನು ನಿನ್ನ ಕರ್ತವ್ಯ ಮಾಡಿದಂತಾಗು
ವದು. ಅದರ ಫಲವೂ ನಿನಗೆ ಲಭಿಸುವದು. ನಿನ್ನ ಸೌಭಾಗ್ಯವೂ ಸ್ಥಿರತೆಹೊಂದುವದು'' ಎಂದು ಹೇಳಿ
ದಳಲ್ಲದೆ ಆ ಸೋಮವಾರ ವ್ರತದ ಪೂಜೆಯ ವಿಧಿ-ವಿಧಾನ, ದಾನ-ಧರ್ಮ ಇವೆಲ್ಲವುಗಳನ್ನು ಬೋಧಿಸಿ
ದಳು. ಸೀಮಂತಿನಿಯು ಆಗಲೇ ಮೈತ್ರಾಯಿಣಿಗೆ ವಂದಿಸಿ ವ್ರತಕ್ಕಾರಂಭಿಸಿದಳು. ಮೈತ್ರಾಣಿಯು ಹೇಳಿ
ದಂತೆ ಗೌರೀಹರರ ಪೂಜೆ ಮಾಡಹತ್ತಿದಳು. ಹೀಗೆ ಇರ ಇರುತ್ತಲೇ ಅವಳು ವಿಹಾಹಕ್ಕೆ ತಕ್ಕ ವಯಸ್ಸಿ
ನವಳಾದಳು. ರಾಜನು ಆಕೆಯ ವಿವಾಹದ ವಿಚಾರ ನಡೆಯಿಸಿದನು. ಆಕೆಯ ಪ್ರಾಕ್ತನವಿದ್ದಂತೆ ಒದಗು
ವದನ್ನು ಅದಾರು ತಪ್ಪಿಸುವರು? ಆಗುವದಾಗಲಿ!' ಎಂದು ವಿಚಾರಿಸಿ ಅವನು ವರ ಶೋಧನೆಗಾಗಿ ಮಂತ್ರಿ
ಪುರೋಹಿತರನ್ನು ಕಳಿಸಿದನು. ಅವರು ಅತ್ತಿತ್ತ ಸುತ್ತಾಡಿ ನಿಷಧನಗರಕ್ಕೆ ಬಂದರು. ಅಲ್ಲಿ ನಳ ಚಕ್ರವ
ರ್ತಿಯ ವಂಶದ ಇಂದ್ರಸೇನನೆಂಬ ರಾಜನಿದ್ದನು. ಚಿತ್ರಾಂಗದನೆಂಬವನು ಆ ರಾಜನ ಏಕಮೇವ ಪುತ್ರನು.
ಅವನು ತರುಣನೂ ಸುಂದರನೂ ಆಗಿದ್ದನು. ರಾಜಪುತ್ರಿ ಸೀಮಂತಿನಿಗೆ ತಕ್ಕ ವರನೆಂದು ಅವರು ಗೊತ್ತುಮಾಡಿ
ಕೊಂಡೇ ಬಂದರು.

ಚಿತ್ರವರ್ಮನು ವಿವಾಹ ಮುಹೂರ್ತ ನಿಶ್ಚಯಿಸಿ ಇಂದ್ರಸೇನನಿಗೆ ತಿಳಿಸಿದನು. ಅದರಂತೆ
ಸಮಾರಂಭಕ್ಕಾಗಿ ತನ್ನ ಮಿತ್ರರಾಜರುಗಳಿಗೆಲ್ಲ ಲಗ್ನಪತ್ರ ಕಳಿಸಿದನು. ಮುಹೂರ್ತಕ್ಕೆ ಸರಿಯಾಗಿ ಎಲ್ಲರೂ
ಬಂದರು. ಏನೊಂದು ಕುಂದುಕೊರತೆಯಿಲ್ಲದೆ ಚಿತ್ರವರ್ಮನು ಬೀಗರಿಗೂ ಇತರರಿಗೂ ಸತ್ಕಾರಮಾಡಿದನು.
ತನ್ನ ಮಗಳು ಸೀಮಂತಿನಿಯನ್ನು ಇಂದ್ರಸೇನನ ಮಗ ಚಿತ್ರಾಂಗದನಿಗೆ ಪಾಣಿಗ್ರಹಣ ವಿಧಿಯಿಂದ ಕನ್ಯಾ

ದಾನವಾಗಿ ಅರ್ಪಿಸಿದನು. ಮದುವೆಯು ಬಲು ಸಡಗರದಿಂದಲೂ ಅಟ್ಟಹಾಸದಿಂದಲೂ ನೆರವೇರಿತು. ಚಿತ್ರವರ್ಮನು ಅಳಿಯ ಚಿತ್ರಾಂಗದನನ್ನು ತನ್ನಲ್ಲಿ ಇಟ್ಟುಕೊಂಡು ಉಳಿದ ಬೀಗರನ್ನೂ ಸಮಾರಂಭಕ್ಕೆ ಕಲೆತವರನ್ನೂ ಬೀಳ್ಕೊಟ್ಟನು.

ರಾಜಪುತ್ರ ಚಿತ್ರಾಂಗದನು ಮಾವನ ಮನೆಯಲ್ಲಿಯೇ ಉಳಿದನು, ಸತಿ ಸ್ನೇಹದ ಸೊಬಗು ಶೃಂಗಾರಗಳಲ್ಲಿ ಕೆಲ ದಿನ ಕಾಲಕಳೆದನು,

ಒಂದು ದಿನ ಚಿತ್ರಾಂಗದನು ಮಾವನ ಅಪ್ಪಣೆಯಿಂದ ಯಮುನಾ ನದಿಗೆ ಜಲಕ್ರೀಡೆಗೆಂದು ಹೊರಟನು. ಸಂಗಡ ದಳಭಾರವೂ ಗೆಳೆಯರ ಗುಂಪೂ ಬಹಳಿದ್ದಿತು. ಎಲ್ಲರೂ ಆ ಕಾಳಿಂದಿಯ ಪ್ರವಾಹದಲ್ಲಿ ಸೇರಿ ಕ್ರೀಡಿಸಹತ್ತಿದರು. ಚಿತ್ರಾಂಗದನು ಒಂದು ನೌಕೆಯನ್ನೇರಿ ವಿಹರಿಸುತ್ತ ನಡುಪ್ರವಾಹಕ್ಕೆ ತನ್ನ ನೌಕೆ ಸಾಗಿಸಿದನು. ಕಾಲಕರ್ಮದಿಂದ ದೊಡ್ಡದೊಂದು ಬಿರುಗಾಳಿ ಬೀಸಿ ನೌಕೆ ಹೊಯ್ದಾಡಹತ್ತಿತು. ಅವನ ಪರಿವಾರದವರೆಲ್ಲರು ಅವನನ್ನೇ ದೃಷ್ಟಿಸುತ್ತಿದ್ದರು. ಅವರು ನೋಡುನೋಡುತ್ತಿರುವಾಗಲೇ ನೌಕೆ ಸಹಿತ ಚಿತ್ರಾಂಗದನು ಜಲಸಮಾಧಿಹೊಂದಿದನು. ಒಮ್ಮೆಲೆ ಹಾಹಾಕಾರವೇ ಎದ್ದಿತು. ಈಜು ಬರುವವರೆಲ್ಲ ಪ್ರವಾಹದಲ್ಲಿ ಮುಳುಗಿ ರಾಜಪುತ್ರನನ್ನು ಶೋಧಿಸಿದರು. ಅವನೂ ಸಿಗಲಿಲ್ಲ, ಅವನೇರಿದ ನೌಕೆಯೂ ಸಿಗಲಿಲ್ಲ. ಹಾ ಹಾ ಎನ್ನುವಷ್ಟರಲ್ಲಿ ಈ ವಾರ್ತೆ ರಾಜಮಂದಿರಕ್ಕೆ ಹೋಯಿತು. ಸೀಮಂತಿನಿಯೂ ರಾಜ ರಾಣಿಯರೂ [illegible] ಒಂದು ಶೋಕ-ಸಂತಾಪ ಮಾಡಿಕೊಳ್ಳಹತ್ತಿದರು. ಸೀಮಂತಿನಿಯು ತಾನೂ ಯಮುನೆಯಲ್ಲಿ ಪ್ರಾಣಕೊಡಲು ಸಿದ್ಧಳಾದಳು. ತಂದೆಯು ಆಕೆಯನ್ನು ಬಲು ಪ್ರಯಾಸ

ದಿಂದ ಮನೆಗೆ ಕರೆದೊಯ್ದನು, ಈ ವಾರ್ತೆ ನಿಷಧನಗರಕ್ಕೆ ಹೋಯಿತು, ಚಿತ್ರಾಂಗದನ ತಾಯ್ತಂದೆಗಳು ಬಂದು ಮಗನನ್ನು ನೆನೆನೆನೆಸಿ ಅಳಹತ್ತಿದರು. ಆದರೆ ಎಲ್ಲವೂ ಅರಣ್ಯರೋದನದಂತಾಯಿತು, ಸೀಮಂತಿನಿಯು ಸಹಗಮನಕ್ಕೆ ಸಿದ್ಧಳಾದಳು. ಪತಿಯ ಶವವಿಲ್ಲದ ಸಹಗಮನವು ನಿಷಿದ್ಧವು ಎಂದು ಹೇಳಿ ಆಕೆಯ ಮಹೋಪಸರ್ಗವನ್ನು ತಂದೆಯು ಮುಂದೆಸಿದನು. ಇನ್ನು ಒಂದು ವರುಷದ ವರೆಗೆ ಚಿಕ್ಕ ಪ್ರಾಯದ ನೀನು ಸಹಗಮನಾದಿ ವಿಚಾರ ಮಾಡಬೇಡ ಎಂದು ತಂದೆ-ತಾಯಿಗಳು ಆಕೆಯನ್ನು ಪ್ರತಿಬಂಧಿಸಿದರು. ನಿರ್ವಾಹವಿಲ್ಲದೆ ಅವಳು ಪತಿ ಸ್ಮರಣೆಯೊಂದಿಗೆ ವೈಧವ್ಯದ ಕಾಲ ಕಳೆಯಹತ್ತಿದಳು. ಆದರೂ ಆಕೆ ತನ್ನ ಸೋಮವಾರ ವ್ರತದಲ್ಲಿ ತಪ್ಪಲಿಲ್ಲ, ಪತಿವಿರಹಿತೆಯಾದರೂ ಅದು ತನ್ನ ಮುಂಬರುವ ಜನ್ಮದ ಇಡಿಗಂಟೆಂದು ಸೋಮವಾರ ವ್ರತವಿಂದ ಅಂತರಿಸಲಿಲ್ಲ.

ನಿಷಧನಗರದಿಂದ ಬಂದಿದ್ದ ಇಂದ್ರಸೇನನೂ ಅವನ ಹೆಂಡತಿಯೂ ಪುತ್ರವಿಯೋಗ ದುಃಖಾಗ್ನಿಯಿಂದ ಹೃದಯವನ್ನು ಸುಟ್ಟುಕೊಳ್ಳುತ್ತ ತಮ್ಮ ರಾಜಧಾನಿಗೆ ಹಿಂತಿರುಗಿ ಹೋದರು. ಅಲ್ಲಿಗೆ ಹೋಗುವಷ್ಟರಲ್ಲಿ ದಾಯಾದಿಗಳು ಇಂದ್ರಸೇನನ ಅಧಿಕಾರ ದೂರಿರಿಸಿ ತಾವೇ ರಾಜ್ಯ ಸೆಳೆದುಕೊಂಡು ಆಳಹತ್ತಿದರು. ಇಂದ್ರಸೇನನು ಅಲ್ಲಿಗೆ ಹೋದ ಕೂಡಲೆ ಹೆಂಡತಿ ಸಹಿತ ಆತನನ್ನು ಅವರು ಕಾರಾಗೃಹದಲ್ಲಿ ಚೆಲ್ಲಿದರು.

ಅತ್ತ— ಕಾಲಿಂದಿ ಪ್ರವಾಹದಲ್ಲಿ ಚಿತ್ರಾಂಗದನು ಮುಳುಗಿದುದೊಂದೇ ತಡ. ಪ್ರವಾಹದಲ್ಲಿ ವಿಹರಿಸುತ್ತಿದ್ದ ಪಾತಾಳ ಲೋಕದ ನಾಗಕನ್ನಿಕೆಯರು ಅವನ ರೂಪಕ್ಕೆ ಮೋಹಿಸಿ ನೌಕೆ ಸಹಿತ ಅವನನ್ನು ತಮ್ಮ ಲೋಕಕ್ಕೆ ಕರೆದೊಯ್ದರು. ಗತಪ್ರಾಣನಾಗಿದ್ದ ಅವನಿಗೆ ಅಮೃತ ಪ್ರಾಶನಮಾಡಿಸಿ, ಸಚೇತನ

ಸಿನಲ್ಲಿ ಬಂದಿತು. ಅಷ್ಟರಲ್ಲಿ ಅವಳು ತನ್ನ ಪತಿಯು ಮೃತವಾದ ಸ್ಥಾನ ನೋಡಿ ಕೈಮುಗಿದು ಹಿಂತಿರುಗಬೇಕೆಂದು ಅತ್ತ ನೋಡುತ್ತಾಳೆ! ಅಶ್ವಾರೋಹಿ ಸುಂದರ ತರುಣನು. ಇವನಾರಿರಬಹುದೆಂದು ಆಕೆ ನಿರೀಕ್ಷಿಸಿ ಕಣ್ಣು ಅರಳಿಸುವಷ್ಟರಲ್ಲಿಯೇ ಅವನು ಈಕೆಯ ಕಡೆಗೇ ಬರಹತ್ತಿದನು. "ಇವನು ನನ್ನ ಪತಿಯೇ? ಸ್ವರೂಪ ತದ್ರೂಪವಿರುವದಲ್ಲವೇ? ಈತನು ಮಾಯಾವಿಯಾಗಿರಬಹುದೇ? ನನ್ನ ಪತಿಯಾಗದಿದ್ದರೆ ನನ್ನ ಕಡೆಗೇ ಏಕೆ ಬರುವನು?" ಇತ್ಯಾದಿಯಾಗಿ ಆಕೆ ತನ್ನನ್ನೇ ತಾನು ಪ್ರಶ್ನಿಸುತ್ತ ನಿಂತಿರುವಾಗಲೇ ಅವನಾದರೂ ಆಕೆಯ ಎದುರು ಬರುತ್ತಿರುವಾಗ "ಇವಳು ನನ್ನ ಸತಿಯೇ? ನನ್ನ ಸತಿಯಾಗಿದ್ದರೆ ಈಕೆ ಜೀವಿಸುತ್ತಿದ್ದಳೇ? ಎಂದು ತನ್ನನ್ನು ತಾನು ಕೇಳಿಕೊಳ್ಳುತ್ತ ಇನ್ನಿಷ್ಟು ಮುಂದೆ ಬಂದನು, ಆಕೆಯು ಕೊರಳಲ್ಲಿ ಮಾಂಗಲ್ಯಸೂತ್ರವಿಲ್ಲದನ್ನು ಚಿಂತೆಯಿಂದ ಕೊರಗಿ ಸೊರಗಿದ ಆಕೆಯ ಶರೀರವನ್ನೂ ನೋಡಿ "ಇವಳೇ ನನ್ನ ಸತಿ ಸೀಮಂತಿನಿ" ಎಂದು ನಿರ್ಧರಿಸಿದನು. ಹಾಗು ತನ್ನ ಮನಸಿನೊಡನೆ ವಿಚಾರ ಮಾಡುತ್ತ ನಿಂತಿದ್ದ ಆಕೆಯ ಮುಂದೆಯೇ ಕುದುರೆಯಿಂದ ಕೆಳಕ್ಕೆ ಜಿಗಿದನು. ಆಕೆಗೆ ಎದುರು ಹೋಗಿ ಆಕೆಯ ಕೈಹಿಡಿದನು, ಆಗ ಸೀಮಂತಿನಿಗೆ ಭಯ-ಆಶ್ಚರ್ಯ-ಆನಂದ ಇವೆಲ್ಲವು ಒಂದೇ ಕಾಲಕ್ಕೆ ಹುಟ್ಟಿ, ಅವಳು—"ನೀವು ನನ್ನ ಪತಿ ಚಿತ್ರಾಂಗದರೇನು?" ಎಂದು ಕೇಳಲು ಅವನು—"ಅಲ್ಲಲ್ಲ! ನಾನು ಚಿತ್ರಾಂಗದ ಗೆಳೆಯ ಸಿದ್ಧನು. ನಿನ್ನ ಪತಿ ಚಿತ್ರಾಂಗದನು ಇನ್ನು ಮೂರೇ ದಿನಕ್ಕೆ ಬಂದು ನಿನ್ನನ್ನು ಕೂಡಿಕೊಳ್ಳುವನು. ಇದನ್ನು ನೀನು ಯಾರಿಗೂ ಹೇಳತಕ್ಕದ್ದಲ್ಲ" ಎಂದು ಹೇಳಿ ಆಕೆಯಿಂದ ತಾನು ಹೋದಂದಿನಿಂದ ಇದುವರೆಗೆ ನಡೆಸಿದ ಸಂಗತಿಯನ್ನೆಲ್ಲ ಪರ್ಯಾಯದಿಂದ ಕೇಳಿಕೊಂಡನು, ಆಕೆಯು ಹೇಳಿಕೆಯಲ್ಲಿ

ಇಂದ್ರಸೇನನಿಗೆ ಒದಗಿದ ದುರವಸ್ಥೆಯನ್ನು ಸಹ ಆತನು ಅರಿತುಕೊಂಡನು. ಕಡೆಗೆ ಅವನು 'ಸೀಮಂತಿನಿ! ನಿಜವಾಗಿಯೂ ಇನ್ನು ಮೂರು ದಿನಕ್ಕೆ ನಿನ್ನ ಪತಿಯನ್ನು ಕಳಿಸುವೆನು. ಇದು ಸತ್ಯವೆಂದು ನಂಬು" ಎಂದು ಹೇಳಿ ತನ್ನ ಕುದುರೆಯನ್ನೇರಿ ಹಿಂದಿರುಗಿ ನೋಡದೆ ನಿಷಧನಗರದ ಮಾರ್ಗಹಿಡಿದು ಹೋದನು. ಸಂಗಡ ಅದೃಶ್ಯ ರೂಪದಿಂದ ನಾಗಸೈನ್ಯವು ಇದ್ದೇ ಇದ್ದಿತು.

ಸೀಮಂತಿನಿಯು ಯಮುನೆಯಲ್ಲಿ ನಡೆದ ಸಂಗತಿಯ ರಹಸ್ಯವನ್ನರಿಯದೆ ಮುಗ್ಧಭಾವದಿಂದಲೇ ಮಂದಿರಕ್ಕೆ ಹೋದಳು. ಮುಂದಿನ ಮೂರು ದಿನದ ಒಂದೊಂದು ನಿಮಿಷವು ಆಕೆಗೆ ಒಂದೊಂದು ಯುಗವಾಗಿ ಪರಿಣಮಿಸಿದವು. ತಾನು ಕಂಡುದನ್ನೂ ವರ್ತಿಸಿದ ಸಂಗತಿಯನ್ನೂ ಅವಳು ಗೌಪ್ಯವಾಗಿಯೇ ಇರಿಸಿಕೊಂಡಿದ್ದಳು.

ಕುದುರೆಯನ್ನೇರಿದ ಚಿತ್ರಾಂಗದನು ತನ್ನ ನಗರದ ಬಹಿರೋದ್ಯಾನಕ್ಕೆ ಬಂದಿಳಿದನು. ತನ್ನ ಜೊತೆಗಿದ್ದ ನಾಗಕುಮಾರರಿಬ್ಬರನ್ನೂ ದಾಯಾದಿ ರಾಜರ ಕಡೆಗೆ ಕಳಿಸಿದನು. ಅವರು ನೆಟ್ಟನೆ ಅರಮನೆಗೆ ಹೋಗಿ— "ಈ ರಾಜ್ಯದ ರಾಜಕುಮಾರ ಚಿತ್ರಾಂಗದ ರಾಜರು ನಮ್ಮ ತಕ್ಷಕರಾಜನ ಮಹಾಸೈನ್ಯದೊಂದಿಗೆ ನಗರದ ಬಹಿರೋದ್ಯಾನಕ್ಕೆ ಬಂದಿಳಿದಿರುವರು. ನಡೆಯಿರಿ, ನೀವು ಅವರನ್ನು ಸಂದರ್ಶಿಸಲು ನಡೆಯಿರಿ. ಇದರಲ್ಲಿ ತಪ್ಪಿದರೆ ಒಳಿತಾಗಲಿಕ್ಕಿಲ್ಲ. ಅವರ ತಂದೆಯವರೆಲ್ಲಿ?" ಎಂದು ಕೇಳಿ ಹಾಗೇ ಹಿಂದಿರುಗಿದರು!

ದಾಯಾದಿರಾಜರು ದಿಕ್ಕು ತಪ್ಪಿದಂತಾದರು. ಆಗಲೇ ಅವರು ಕಾರಾಗೃಹದಿಂದ ಇಂದ್ರಸೇನ

ನನ್ನು ಕರೆತಂದು ಸಿಂಹಾಸನ ಮೇಲೆ ಕುಳ್ಳಿರಿಸಿದರು. ಮತ್ತು ಚಿತ್ರಾಂಗದ ರಾಜನು ಬಂದಿರುವ ಶುಭ ವಾರ್ತೆಯನ್ನರುಹಿದರು. ಎಲ್ಲರೂ ವೈಭವದಿಂದ ಬಂದು ಚಿತ್ರಾಂಗದನನ್ನು ಮನ್ನಿಸಿ ಎದುರ್ಗೊಂಡು ಕರೆದೊಯ್ದರು. ಚಿತ್ರಾಂಗದನು ತನ್ನ ತಾಯಿ–ತಂದೆಗಳಿಗೆ ವಂದಿಸಿದನು. ನಂತರ ಜೊತೆಗೆ ಬಂದಿದ್ದ ನಾಗ ಸೈನ್ಯವನ್ನು ಪರಾಮರಿಸಿ ಪಾತಾಳಕ್ಕೆ ಬೀಳ್ಕೊಟ್ಟನು.

ಇಂದ್ರಸೇನನು ಆಗಲೇ ಚಿತ್ರಾಂಗದನ ಸುಖಾಗಮನದ ವಾರ್ತೆಯನ್ನು ಪತ್ರ ಬರೆದು ದೂತರಿಂದ ಚಿತ್ರವರ್ಮನಿಗೆ ತಿಳಿಸಿದನು. ಅವರೆಲ್ಲರಿಗೂ ಕೌತುಕ ಆನಂದಗಳಾದವು !

ಚಿತ್ರವರ್ಮನು ಪುನಃ ಚಿತ್ರಾಂಗದ ಸೀಮಂತಿನಿಯರ ಸಡಗರದ ಮಾಂಗಲ್ಯ ಮಹೋತ್ಸವವನ್ನು ಹಮ್ಮಿದನು. ನಿಷಧನಗರದಿಂದ ಇಂದ್ರಸೇನನು ಎಲ್ಲರಿಂದೊಡಗೂಡಿ ಚಿತ್ರಾಂಗದನನ್ನು ವೈಭವದಿಂದ ಕರೆದುಕೊಂಡು ಚಿತ್ರವರ್ಮನ ನಗರಕ್ಕೆ ಬಂದನು. ಶುಭವನ್ನು ಕೋರುವ ಉತ್ಸಾಹಭರಿತ ಸಮಾರಂಭಗಳು ನೆರವೇರುತ್ತಿರುವಾಗಲೇ ಚಿತ್ರಾಂಗದ–ಸೀಮಂತಿನಿಯರ ಪುನರ್ಮಿಲನವಾಯಿತು ! ಎಲ್ಲರಿಗೂ ಆನಂದ !

ಚಿತ್ರಾಂಗದನು ನಾಗರಾಜನಿಂದ ತಂದ ಅಮೂಲ್ಯ ರತ್ನದಾಭರಣಗಳಿಂದ ಸೀಮಂತಿನಿಯನ್ನು ಶೋಭಿಗೊಳಿಸಿದನು. ನಂತರ ಸೀಮಂತಿನಿ ಸಹಿತ ತನ್ನ ನಿಷಧನಗರಕ್ಕೆ ಹೋದನು. ಇಂದ್ರಸೇನನು ಮಗ ಚಿತ್ರಾಂಗದನಿಗೆ ಪಟ್ಟಗಟ್ಟಿ ಪತ್ನಿಯೊಡನೆ ಶಿವಸ್ಮರಣೆಯಲ್ಲಿ ಕಾಲಕಳೆಯುತ್ತಿದ್ದನು.

ರಾಜ್ಯಪಟ್ಟ ಸ್ವೀಕರಿಸಿ ಚಿತ್ರಾಂಗದನು ಮುಂದೆ ಹತ್ತು ಸಾವಿರ ವರುಷವಾಳಿದನು. ಈ ಪ್ರಕಾರ ಶ್ರೀ ಗುರುಗಳು ಸಾವಿತ್ರಿಗೆ ಸೋಮವಾರ ವ್ರತದ ಮಹಿಮೆಯನ್ನು ಕಥೆಯಿಂದ ಸ್ಪಷ್ಟೀಕರಿಸಿದರು.

ಮತ್ತು ಅವರು ದತ್ತ-ಸಾವಿತ್ರಿಯರಿಗೆ— 'ನೀವು ಈ ವ್ರತ ಮಾಡಿದರೆ ಅದೇ ನಮ್ಮ ಸೇವೆ'' ಎಂದು ಹೇಳಿ ಆ ದಂಪತಿಗಳನ್ನು ಕಳಿಸಿಕೊಟ್ಟರು.

ದತ್ತ-ಸಾವಿತ್ರಿಯರು ಮಾಹೂರಿಗೆ ಬಂದರು. ಪುನರ್ಜನ್ಮಪಡೆದ ದತ್ತನನ್ನೂ ನಿಷ್ಠೆಯಿಂದ ಪತಿಯ ಗತಿಸಿದ ಪ್ರಾಣವನ್ನು ದೊರಕಿಸಿಕೊಂಡ ಸಾವಿತ್ರಿಯನ್ನೂ ಅವರವರ ತಾಯಿ-ತಂದೆಗಳೂ ಅತ್ತೆ-ಮಾವಂದಿರೂ ಬಂಧು ಬಳಗವೆಲ್ಲವೂ ಕೊಂಡಾಡಿತು.

ಗೋಪೀನಾಥನು ಶಿವಾರಾಧನೆ, ಗುರುಪೂಜೆ, ಬ್ರಾಹ್ಮಣ ಭೋಜನ, ದಾನ ದಕ್ಷಿಣೆ ಇವೆಲ್ಲವುಗಳಿಗೆ ಅಪಾರ ದ್ರವ್ಯ ವ್ಯಯಮಾಡಿದನು.

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—c—

# ೩೬ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ಸಿದ್ಧಮುನಿಯು ನಾಮಧಾರಕನಿಗೆ ಶ್ರೀ ಗುರುಚರಿತ್ರೆಯನ್ನು ಮುಂದೆ ಸಾಗಿಸಿ ಹೇಳಹತ್ತಿದನು. ಎಂತೆಂದರೆ—

''ನಾಮಧಾರಕ! ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ಅವರ ಮಹಿಮೆಯು ಅತ್ಯಂತ ಹರಡಿತು. ಆ ಗ್ರಾಮದಲ್ಲಿಯೇ ಅವರ ಮಹಿಮೆ ತೋರುವ ಒಂದು ಪ್ರಸಂಗವು ಎಂತಿರುವದೆಂದರೆ— ಆ

ಗಾಣಗಾಪುರದಲ್ಲಿ ಒಬ್ಬ ವೇದಜ್ಞ ಬ್ರಾಹ್ಮಣನಿದ್ದನು. ಅವನು ಅನ್ಯರಿಂದ ಪ್ರತಿಗ್ರಹ ಸ್ವೀಕರಿಸುತ್ತಿದ್ದಿಲ್ಲ ಹಾಗು ಪರಾನ್ನವನ್ನು ತೆಗೆದುಕೊಳ್ಳುತ್ತಿದ್ದಿಲ್ಲ ನಿತ್ಯವೂ ಶುಕ್ಲವೃತ್ತಿಯಿಂದ ಭಿಕ್ಷೆ ಬಂದಷ್ಟರಿಂದಲೇ ಉಪಜೀವನ ಸಾಗಿಸಿಕೊಳ್ಳುತ್ತಿದ್ದನು ಮನೆಯಲ್ಲಿ ಅವನ ಪತ್ನಿಯು ಅವನ ವೃತ್ತಿಯನ್ನು ಒಪ್ಪುತ್ತಿರಲಿಲ್ಲ. ಆಸೆ-ಕ್ರೋಧಗಳು ಆಕೆಯಲ್ಲಿ ಮನೆಮಾಡಿದ್ದವು. ಆದರೆ ಪತಿಯ ವೃತ್ತಿಯೆದುರು ಆಕೆಯ ಆಟ ನಡೆಯುತ್ತಿರಲಿಲ್ಲ

ಒಂದುದಿನ ಆ ಗ್ರಾಮಕ್ಕೆ ಒಬ್ಬ ಸಿರಿವಂತ ಧಾರ್ಮಿಕ ಗೃಹಸ್ಥನು ಬಂದನು. ಒಂದು ಸಮಾರಾಧನೆ ಹೂಡಿದನು. ಕೇವಲ ದಂಪತಿ ಸುವಾಸಿನಿ-ಬ್ರಾಹ್ಮಣರಿಗೇ ಅವನ ಆಮಂತ್ರಣವಿತ್ತು. ಪರಾನ್ನ-ಪ್ರತಿಗ್ರಹ ಸ್ವೀಕರಿಸದ ಈ ಬ್ರಾಹ್ಮಣನು ಆ ಗೃಹಸ್ಥನ ಆಮಂತ್ರಣ ಸ್ವೀಕರಿಸಲಿಲ್ಲ. ಆಸೆಬುರಕಿಯಾದ ಅವನ ಹೆಂಡತಿಗೆ ಇದು ಸರಿಬರಲಿಲ್ಲ. ಶ್ರೀಗುರುಗಳಿಂದ ತನ್ನ ಗಂಡನನ್ನು ದಂಪದಾಮಂತ್ರಣಕ್ಕೆ ಒಡಂಬಡಿಸಬೇಕೆಂದು ಆಕೆ ಯೋಚಿಸಿ ಆಗಲೇ ಗುರುಗಳ ಬಳಿಗೆ ಹೋದಳು. ಅವಳು—"ಸ್ವಾಮಿ! ನಾವು ದರಿದ್ರರು. ನನ್ನ ಪತಿಯು ಪರಾನ್ನ-ಪ್ರತಿಗ್ರಹ ಸ್ವೀಕರಿಸುವದಿಲ್ಲ. ಹೀಗಾಗಿ ಭೋಜನದ ಆಮಂತ್ರಣದಿಂದ ನಾವು ಹೊರತಾಗಿರುವೆವು. ಸುಗ್ರಾಸ ಭೋಜನ-ದಕ್ಷಿಣೆಗಳನ್ನು ವೈದಿಕನ ಪತ್ನಿಯಾದ ನಾನು ಎಂದೂ ಕಂಡಿಲ್ಲ. ಇಂದು ಈ ಗ್ರಾಮದಲ್ಲಿ ಒಬ್ಬ ಗ್ರಹಸ್ಥನು ದಂಪತ್ಪೂಜೆಯ ಸಮಾರಂಭ ಹೂಡಿರುವನು. ಊರಿನ ಸುವಾಸಿನಿ-ಬ್ರಾಹ್ಮಣರು ಭೋಜನಕ್ಕೆ ಹೋಗುವರು. ಅವರಂತೆ ವೈದಿಕರಾದ ನಾವೇಕೆ ಹೋಗಬಾರದು? ನನ್ನ ಪತಿಯು ಇದಕ್ಕೆ ಒಪ್ಪಲೊಲ್ಲನು. ಗುರುಗಳಾದ ತಾವು ನನ್ನ ಪತಿಯನ್ನು ಆ ಗೃಹಸ್ಥನ ಆಮಂತ್ರಣ

ಸ್ವೀಕರಿಸುವದಕ್ಕೆ ಒಡಂಬಡಿಸುವಿರೆಂಬ ಆಸೆಯಿಂದ ಇಲ್ಲಿಗೆ ಬಂದಿರುವೆನು'' ಎಂದು ಹೇಳಿದಳು. ಕೂಡಲೆ ಗುರುಗಳು ಆ ಬ್ರಾಹ್ಮಣನನ್ನು ಕರೆಯಿಸಿ— ''ವಿಪ್ರನೆ! ನಿನ್ನ ಪತ್ನಿಯು ಇಂದಿನ ಸಮಾರಂಭದ ಭೋಜನಕ್ಕೆ ಆಸೆಮಾಡುತ್ತಿರುವಳು. ಆಕೆಯ ಬಯಕೆಯನ್ನು ಪೂರೈಸುವದು ನಿನ್ನ ಧರ್ಮವು'' ಎಂದು ಹೇಳಿದರು. ಬ್ರಾಹ್ಮಣನು ಗುರ್ವಾಜ್ಞೆಯನ್ನು ಮನ್ನಿಸಿ ಆಮಂತ್ರಣ ಸ್ವೀಕರಿಸಿದನು. ಅವನ ಹೆಂಡತಿಯು ಬಲು ಹಿಗ್ಗಿದಳು.

ಭೋಜನ ಸಮಯವೊದಗಲು ಎಲ್ಲ ಬ್ರಾಹ್ಮಣ ಸುವಾಸಿನಿಯರು ಭೋಜನಕ್ಕೆ ಹೋದರು. ಗೃಹಸ್ಥನು ದಂಪತ್ಪೂಜೆ ಮಾಡಿದನು. ಎಲ್ಲರೂ ಸಾಲ್ಹಿಡಿದುಕೊಂಡು ಊಟಕ್ಕೆ ಕುಳಿತರು. ಈ ಬ್ರಾಹ್ಮಣನೂ ಅವನ ಪತ್ನಿಯೂ ಒಂದೊಂದು ಸಾಲಿನಲ್ಲಿ ಕುಳಿತರು. ಪಂಚಪಕ್ವಾನ್ನಗಳನ್ನು ವ್ಯವಸ್ಥಿತವಾಗಿ ಬಡಿಸಿದರು ಊಟಕ್ಕೆ ಆರಂಭವಾಯಿತು.

ಊಟ ಮಾಡುತ್ತಿರುವಾಗ ಬ್ರಾಹ್ಮಣ ಪತ್ನಿಯು ವಿಪರೀತ ದೃಶ್ಯ ಕಂಡಳು. ಆಕೆ ಉಣ್ಣುತ್ತಿರುವಾಗ ಹಂದಿ-ನಾಯಿಗಳು ಆಕೆಯ ಎಲೆಯಲ್ಲಿ ಬಾಯಿ ಹಾಕಿ ತಿನ್ನುತ್ತಿರುವಂತೆ ತಾನೆ ನೋಡಿದಳು. ಆದರಿಂದ ಅವಳು ಉಣ್ಣುವದಕ್ಕೆ ಹೇಸಿಕೊಂಡು ತನ್ನ ಎಲೆಯನ್ನು ಬಿಟ್ಟೆದ್ದು ಹೊರಗೆ ಹೋದಳು. ಆಕೆಯ ಪತಿಗೂ ಅವಳಿಗೊದಗಿದ ಸ್ಥಿತಿಯೇ ಉಂಟಾಗಿ ಅವನು ಪಂಕ್ತಿಯಲ್ಲಿ ಬ್ರಾಹ್ಮಣರಿಗೆ ಹೇಳಿಕೊಂಡು ಎದ್ದು ಹೊರಬಿದ್ದನು. ಕೈತೊಳೆಕೊಳ್ಳುವಲ್ಲಿ ಓಕರಿಸುತ್ತ ನಿಂತಿದ್ದ ತನ್ನ ಹೆಂಡತಿಯನ್ನು ಕಂಡು 'ಹೀಗೇಕೆ?' ಎಂದು ಕೇಳಲು ಆಕೆ ತನಗಾದ ಸ್ಥಿತಿಯನ್ನು ಹೇಳಿದಳು. ಬ್ರಾಹ್ಮಣನು— ''ಮೂರ್ಖಳೆ! ನಿನ್ನ ಮೋಕ

ನಾನೂ ವೈವಹೀನನಾದೆನು. ನನಗೆ ಪರಾನ್ನ ಸ್ವೀಕರಿಸಿದ ದೋಷವೊದಗಿತು. ನಡೆ ಹೋಗುವಾ" ಎಂದು ಹೆಂಡತಿ ಸಹಿತ ಗುರುಗಳ ಬಳಿಗೆ ಬಂದನು. ಗುರುಗಳು ಆ ಬ್ರಾಹ್ಮಣಿತಿಯನ್ನು ಕುರಿತು— 'ಹೇಗಿದೆ ಪರಾನ್ನದ ಸುಖ? ನಿನ್ನ ಆಸೆ ಪೂರ್ಣವಾಯಿತೇ? " ಎಂದು ಕೇಳಲು ಆಕೆ ಪಶ್ಚಾತ್ತಾಪದಿಂದ— "ಸ್ವಾಮೀ! ನಾನು ಬುದ್ಧಿಗೇಡಿ. ನನ್ನ ಪತಿಯನ್ನು ಪರಾನ್ನ ದೋಷಕ್ಕೆ ಗುರಿಮಾಡಿದೆನು ಕ್ಷಮಿಸಬೇಕು" ಎಂದು ಬೇಡಿಕೊಂಡಳು. ಬ್ರಾಹ್ಮಣನು ತಾನು ಪರಾನ್ನ ಸ್ವೀಕರಿಸಿ ದೋಷಕ್ಕೆ ಗುರಿಯಾದೆನು'' ಎಂದು ದೀನತೆಯಿಂದ ನುಡಿದನು.

ಗುರುಗಳು ಬ್ರಾಹ್ಮಣನ ಮಾತಿಗೆ ನಕ್ಕು— ''ನೀನು ನಿನ್ನ ಹೆಂಡತಿಯ ವಾಸನೆ ಪೂರೈಸಿದಿ. ಇಂದಿನ ಪರಾನ್ನ ಭೋಜನದಿಂದ ನಿನಗೆ ದೋಷವಿಲ್ಲ. ಹಳಹಳಿಸಬೇಡ'' ಎಂದು ಹೇಳಿದರಲ್ಲದೆ ಮತ್ತೂ ಗುರುಗಳು ಆ ಬ್ರಾಹ್ಮಣನನ್ನು ಕುರಿತು— ''ಬ್ರಾಹ್ಮಣ ! ದೇವ-ಪಿತೃಕರ್ಮಗಳನ್ನು ಆಚರಿಸುವ ಗೃಹಸ್ಥನಿಗೆ ಬ್ರಾಹ್ಮಣನಾದರೂ ದೊರೆಯದಿದ್ದಾಗ ಅವನಲ್ಲಿ ಭೋಜನಕ್ಕೆ ಹೋದರೆ ದೋಷವಿಲ್ಲ. ಆದರೆ ಹೋಗದಿದ್ದರೆ ಮಾತ್ರ ಅನಂತ ದೋಷಗಳೊದಗುವವು'' ಎಂದು ಹೇಳಿದನು. ಅದನ್ನು ಕೇಳಿ ಬ್ರಾಹ್ಮಣನು— "ಸ್ವಾಮೀ ! ಅನ್ನವನ್ನು ಯಾರಲ್ಲಿ ಸ್ವೀಕರಿಸಬೇಕು? ಯಾರಲ್ಲಿ ಸ್ವೀಕರಿಸಬಾರದು? ಸ್ವೀಕರಿಸಿದರೆ ಬರುವ ದೋಷಗಳೇನು? '' ಎಂದು ಕೇಳಲು ಗುರುಗಳು— ''ಬ್ರಾಹ್ಮಣನೆ ! ಗುರುಗಳ ಮನೆಯ ಅನ್ನ ಸ್ವೀಕರಿಸಿದರೆ ದೋಷವಿಲ್ಲ. ಅದರಂತೆ ವೈದಿಕ ಬ್ರಾಹ್ಮಣ, ಸೋದರಮಾವ, ಹೆಣ್ಣುಕೊಟ್ಟ ಮಾವ, ದೇವಸ್ಥಾನ, ಮಹಾನ್ ಸಾಧುಗಳು ಇವರಲ್ಲಿ ಅನ್ನ ಸ್ವೀಕರಿಸಬಹುದು. ಇನ್ನು ಅನ್ನ ಸ್ವೀಕರಿಸಬಾರದ ಸ್ಥಾನ

“ಪ್ರತಿಯೊಬ್ಬನು ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಶ್ರೀ ಗುರುವಿನ ಸ್ಮರಣೆ ಮಾಡಬೇಕು. ಬಳಿಕ ಹರಿ-ಹರ-ಬ್ರಹ್ಮರನ್ನು ಸ್ತುತಿಸಬೇಕು. ಅದರಂತೆ ನವಗ್ರಹ, ಪುಣ್ಯಶ್ಲೋಕಿಗಳು, ಸನಕಾದ್ಯರು, ನಾರದ-ತುಂಬುರರು, ಸಿದ್ಧ-ಯೋಗಿಗಳು, ಸಪ್ತಸಮುದ್ರ ಹಾಗು ಪರ್ವತಗಳು, ಸಪ್ತ ಪಿತೃ ದೇವತೆಗಳು,, ಸಪ್ತ ರ್ಷಿಗಳು, ಸಪ್ತದ್ವೀಪ-ಸಪ್ತಲೋಕ ಇವೆಲ್ಲವುಗಳ ಹೆಸರುಗಳನ್ನು ಉಚ್ಚರಿಸಿ ಪ್ರಾತಃಸ್ಮರಣೆ ಮಾಡಬೇಕು. ಇದಾದ ಬಳಿಕ ಹಾಸಿಗೆಯಿಂದ ಎದ್ದು ಮೂತ್ರವಿಸರ್ಜಿಸಿ ಬಂದು ಚೌಚಾಚಮನ ಮಾಡಬೇಕು, ಕಾಲ ಕಾಲಕ್ಕೆ ಮಾಡುವ ಆಚಮನಗಳನ್ನು ವಿಧಿಪೂರ್ವಕ ಮಾಡಬೇಕು. ಅರುಣೋದಯದ ನಂತರ ಮಲವಿಸರ್ಜನೆಗಾಗಿ ಬಹಿರ್ಭೂಮಿಗೆ ಹೋಗಬೇಕು. ಹಗಲು ಉತ್ತರನಿಟ್ಟಿಗೆ ರಾತ್ರಿ ದಕ್ಷಿಣ ನಿಟ್ಟಿಗೆ ಮೋರೆಮಾಡಿ ಕುಳಿತು ವಿಸರ್ಜನೆಮಾಡಬೇಕು. ವಿಸರ್ಜನೆಯನ್ನು ನೆಲದ ಮೇಲಿನ ಹುಲ್ಲು-ತರಗೆಲೆಗಳ ಮೇಲೇ ಮಾಡಬೇಕು. ನಂತರ ಪ್ರಾಕ್ಷಾಲನೆಯಿಂದ ಶುಚಿಯಾಗಿ ಶೌಚವಿಧಿಯನ್ನು ತೀರಿಸಬೇಕು. ಇಷ್ಟಾದನಂತರ ದಂತಧಾವನೆಯನ್ನು ಮಾಡಿಕೊಳ್ಳಬೇಕು. ಪರ್ವಣಿ ಹಾಗು ಪ್ರತಿಪದೆ-ಷಷ್ಠಿ ತಿಥಿಗಳಲ್ಲಿ ಹಲ್ಲುಗಳನ್ನು ಉಜ್ಜಿಕೊಳ್ಳಬಾರದು. ಇವಲ್ಲದೆ ನವಮಿ, ದ್ವಾದಶಿ, ಶನಿ-ರವಿ-ಮಂಗಳ ವಾರಗಳಲ್ಲಿಯೂ ವಿವಾಹ-ಶ್ರಾದ್ಧ ದಿನಗಳಲ್ಲಿಯೂ ದಂತ ಧಾವನ ಮಾಡಿಕೊಳ್ಳಬಾರದ, ಪುಣ್ಯವೃಕ್ಷದ ಕಟ್ಟಿಗೆಯಿಂದ ಹಲ್ಲು ತಿಕ್ಕಬೇಕು ಇಷ್ಟಾದ ಮೇಲೆ—

ಪ್ರಾತಃಸ್ನಾನ ಮಾಡಬೇಕು. ಪ್ರಾತಃಸ್ನಾನದಿಂದ ಬುದ್ಧಿ ಬೆಳೆಯುವದು, ದುಃಸ್ವಪ್ನ ಬೀಳಲಾರವು, ಶೋಕ-ದರಿದ್ರತೆ-ಚಿಂತೆ ದೂರಾಗುವವು. ನಿರ್ಮಲೋದಕದಿಂದ ಸ್ನಾನ ಮಾಡಬೇಕು. ಪ್ರಾತಃಸ್ನಾನಕ್ಕೆ ಶೀತಲೋದಕವು ಉತ್ತಮವು, ಅಶಕ್ತರು ಬಿಸಿ ನೀರಿನಿಂದ ಸ್ನಾನ ಮಾಡಬೇಕು. ಸ್ನಾನಗಳಲ್ಲಿ

ಅನೇಕ ಪ್ರಕಾರಗಳಿವೆ, ಅವುಗಳಲ್ಲಿ ಮಂಗಲಸ್ನಾನವೊಂದಿರುವದು. ಮಂಗಲಸ್ನಾನವೆಂದರೆ ತೈಲಾಭ್ಯಂಜನ ಮಾಡಿಕೊಂಡು ಸ್ನಾನಮಾಡುವದು ಅಥವಾ ಎರೆಕೊಳ್ಳುವದು. ರವಿವಾರದಲ್ಲಿ ಮಂಗಲಸ್ನಾನದಿಂದ ಮೈಯಲ್ಲಿ ಜ್ವರ ಬರುವದುಂಟು. ಸೋಮವಾರದ ಮಂಗಲಸ್ನಾನದಿಂದ ಕಾಂತಿಹೀನತೆಯಾಗುವದು. ಮಂಗಳವಾರ ಎರೆದುಕೊಂಡರೆ ಮೃತ್ಯುವೂ, ಬುಧವಾರ ಲಕ್ಷ್ಮೀಪ್ರಾಪ್ತಿಯೂ ಗುರುವಾರ ದ್ರವ್ಯನಾಶವೂ ಶುಕ್ರವಾರ ಪುತ್ರ ಘಾತವೂ ಹಾಗು ಶನಿವಾರದ ಮಂಗಲಸ್ನಾನದಿಂದ ಅಖಿಲ ಸಂಪದವೂ ಪ್ರಾಪ್ತವಾಗುವದು. ಸ್ನಾನದ ಬಗೆಗೆ ಇನ್ನೂ ಹೇಳುವದೇನೆಂದರೆ— ನದಿಯಲ್ಲಿ ಸ್ನಾನಮಾಡುವಾಗ ಪ್ರವಾಹಕ್ಕೆದುರು ನಿಂತು ಸ್ನಾನಮಾಡಬೇಕು. ಮನೆಯಲ್ಲಿ ಮುಂಜಾನೆ ಸೂರ್ಯನಿಗೆದುರಾಗಿಯೂ ಸಾಯಂಕಾಲದಲ್ಲಿ ಪಶ್ಚಿಮ ಮುಖವಾಗಿಯೂ ಕುಳಿತು ಸ್ನಾನಮಾಡಬೇಕು. ಸ್ನಾನದ ನಂತರ ವಸ್ತ್ರಧಾರಣ ಮಾಡಿಕೊಳ್ಳಬೇಕು.

ಋಷಿಗಳು ಒದ್ದೆಯವಸ್ತ್ರ, ಕೌಷಾಯವಸ್ತ್ರ ಧರಿಸಬೇಕು. ಗೃಹಸ್ಥನು ಕೆಂಪುವಸ್ತ್ರ, ಜೀರ್ಣ ವಸ್ತ್ರಗಳನ್ನು ಧರಿಸಬಾರದು. ಹಾಗು ಒಂದೇ ದೋತರ ಧರಿಸಬಾರದು. ವಸ್ತ್ರಧಾರಣದ ನಂತರ—

ಮಂತ್ರ–ವಿಧಾನೋಕ್ತವಾಗಿ ವಿಭೂತಿ–ಭಸ್ಮಗಳನ್ನು ಧರಿಸಿಕೊಳ್ಳಬೇಕು. ಆ ಬಳಿಕ ಬ್ರಹ್ಮ ಯಜ್ಞಕರ್ಮವನ್ನು ಆಚರಿಸಬೇಕು. ಇಷ್ಟಾದ ಬಳಿಕ— ಪ್ರಾತಃಸಂಧ್ಯಾವಂದನೆಯನ್ನು ವಿಧಾನೋಕ್ತವಾಗಿ ಆಚರಿಸತಕ್ಕದ್ದು. ಬೆಳಗಿನ ನಕ್ಷತ್ರವಿರುವಾಗ ಆರಂಭಿಸಿ ಸೂರ್ಯೋದಯಕ್ಕೆ ಅರ್ಘ್ಯಕೊಡಬೇಕು" ಎಂದು ಹೇಳಿ ಶ್ರೀ ಗುರುಗಳು ಆ ಬ್ರಾಹ್ಮಣನಿಗೆ ಪರಾಶರ ಸ್ಮೃತಿಯಲ್ಲಿ ಉಲ್ಲೇಖಿತ ಸಂಧ್ಯಾವಿಧಿಯನ್ನೆಲ್ಲ ಬೋಧಿಸಿದರು. ಆ ಸ್ಮೃತಿಯಲ್ಲಿಯ ಗಾಯತ್ರಿ ಜಪವಿಧಾನ, ಗಾಯತ್ರಿ ಪ್ರಾರ್ಥನೆ, ಪ್ರಾಣಾಯಾಮವಿಧಿ,

ಮಾರ್ಜನ-ಅರ್ಘ್ಯಗಳವಿಧಾನ, ಸಂಧ್ಯಾ-ಜಪಸ್ನಾನ, ಆಸನ, ಗಾಯತ್ರಿ ಸ್ವರೂಪಧ್ಯಾನ ಇವೆಲ್ಲವನ್ನು ಹೇಳಿ ನಂತರ— ಸಾಯಂಸಂಧ್ಯಾಧ್ಯಾನವನ್ನೂ, ಗಾಯತ್ರಿ ಮಂತ್ರ-ನ್ಯಾಸಗಳನ್ನೂ, ಗೋತ್ರೋಚ್ಚಾರಕ್ರಮವನ್ನೂ, ಔಪಾಸನವಿಧಿಯನ್ನೂ ಹೇಳಿದರು. ಕಡೆಗೆ ಬ್ರಹ್ಮಯಜ್ಞ-ತರ್ಪಣವಿಧಿ-ವಿಧಾನ ಹೇಳಿದರು. ಮತ್ತೂ ಅವರು ಆ ಬ್ರಾಹ್ಮಣನಿಗೆ ತರ್ಪಣವನ್ನು ಕುರಿತು:— ಬ್ರಾಹ್ಮಣಾ ! ಪಿತೃಗಳಿಗೆ ಕೃಷ್ಣವರ್ಣದ ತಿಲದಿಂದ ತರ್ಪಣಕೊಡಬೇಕು. ದೇವತೆಗಳಿಗೆ ತರ್ಪಣಕೊಡುವಾಗ ಸವ್ಯವಾಗಿಯೂ, ಋಷಿಗಳಿಗೆ ಕೊಡುವಾಗ ಮಾಲಾಕಾರವಾಗಿಯೂ ಪಿತರುಗಳಿಗೆ ತರ್ಪಣ ಕೊಡುವಾಗ ಅಪಸವ್ಯವಾಗಿಯೂ ಯಜ್ಞೋಪವೀತವನ್ನಿರಿಸಿ ಕೊಂಡು ತರ್ಪಣ ಕೊಡಬೇಕು. ದೇವರಿಗೆ ಒಂದು, ಋಷಿಗಳಿಗೆ ಎರಡು ಹಾಗು ಪಿತರುಗಳಿಗೆ ಮೂರು ಇವರಂತೆ ತರ್ಪಣ ಕೊಡಬೇಕು. ಪಿತೃ ತರ್ಪಣಕ್ಕೆ ಮುಖ್ಯ ಕೃಷ್ಣ ತಿಲವನ್ನೇ ಉಪಯೋಗಿಸಬೇಕು. ಆದರೆ ಆದಿತ್ಯವಾರ, ಶುಕ್ರವಾರ, ಮಘಾನಕ್ಷತ್ರ ಷಷ್ಠಿ, ನವಮಿ, ಏಕಾದಶಿ ಈ ದಿವಸಗಳಲ್ಲಿ ತಿಲಕತರ್ಪಣ ಕೊಡಬಾರದು ಹಾಗು ವಿವಾಹ, ಉಪನಯನ, ಜನ್ಮನಕ್ಷತ್ರ, ಜನ್ಮದಿವಸ, ಶುಭ ದಿವಸ ಈ ದಿನಗಳಲ್ಲಿ ತನ್ನ ಮನೆಯಲ್ಲಿ ತರ್ಪಣ ಕೊಡಬಾರದು. ಒಂದು ವೇಳೆ ಕೊಡುವದಾದರೆ ದರ್ಭೆಯ ಪವಿತ್ರ ಧರಿಸಿಕೊಂಡು ಕೊಡಬೇಕು.

ಕೈಕಾಲು ತೊಳೆದುಕೊಳ್ಳದೆ ಮಂಗಲಸ್ನಾನ ಮಾಡುವದೂ, ದಕ್ಷಿಣೆಯಿಲ್ಲದೆ ಶ್ರಾದ್ಧಮಾಡು ವದೂ, ಎಳ್ಳು ಇಲ್ಲದೆ ತರ್ಪಣ ಕೊಡುವದೂ ನಿಷ್ಫಲವು.

ಬ್ರಾಹ್ಮಣಾ ! ತರ್ಪಣಕ್ಕೆ ನಿಷಿದ್ಧ ದಿನಗಳನ್ನು ಹೇಳಿದೆ. ಆ ದಿನ ತರ್ಪಣ ಕೊಡಬಾರದು,

ದೀಪಾವಳಿಯ ಚತುರ್ದಶಿಯ ದಿವಸ ನಿಷಿದ್ಧ ದಿನವಿದ್ದರೂ ಆ ದಿವಸ ತರ್ಪಣ ಕೊಡಲೇಬೇಕು. ಮಂಗಳವಾರ, ಕೃಷ್ಣಚತುರ್ದಶಿಗೆ ತರ್ಪಣಕೊಡಬೇಕು. ಯಮತರ್ಪಣ ಕೊಡುವಾಗ ಯಜ್ಞೋಪವೀತ ಸವ್ಯವಾಗಿರಿಸಿ ಯಮನ ಹದಿಮೂರು ನಾಮಗಳನ್ನು ಉಚ್ಚರಿಸಿ ಒಂದೊಂದು ಎಳ್ಳನ್ನು ತಕ್ಕೊಂಡು ಮೂರು ಸಾರೆ ತರ್ಪಣಕೊಡಬೇಕು. ಯಮನ ಆ ಹೆಸರುಗಳಾವವೆಂದರೆ— ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ, ಕಾಲ, ಸರ್ವಭೂತಕ್ಷಯಕ, ಔದುಂಬರ, ನೀಲಯ, ಪರಮೇಷ್ಠಿ, ವೃಕೋದರ, ಚಿತ್ರ ಹಾಗು ಚಿತ್ರಗುಪ್ತ. ಈ ಪ್ರತಿಯೊಂದು ಹೆಸರಿನಿಂದ ಒಂದೊಂದು ತರ್ಪಣಕೊಡಬೇಕು. ಇದರಿಂದ ಪಾಪ, ರೋಗ ಅಪಮೃತ್ಯುಗಳು ದೂರಾಗುವವು. ಭೀಷ್ಮಾಷ್ಟಮಿಯ ದಿನ ಭೀಷ್ಮನಿಗೆ ತರ್ಪಣ ಕೊಡಲು ಇಡೀ ವರ್ಷದ ಪಾಪ ದೂರಾಗುವವು. ಈ ಪ್ರಕಾರ ತರ್ಪಣಕೊಟ್ಟು, ಸೂರ್ಯನ ಹೆಸರಿನಿಂದ ಅರ್ಘ್ಯಕೊಡಬೇಕು" ಎಂದು ಶ್ರೀ ಗುರುಗಳು ಆ ಬ್ರಾಹ್ಮಣನಿಗೆ ಆಚಾರಧರ್ಮ ಬೋಧಿಸಿದರು!

ಎಂದು ಸಿದ್ಧಮುನಿಯು ಹೇಳಿದನು.

—o—

## ೩೭ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಶ್ರೀ ಗುರುಗಳು ಬ್ರಾಹ್ಮಣನಿಗೆ ಪರಾಶರ ಸ್ಮೃತಿಯುಕ್ತಿ ಉಚ್ಚರಿಸಿದ ಆಹ್ನಿಕ ವಿಚಾರ ಹೇಳಿದರು. ನಂತರ ಅದೇ ಸ್ಮೃತಿಯಲ್ಲಿಯ ಆಚಾರ ಧರ್ಮವನ್ನು ಹೇಳಹತ್ತಿದರು. ಅಂತೆಂದರೆ—

"ಬ್ರಾಹ್ಮಣನೆ ! ಗೃಹರಕ್ಷಣೆಯ ನಿಮಿತ್ತ ಅಗ್ನಿಮಂಥನಕ್ಕಾಗಿ ಬೇಕಾಗುವ ಕಟ್ಟಿಗೆಗಳನ್ನು ಸಂಗ್ರಹಿಸಬೇಕಲ್ಲದೆ ದೀವಿಗೆ, ಗಂಧ, ಕಲಶ, ಘೃತ, ಕೃಷ್ಣಾಜಿನ, ಧಾಬಳಿ, ಇವೆಲ್ಲವುಗಳ ವ್ಯವಸ್ಥೆ ಮಾಡಿಕೊಳ್ಳಬೇಕು. ಬಿಳಿಯ ಕಮಲ ಮೊದಲಾದ ಪುಷ್ಪಗಳನ್ನು ತಂದಿರಿಸಿಕೊಳ್ಳಬೇಕು. ಮನೆಯಲ್ಲಂತೂ ಸಕಲ ಪಾಪಗಳನ್ನು ದೂರೀಕರಿಸುವ ಗೋಮಾತೆಯನ್ನು ಸಾಕಿ ಸಲುಹಬೇಕು. ಇನ್ನು ದೇವ ಪೂಜೆಯ ವಿಧಾನ ವೆಂತೆಂದರೆ—

ಮೊದಲು ದೇವಮಂದಿರವನ್ನು ಸಮ್ಮಾರ್ಜನೆಗೊಳಿಸಬೇಕು. ರಂಗವಲ್ಲಿಯನ್ನು ರೇಖಿಸಬೇಕು. ನಂತರ ಶುಭಾಸನದ ಮೇಲೆ ಕುಳಿತು ದೇವಪೂಜೆ ಮಾಡಬೇಕು. ದೇವಪೂಜೆ-ವೈಶ್ವದೇವ ಮಾಡದ ಬ್ರಾಹ್ಮಣನು ಪಾಪಕ್ಕೆ ಗುರಿಯಾಗುವನು. ದೇವಪೂಜೆಯಲ್ಲಿ ಆರು ಪ್ರಕಾರಗಳಿವೆ. ಉದಕಪೂಜೆ, ಅಗ್ನಿಪೂಜೆ, ಮಾನಸಪೂಜೆ, ಸೂರ್ಯಪೂಜೆ, ಪ್ರತಿಮಾಪೂಜೆ, ಹಾಗು ಯಜ್ಞಪೂಜೆ, ಈ ಪ್ರಕಾರಗಳಲ್ಲದೆ ಗೋ-ಬ್ರಾಹ್ಮಣಪೂಜೆ, ಗುರುಪೂಜೆ ಇವು ವಿಶಿಷ್ಟ ಪೂಜೆಗಳು. ಸಾಲಿಗ್ರಾಮ ಪೂಜೆಯೂ ಪಾಪನಾಶಗೊಳಿಸುವದು. ಪ್ರತಿಮೆಯ ಹಾಗು ಕಾಷ್ಟ-ಪಾಷಾಣ ಮೂರ್ತಿಯ ಪೂಜೆಯನ್ನು ಗುರುವಿನ ಆಜ್ಞೆಯಿಂದ ಮಾಡಬೇಕು. ಪೂಜೆಯ ಕಾಲಕ್ಕೆ ಶುದ್ಧ ಆಸನದ ಮೇಲೆ ಕುಳಿತು ಪ್ರಾಣಾಯಾಮ ಮಾಡಬೇಕು, ನಂತರ ಪರಮಾತ್ಮನನ್ನು ಚೇತರಿಸಬೇಕು. ಸಂಕಲ್ಪ, ಅಂಗನ್ಯಾಸ, ಕಲಶಪೂಜೆ, ಶಂಖಪೂಜೆ ಮಾಡಿ ನಿರ್ಮಾಲ್ಯವನ್ನು ತೆಗೆಯಬೇಕು. ಬಳಿಕ ಶ್ರೀ ಗುರು ಸ್ಮರಣೆಯಿಂದ ಪೀಠಪೂಜೆ, ದ್ವಾರಪೂಜೆ, ದಿಶಾಪೂಜೆ ಮಾಡಿ ಮಂತ್ರೋಕ್ತವಾಗಿ ದೇವನ ಆವಾಹನ ಮಾಡಬೇಕು. ನಂತರ ಪಾದ್ಯ, ಅರ್ಘ್ಯ, ಆಚಮನ, ಸ್ನಪನ

ಇವೆಲ್ಲ ಉಪಚಾರ ಮುಗಿಸಿ ದೇವರನ್ನು ಶುಭಾಸನದಲ್ಲಿ ಕುಳ್ಳಿರಿಸಬೇಕು. ಬಳಿಕ ವಸ್ತ್ರ, ಯಜ್ಞೋಪವೀತ, ಗಂಧಾಕ್ಷತೆ, ಪುಷ್ಪ ಇವುಗಳ ಉಪಚಾರ ಮಾಡಬೇಕು. ಇದಾದನಂತರ ಸುಗಂಧ-ಪರಿಮಳ-ಧೂಪಗಳ ಉಪಚಾರ ನೆರವೇರಿಸಿ ಏಕಾರ್ತಿಕ್ಯ ಮಾಡಬೇಕು. ಇಷ್ಟಾದ ಮೇಲೆ ನೈವೇದ್ಯ ಅರ್ಪಿಸಬೇಕು. ಬಳಿಕ ತಾಂಬೂಲ, ಸುವರ್ಣಪುಷ್ಪ ಅರ್ಪಿಸಿ ನೀರಾಂಜನ ಪ್ರಕಾಶಿಸಬೇಕು. ತರುವಾಯ ಪುಷ್ಪಾಂಜಲಿ ಅರ್ಪಿಸಿ ನಮಸ್ಕಾರ ಮಾಡಬೇಕು. ಬ್ರಾಹ್ಮಣಾ ! ನಮಸ್ಕಾರದ ಬಗೆಗೆ ವಿಚಾರವೆಂತಿರುವದೆಂದರೆ—

ದೇವನನ್ನು ಬಲಕ್ಕಿರಿಸಿಕೊಂಡು ನಮಸ್ಕರಿಸಬೇಕು. ತಾಯ್ತಂದೆ ಗುರು ವಿಪ್ರರ ಸನ್ಮುಖದಲ್ಲಿ ಹೋಗಿ ಅವರಿಗೆ ವಂದಿಸಬೇಕು. ಸಭೆಯಲ್ಲಿ ಬ್ರಾಹ್ಮಣನಿಗೆ ಒಂದೇ ನಮಸ್ಕಾರಮಾಡಬೇಕು. ದೇವಪ್ರೂಜೆಯಲ್ಲಿಯೂ ಅದರಂತೆ ಎಲ್ಲರೂ ನಮಸ್ಕರಿಸಬೇಕು. ತಾಯ್ತಂದೆ ಗುರುಗಳಿಗೆ ಎರಡೂ ಕೈಗಳಿಂದ ವಂದಿಸಬೇಕು. ಆಗ ಅವರ ಬಲಗಾಲ ಮೇಲೆ ತನ್ನ ಬಲಗೈ ಹಾಗು ಎಡಗಾಲ ಮೇಲೆ ತನ್ನ ಎಡಗೈ ಹಿಡಿದು ನಮಸ್ಕರಿಸಬೇಕು. ಬ್ರಾಹ್ಮಣನೆ ! ತಾಯಿಯ ತಂದೆ, ಗುರು, ತಾಯಿ, ತಂದೆ, ಭಯನಿವಾರಕ, ಅನ್ನದಾಯಕ, ಉಪನಯನ ಕರ್ತಾರ, ಪುರೋಹಿತ, ಹಾಗು ಇವರ ಪತ್ನಿಗಳು. ಇವರೆಲ್ಲರನ್ನು ಗುರುಸ್ಥಾನದಲ್ಲಿ ಎಣಿಸಿ ನಮಸ್ಕರಿಸಬೇಕು. ಹಿರಿಯ ಬಂಧು, ಚಿಕ್ಕಪ್ಪ, ವಯಸ್ಸಿನಿಂದ ಹಿರಿಯರಾದ ಇಷ್ಟ-ಮಿತ್ರರು, ಇವರು ನಮಸ್ಕಾರಕ್ಕೆ ಯೋಗ್ಯರು. ಇನ್ನು ನಮಸ್ಕಾರಕ್ಕೆ ವಯಸಿನಿಂದ ಕಿರಿಯನು ಅಯೋಗ್ಯನು. ಚೆಂಕಿ-ಸಮಿಧೆ-ಪುಷ್ಪ-ದರ್ಭೆಗಳನ್ನು ಕೈಯಲ್ಲಿ ಹಿಡಿದವನು ಆಗ ಇನ್ನೊಬ್ಬರಿಗೆ ನಮಸ್ಕರಿಸುವದು ಅಯೋಗ್ಯವು. ನೀರಲ್ಲಿ ನಿಂತುಕೊಂಡು ಸ್ನಾನ ಮಾಡುವದು ಯೋಗ್ಯವಲ್ಲ. ಬ್ರಾಹ್ಮಣನು ಓಡಿ

ಹೋಗುತ್ತಿರುವಾಗ, ಮಂಗಲಸ್ನಾನ ಮಾಡುತ್ತಿರುವಾಗ ನಮಸ್ಕಾರ ಮಾಡಬಾರದು. ಈ ಪ್ರಕಾರ ನಮಸ್ಕಾರದ ಬಗೆಗೆ ತಿಳುವಳಿಕೆಯಿರಬೇಕು.''

ದೇವರಿಗೆ ನಮಸ್ಕಾರ ಮಾಡಿದ ನಂತರ ಗೀತ ವಾದ್ಯಾದಿಗಳ ಸೇವೆಯನ್ನು ಅರ್ಪಿಸಿ ಪ್ರಾರ್ಥನೆ ಮಾಡಿಕೊಳ್ಳಬೇಕು. ಬ್ರಾಹ್ಮಣನೆ! ಈ ಪ್ರಕಾರ ದೇವಪೂಜೆ ಮಾಡಿ ಹಸ್ತಗಳಿಂದ ದೇವಪೀಠ ಸ್ಪರ್ಶಿಸಿ ಉತ್ತರ ಪೂಜೆ ಮಾಡಬೇಕು. ನಂತರ ಉದ್ವಾಸನ ಮಾಡಬೇಕು. ತದನಂತರ ವೈಶ್ವದೇವವನ್ನು ವಿಧಿಪೂರ್ವಕ ಮಾಡಬೇಕು. ಆ ಸಮಯಕ್ಕೆ ಯಾವದೇ ಅತಿಥಿಯು ಬಂದರೆ ಅನ್ನ ಕೊಡಬೇಕು. ಅವನ ಕುಲ-ಗೋತ್ರ ವಿಚಾರಿಸಬಾರದು. ಅನ್ನದಾನ ಕೊಡದೆ ತಾನು ಅನ್ನ ಸ್ವೀಕರಿಸಬಾರದು. ಒಂದು ವೇಳೆ ವೈಶ್ವದೇವದ ಮೊದಲೇ ಬಂದ ಅತಿಥಿಗೆ ಭಿಕ್ಷೆ ನೀಡಲು ಅದರಿಂದ ವೈಶ್ವದೇವದ ಫಲವೇ ಸಿಗುವದು. ವೈಶ್ವದೇವದ ನಂತರ ಬಲಿಹರಣ ತಾನು ತೆಗೆಯದೆ ಅನ್ಯರಿಂದ ತೆಗೆಯಿಸಬೇಕು. ಇದಾದ ಮೇಲೆ ಗೋಗ್ರಾಸ ಕೊಡಬೇಕು.

ಬ್ರಾಹ್ಮಣನೆ! ಅತಿಥಿಗೆ ಪಂಕ್ತಿ-ಪ್ರಪಂಚ ಮಾಡಬಾರದು. ಗೃಹಸ್ಥನು ದಿನದ ಎರಡೂ ಹೊತ್ತು ಊಟ ಮಾಡಬೇಕು. ಭೋಜನವನ್ನು ವಿಧಿವತ್ತಾಗಿ ಮಾಡಬೇಕು. ಅವನು ತಾಮ್ರ ಪಾತ್ರೆಯಲ್ಲಿ ಊಟ ಮಾಡಬಾರದು. ನಿತ್ಯ ಕಂಚಿನ ಪಾತ್ರೆಯಲ್ಲಿ ಉಣ್ಣುವದು ಯುಕ್ತವು. ಆದರೆ ಆ ಪಾತ್ರೆ ಐದು ಸೇರು ತೂಕಕ್ಕಿಂತ ಹೆಚ್ಚು-ಕಡಿಮೆ ಇರಬಾರದು. ಹಾಗು ಆ ಪಾತ್ರೆ ಭಿನ್ನವಾಗಿರಬಾರದು. ಶೂದ್ರನು ಉಂಡು ಉಳಿದದ್ದನ್ನು ಬ್ರಾಹ್ಮಣನು ಉಣ್ಣಬಾರದು, ಎಲೆಯಲ್ಲಿ ಅನ್ನ ಹಾಕಿದ ಮೇಲೆ ಅವಕ್ಕೆ ನಮ

ಸ್ಮರಿಸಬೇಕು. ಅಭಿಘಾರ ಹಾಕಿದ ನಂತರವೇ ಪ್ರಾಣಾಹುತಿ ತಕ್ಕೊಳ್ಳಬೇಕು. ಬ್ರಾಹ್ಮಣನೇ ! ಪ್ರಾಣಾಹುತಿಯನ್ನು ಹಲ್ಲಿಗೆ ಸ್ಪರ್ಶಿಸಬಾರದು, ಮೌನದಿಂದ ಭೋಜನ ಮಾಡಬೇಕು. ಉಣ್ಣುವಾಗ ಮೊದಲು ಮಧುರಾನ್ನ ಸೇವಿಸಬೇಕು. ಶೀಘ್ರ ಭೋಜನ ಮಾಡಬೇಕು. ಅಂದರೆ ಆಕಳು ನೀರು ಕುಡಿಯುವದಕ್ಕೆ ಹತ್ತುವಷ್ಟು ಕಾಲದಲ್ಲಿಯೇ ಊಟ ಮುಗಿಸಬೇಕು. ಇನ್ನು ಊಟದ ಪ್ರಮಾಣವೆಂತಿರಬೇಕೆಂಬುವದನ್ನು ಕೇಳು. ಸನ್ಯಾಸಿಯು ಎಂಟು ತುತ್ತು, ಅರಣ್ಯವಾಸಿಗಳು ಹದಿನಾರು ತುತ್ತು ಹಾಗು ಗೃಹಸ್ಥನು ಮೂವತ್ತೆರಡು ತುತ್ತು ಸ್ವೀಕರಿಸಬೇಕು. ಎಲೆಯಲ್ಲಿ ಅನ್ನ ಚೆಲ್ಲಬಾರದು. ತುಪ್ಪ-ಪಾಯಸಗಳನ್ನು ಶೇಷಿಸದೇ ಬಿಡಬೇಕು.

ಭೋಜನಕ್ಕೆ ತಕ್ಕ ಸ್ಥಾನಗಳು— ಆನೆ-ಕುದುರೆಗಳ ಮೇಲೆ ಕುಳಿತಾಗ ಉಣ್ಣಬಾರದು. ಸ್ಮಶಾನ-ದೇವಾಲಯ-ಮಲಗುವ ಕೋಣೆಗಳಲ್ಲಿ ಉಣ್ಣಬಾರದು.

ರಾತ್ರಿಯಲ್ಲಿ ದೀಪವಿಲ್ಲದೆ ಉಣ್ಣಬಾರದು, ತುತ್ತಿನಲ್ಲಿ ಕೂದಲು ಬರಲು ಉಣ್ಣಬಾರದು, ಕಥೆ ಹೇಳುತ್ತ ಉಣ್ಣಬಾರದು, ದೇವರಿಲ್ಲದ ಗುಡಿಯಲ್ಲಿ ಉಣ್ಣಬಾರದು. ಅನ್ಯ ಸ್ತ್ರೀಯಳೊಡನೆ ಸಹ ಭೋಜನ ಮಾಡಬಾರದು. ಕುಲಸ್ತ್ರೀಯರೊಡನೆ ದೋಷವಿಲ್ಲ. ಕುಡಿದುಳಿದ ಎಂಜಲ ನೀರು ಕುಡಿಯಬಾರದು. ಎಡದ ಹಸ್ತ ಜೋಡಿಸಿದ ಬೊಗಸೆಯಿಂದ ನೀರು ಕುಡಿಯಬಾರದು.

ಅಪರಿಚಿತನೊಡನೆ ಊಟ ಮಾಡುವಾಗ ತನ್ನ ಹಾಗು ಅವನ ಮಧ್ಯದಲ್ಲಿ ನೀರು-ಭಸ್ಮಗಳನ್ನು ಹಾಕಿಕೊಳ್ಳಬೇಕು. ಅಥವಾ ನಡುವೆ ಕಂಬ ಇಲ್ಲವೆ ಹಾದಿ ಇದ್ದರೆ ಅಡ್ಡಿಯಿಲ್ಲ.

ಈ ಎಲ್ಲ ವಿಧಿಯಿಂದ ಭೋಜನ ಮಾಡಿದ ಮೇಲೆ ಉತ್ತರಾಪೋಶನ ತಕ್ಕೊಳ್ಳಬೇಕು ನಂತರ ಎದ್ದು ಹೊರಕ್ಕೆ ಹೋಗಿ ಕೈಬಾಯಿ ತೊಳೆದುಕೊಳ್ಳಬೇಕು. ಕೈ ತೊಳೆದುಕೊಂಡ ನಂತರಅಗಸ್ತ್ಯ, ಕುಂಭಕರ್ಣ ಮೊದಲಾದವರನ್ನು ಸ್ಮರಿಸಬೇಕು" ಎಂದು ಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. ಬಳಿಕ ಬ್ರಾಹ್ಮಣನು ವಿಧಿ–ನಿಷಿದ್ಧ ಅನ್ನಗಳ ವಿಚಾರ ಕೇಳಲು ಗುರುಗಳು—

"ವೈಶ್ವದೇವವಿಲ್ಲದ ಅನ್ನವೂ, ಬಹಳ ಉಪ್ಪು ಹಾಕಿದ ಅನ್ನವೂ ನಿಷಿದ್ಧವು– ಬಳ್ಳೊಳ್ಳಿ, ಗಜ್ಜರಿ ಈರುಳ್ಳಿ, ಮೂಲಂಗಿ, ಕೆಮುಲದೇಟು, ಬಿಳಿಕುಂಬಳ, ಕೊಡೆಯ ಆಕಾರದ ಪಲ್ಯ, ಇವು ನಿಷಿದ್ಧವು. ಆಕಳು, ಎಮ್ಮೆಗಳು ಈದು ಹತ್ತುದಿನ ಮೀರದಿದ್ದ ಹಾಲು ನಿಷಿದ್ಧ ಮಳೆಯಿಂದ ಬಂದ ಹೊಸ ನೀರು ಮೂರ ರಾತ್ರಿ ಮುಗಿಯುವವರೆಗೆ ಅಶುದ್ಧ. ಕುಂಬಳ, ಹಾಗಲ, ಪಡವಲ ಮೂಲಂಗಿ, ಎಣ್ಣೆ ನೆಲ್ಲಿ ಇವು ಗಳನ್ನು ಪ್ರತಿಪದೆ ದಿನ ತಿನ್ನಬಾರದು. ಅಷ್ಟಮಿಯ ದಿನ ಔದುಂಬರ ಫಲ ಸ್ವೀಕರಿಸಬಾರದು, ರವಿ ವಾರ ರಾತ್ರಿ ನೆಲ್ಲಿಯ ಕಾಯಿಯನ್ನೂ ಶುಕ್ರವಾರ ಬಳ್ಳಿಯ ಹಣ್ಣುಗಳನ್ನೂ, ಶನಿವಾರ ಬಸ್ಸಿಯನ್ನೂ, ಭಕ್ಷಿಸಬಾರದು. ಅದರಂತೆ ದತ್ತೂರಿ ಹಣ್ಣು, ಉಗುರುಕೂದಲು ಕೂಡಿದ ಅನ್ನ, ಕಾಗೆ, ಹದ್ದು, ಕೋಳಿ, ಬೆಕ್ಕು ಮುಟ್ಟಿದ ಆಹಾರ ಪದಾರ್ಥಗಳನ್ನು ತಿನ್ನಬಾರದು, ಇಲಿ, ಆಕಳುಗಳ ಮುಖಸ್ಪರ್ಶದ ಅನ್ನ ಭಕ್ಷಿಸ ಬಾರದು, ಹಳಸಿದ ಅನ್ನವು ನಿಷಿದ್ಧವು. ಎಣ್ಣೆ–ತುಪ್ಪ ಕೂಡಿದ ಅನ್ನವು ಹಳಸಿದರೆ ಅಪವಿತ್ರವು. ಕಾಳಿ ಸಿದ ಪದಾರ್ಥವು ಹಳಸಿದ್ದೆನ್ನಿಸುವದಿಲ್ಲ. ಬ್ರಾಹ್ಮಣನು ಹಾಲು ಹೈನು ಮಾರುವದು ನಿಷಿದ್ಧವು, ಉದ್ದಿನ ವಡೆ–ಹಪ್ಪಳಗಳು ಹಳಸುವದಿಲ್ಲ. ಅದರಂತೆ ಅರಳಿಟ್ಟು, ಕುಂದಮೂಲಾದಿಗಳು, ಜವೆಗೋದಿಯ ಪಾಯಸ,

ಉಪ್ಪು ಬೆರಸದಿದ್ದ ಹಾಗು ಬೆಲ್ಲ ಕೂಡಿದ ಪದಾರ್ಥ ಇವೆಲ್ಲ ಹಳಸಿದವಲ್ಲ" ಎಂದು ಗುರುಗಳು ಹೇಳಿದರು ಮತ್ತು ಅವರು ತಾಂಬೂಲ ವಿಷಯಕ್ಕೆ ಹೇಳಿ ಭೋಜನ ನಂತರ ಒಂದು ಪ್ರಹರ ವೇದಾಭ್ಯಾಸ ಮಾಡಿ ಶಯನ ಮಾಡಬೇಕೆಂದು ಹೇಳಿದರು. ಶಯನದ ವಿಧಿ-ಕ್ರಮ-ಸ್ಥಾನ ಇವೆಲ್ಲವನ್ನೂ ಬೋಧಿಸಿದರು ಅದರಲ್ಲಿಯೇ ಸ್ತ್ರೀ ಸಂಗದ ನೇಮಗಳನ್ನು ಹೇಳಿದರು.

ಈ ಪ್ರಕಾರ ಗುರುಗಳು ಬ್ರಾಹ್ಮಣನಿಗೆ ಆಚಾರ ವಿಧಿಗಳನ್ನು ಬೋಧಿಸಿದರು. ಬ್ರಾಹ್ಮಣನು ಒಳ್ಳೆ ಹರ್ಷಿತನಾಗಿ ಶ್ರೀಗುರು ಸ್ತೋತ್ರ ಮಾಡಿದನು. ಗುರುಗಳು ಅವನಿಗೆ— "ಇನ್ನು ನೀನು ಭಿಕ್ಷೆಗೂ ಸಹ ಹೋಗಬೇಡ-ಸದಾಚಾರದಿಂದಲೇ ಸುಖಿಯಾಗುವಿ" ಎಂದು ಹೇಳಿದರು. ಬ್ರಾಹ್ಮಣನು ಗುರುಬೋಧೆಯನ್ನನುಸರಿಸಿ ಆಚಾರ ಧರ್ಮಪಾಲಿಸಿ ಸುಖವನ್ನು ಪಡೆದನು. ಈ ಪ್ರಕಾರ ಸಿದ್ಧಮುನಿಯು ಹೇಳಿದನು.

—o—

## ೩೮ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ || ಸಿದ್ಧಮುನಿಯು ನಾಮಧಾರಕನನ್ನು ಕುರಿತು— "ನಾಮಧಾರಕ! ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ಅವರ ಮಹಿಮೆಯನ್ನು ಕೇಳಿ ನಿತ್ಯವೂ ಭಕ್ತರು ಬರಹತ್ತಿದರು. ಎಷ್ಟೋ ಸಿರಿವಂತರು ಭಕ್ತಿ ಪ್ರೇರಿತರಾಗಿ ಗುರುದರ್ಶನ ಕಾಣಿಕೆಯೆಂದು ಧನದ್ರವ್ಯವನ್ನು ತಂದು ಅವರ ಮುಂದೆ ಇಡಹತ್ತಿದರು. ಗುರುಗಳು ಆ ದ್ರವ್ಯವನ್ನು ಮುಟ್ಟುತ್ತಿರಲಿಲ್ಲ.

ಅವರಿಂದಲೇ ಅದನ್ನು ಬ್ರಾಹ್ಮಣ ಸಮಾರಾಧನೆಗೆಂದು ವಿನಿಯೋಗ ಮಾಡಿಸುತ್ತಿದ್ದರು. ಹೀಗಾಗಿ ಗುರು ಮಠದಲ್ಲಿ ನಿತ್ಯವೂ ಭಕ್ತರು ಮಾಡುತ್ತಿರುವ ಸಮಾರಾಧನೆಗಳು ತಪ್ಪಿರಲಿಲ್ಲ. ಈ ಸಮಾರಾಧನೆಗಳ ವಾರ್ತೆಯು ವ್ಯಾಪಿಸಿ, ತದುದ್ದೇಶವಾಗಿಯೇ ದೂರಿನ ಭಕ್ತರು ಅಲ್ಲಿಗೆ ಬರಹತ್ತಿದರು. ಇಂತಿರಲು ದೂರ ದೇಶದಿಂದ ಒಬ್ಬ ದರಿದ್ರ ಬ್ರಾಹ್ಮಣನು ತಾನೂ ತನ್ನ ಕೈಲಾದ ಮಟ್ಟಿಗೆ ಗುರುಗಳಿಗೆ ಭಿಕ್ಷೆ ಮಾಡಿಸಿ ಕೃತಾರ್ಥನಾಗಬೇಕೆಂಬ ಹವಣಿಕೆಯಿಂದ ಅಲ್ಲಿಗೆ ಬಂದನು. ಬರುವಾಗ ಅವನು ಮೂವರ ಭೋಜನಕ್ಕಾಗಿ ಅವಶ್ಯವಿರುವಷ್ಟು ಸಿಧಾಸಾಮಗ್ರಿಯನ್ನು ಕಟ್ಟಿ ತಂದಿದ್ದನು. ಗುರು ಮಠದಲ್ಲಿ ಉಳಿದುಕೊಂಡು ಆ ಗಂಟನ್ನು ಮಠದ ಒಂದೆಡೆಯಲ್ಲಿ ಇಟ್ಟನು, ಅಂದು ಅಲ್ಲಿ ನಡೆದಿರುವ ಸಮಾರಾಧನೆಯ ಭೋಜನ ಮಾಡಿದನು. ಮರುದಿನವೂ ಇನ್ನೊಬ್ಬರ ಸಮಾರಾಧನೆ ಯಾಯಿತು. ಇದರಂತೆ ಅವನು ಅಲ್ಲಿ ನಾಲ್ಕಾರುದಿನ ಕಳೆದರೂ ಗುರುಗಳಿಗೆ ತನ್ನ ಭಿಕ್ಷೆ ಸಲ್ಲಿಸುವದಕ್ಕೆ ಅವನಿಗೆ ಸಮಯವೇ ಸಿಗಲಿಲ್ಲ. ದೊಡ್ಡ ಪ್ರಮಾಣದಿಂದ ನಿತ್ಯ ನಡೆದಿರುವ ಸಮಾರಾಧನೆಗಳ ಮುಂದೆ ಈ ದರಿದ್ರ ಬ್ರಾಹ್ಮಣನ ಆಸೆಯು ಅದೆಂತು ಕೈಗೂಡುವದು? ಅದರಿಂದ ಅವನು ಉದಾಸೀನತೆ ತಾಳಿದನು ಶ್ರೀ ಗುರುಗಳು ಅವನ ಭಾವನೆಯನ್ನರಿತು ಅವನನ್ನು ತಮ್ಮ ಹತ್ತಿರ ಕರೆದು ಅವನ ಹವಣಿಕೆಯನ್ನು ಕೇಳಿಕೊಂಡರು. ಹಾಗು ತಮ್ಮ ಶಿಷ್ಯರಿಗೆ— "ಎಲೋ! ನಾಳಿನ ದಿನ ಈ ಬ್ರಾಹ್ಮಣನ ಭಿಕ್ಷೆ ಸ್ವೀಕರಿಸುವೆವು. ಇನ್ನಾರು ಮಾಡುವ ಸಮಾರಾಧನೆಗೆ ನಾಳೆ ಅಸ್ಪದವಿಲ್ಲ. ಈ ಬ್ರಾಹ್ಮಣನು ತಂದ ಸಾಮಗ್ರಿಯಲ್ಲಿಯೇ ಎಲ್ಲ ವ್ಯವಸ್ಥೆಯಾಗಲಿ" ಎಂದು ಅಪ್ಪಣೆಕೊಟ್ಟರು.

ಮರುದಿನ ಶಿಷ್ಯರು ಆ ಬ್ರಾಹ್ಮಣನು ತಂದ ಸಾಮಗ್ರಿಯಿಂದ ಅಡುಗೆ ಸಿದ್ಧಮಾಡಿ ಗುರುಗ

ಳಿಗೆ ಶ್ರುತಪಡಿಸಿದರು. ಆ ದಿನ ನಿತ್ಯ ಸಮಾರಾಧನೆಗೆ ಬರತಕ್ಕ ಬ್ರಾಹ್ಮಣರಿಗೆ ಆಮಂತ್ರಣವಿಲ್ಲದ್ದರಿಂದ ಅವರೆಲ್ಲರು ಆ ಬ್ರಾಹ್ಮಣನನ್ನು ನಿಂದಿಸುತ್ತ ಚಡಪಡಿಸಹತ್ತಿದರು. ಸರ್ವಾಂತರ್ಯಾಮಿ ಶ್ರೀ ಗುರುಗಳು ಅವರ ಹೃದಯವನ್ನರಿತು ಭಿಕ್ಷೆ ಮಾಡಿಸಲು ಬಂದ ಬ್ರಾಹ್ಮಣನನ್ನು ಕರೆಯಿಸಿ— "ಬ್ರಾಹ್ಮಣ! ಇಂದಿನ ಸಮಾರಾಧನೆ ನಿನ್ನದಾದುದರಿಂದ ಈ ಗ್ರಾಮದಲ್ಲಿಯ ಬ್ರಾಹ್ಮಣ-ಸುವಾಸಿನಿಯರಿಗೆಲ್ಲ ಭೋಜನಕ್ಕೆ ಆಮಂತ್ರಣ ಕೊಟ್ಟು ಬಾ" ಎಂದು ಹೇಳಿಕಳಿಸಿದರು. ಗುರುವಾಕ್ಯದ ಮೇಲೆ ನಿಷ್ಠೆಯಿಟ್ಟ ಆ ಬ್ರಾಹ್ಮಣನು ಊರಿನ ಬ್ರಾಹ್ಮಣರಿಗೆಲ್ಲ ಔತಣ ಹೇಳಿ ಬಂದು ಗುರುವಿಗೆ ವಂದಿಸಿದನು.

ತರುವಾಯ ಬ್ರಾಹ್ಮಣನು ಗಂಗೆಯ ಸ್ನಾನ ಮಾಡಿ ಬಂದನು, ಶ್ರೀ ಗುರುಗಳ ಪೂಜೆ ಮಾಡಿದನು, ಷೋಡಶೋಪಚಾರ ಸತ್ಕಾರವಾಯಿತು, ಗುರುಗಳು ತಮ್ಮ ಶಿಷ್ಯರನ್ನು ಕರೆದು— "ಎಲೆ ಹಾಕಿರಿ, ಉಪ್ಪು ಮೊದಲಾಗಿ ಎಲ್ಲವನ್ನೂ ಬಡಿಸಿರಿ, ಕೆಲವರು ಊರಲ್ಲಿ ಹೋಗಿ ಈ ಬ್ರಾಹ್ಮಣನಿಂದ ಆಮಂತ್ರಿತ ಹಾಗು ನಿರಾಮಂತ್ರಿತ ಬ್ರಾಹ್ಮಣ-ಸುವಾಸಿನಿಯರಿಗೆ ಭೋಜನಕ್ಕೆ ಶೀಘ್ರ ಬರಬೇಕೆಂದು ಸೂಚನೆ ಕೊಟ್ಟು ಬನ್ರಿ" ಎಂದು ಅಪ್ಪಣೆ ಮಾಡಿದರು, ಶಿಷ್ಯರು ಗುರುಮಠದ ತುಂಬಾ ಎಲೆಗಳನ್ನು ಮಂಡಿಸಿದರು, ಅದನ್ನು ನೋಡಿ ಅಡಿಗೆಯ ಶಿಷ್ಯರು ಓಡುತ್ತ ಗುರುಗಳ ಮುಂದೆ ನಿಂತು— "ಸ್ವಾಮಿ! ಬ್ರಾಹ್ಮಣನು ತಂದ ಸಾಮಗ್ರಿಯಿಂದ ಕೇವಲ ಮೂವರಿಗೆ ಸಾಕಾಗುವಷ್ಟು ಅಡಿಗೆ ಸಿದ್ಧವಾಗಿದೆ, ಇದನ್ನರಿಯದೆ ಆ ಬ್ರಾಹ್ಮಣನು ಊರಿಗೇ ಔತಣ ಕೊಟ್ಟಿರುವನು ಮುಂದೇನು ಗತಿ? ಎಂದು ಕೈಮುಗಿದು ಕೇಳಿದರು. ಗುರುಗಳು ಅಡಿಗೆಯ ಶಿಷ್ಯರು ಹೇಳಿದ್ದನ್ನು ಕೇಳಿ ಪಾಕಶಾಲೆಯಲ್ಲಿ ಪ್ರವೇಶ ಮಾಡಿದರು, ನೋಡುತ್ತಾರೆ! ಮೂವರಿಗೆ

ಸಾಕಷ್ಟು ಪಾಕ ಸಿದ್ಧವಾಗಿತ್ತು. ಕೂಡಲೆ ಅವರು ಆ ಅಡಿಗೆಗೆ ಕಮಂಡಲದ ತೀರ್ಥೋದಕ ಪ್ರೋಕ್ಷಿಸಿದರು. ಹಾಗು ಆ ಬ್ರಾಹ್ಮಣನಿಂದ ತಮ್ಮ ವಸ್ತ್ರವನ್ನು ಆ ಪಾಕ ಪಾತ್ರೆಗಳ ಮೇಲೆ ಆಚ್ಛಾದನೆ ಮಾಡಿಸಿದರು. ಊಟಕ್ಕೆ ಬಡಿಸುವವರನ್ನು ಕರೆದು— 'ಪಾತ್ರೆಗಳ ಮೇಲೆ ಹೊದಿಸಿದ ವಸ್ತ್ರ ತೆಗೆಯದೆ ಮುಸುಕಿನಲ್ಲಿಂದಲೇ ಪದಾರ್ಥ ತೆಗೆದುಕೊಂಡು ಹೋಗಿ ಬಡಿಸಿರಿ" ಎಂದು ಹೇಳಿದರು.

ಊರೊಳಗಿನ ಬ್ರಾಹ್ಮಣರೆಲ್ಲರು ಬಂದರು, ಎಲೆಗಳ ಮೇಲೆ ಕುಳಿತರು. ಗುರುಗಳಿಂದ ಅಪ್ಪಣೆ ಪಡೆದು ಆ ಬ್ರಾಹ್ಮಣನ್ನು ಎಲ್ಲರಿಗೂ ತೀರ್ಥಾದಿಗಳನು ಕೊಟ್ಟನು. ಬಡಿಸುವ ಶಿಷ್ಯರು ಎಲ್ಲ ಪದಾರ್ಥ ಬಡಿಸಿದರು, ಆ ಬ್ರಾಹ್ಮಣನಿಂದ ಎಲ್ಲರಿಗೂ ತುಪ್ಪ ಹಾಕಿಸಿದರು, ಬಳಿಕ ಸಮಾರಾಧನೆಯ ಕರ್ತಾರನು ಬ್ರಾಹ್ಮಣರು ಉಚ್ಚರಿಸುವ ಮಂತ್ರದೊಡನೆ ಪಂಕ್ತಿಗಳ ನಡುವೆ ನೀರು ಬಿಟ್ಟನು, ನಂತರ ಗುರು-ಶಿವ ಸ್ಮರಣೆಯೊಂದಿಗೆ ಎಲ್ಲರೂ ಭುಂಜಿಸಹತ್ತಿದರು, ಬಡಿಸುವವರು ದಕ್ಷತೆಯಿಂದ ಎಲ್ಲ ಪದಾರ್ಥಗಳನ್ನು ಸಾಕಷ್ಟಾಗಿ ಬಡಿಸಹತ್ತಿದರು, ಯಾವದೊಂದಕ್ಕೂ ಕೊರತೆಯಾಗಲಿಲ್ಲ. ಸಮಾರಾಧನೆಯ ಕರ್ತಾರನು ಎಲ್ಲ ಬ್ರಾಹ್ಮಣರಿಗೆ ಕೈಮುಗಿದು 'ಸಾವಕಾಶವಾಗಲಿ' ಇತ್ಯಾದಿ ಔಪಚಾರಿಕ ಶಬ್ದಗಳನ್ನು ಉಚ್ಚರಿಸುತ್ತಿದ್ದನು. ಈ ಸೊಬಗಿನಲ್ಲಿಯೇ ಎಲ್ಲರ ಭೋಜನವಾಯಿತು, ಎಲ್ಲರೂ ತೃಪ್ತಿಸೂಚಕವಾದ ತೇಗನ್ನು ಹೊರಗೆಡವಿದರು, ಎಲ್ಲರೂ ಕೈತೊಳಕೊಂಡರು, ಬ್ರಾಹ್ಮಣನು ಕೊಡುವ ತಾಂಬೂಲಾದಿಗಳನ್ನು ಸ್ವೀಕರಿಸಿದರು. ಶ್ರೀ ಗುರುಗಳಿಗೆ ವಂದಿಸಿದರು, ಗುರುಗಳು ಅವರೆಲ್ಲ— "ನಿಮ್ಮ ನಿಮ್ಮ ಪುತ್ರ-ಕಳತ್ರ ಮುಂತಾದವರೆಲ್ಲ ರನ್ನು ಎರಡನೆಯ ಪಂಕ್ತಿಯ ಭೋಜನಕ್ಕೆ ಕಳಿಸಿಕೊಡಿರಿ'' ಎಂದು ಅಪ್ಪಣೆ ಕೊಟ್ಟರು, ಅದರಂತೆ ಎರ

ಡನೇ ಪಂಕ್ತಿಯೂ ಮುಗಿಯಿತು, ಇಷ್ಟರಿಂದ ಊರಿನ ಎಲ್ಲ ಬ್ರಾಹ್ಮಣವರ್ಗದವರ ಭೋಜನ ಮುಗಿಯಿತು. ನಂತರ ಗುರುಗಳ ಅಪ್ಪಣೆಯಿಂದ ಶಿಷ್ಯರು ಊರಿನ ಶೂದ್ರಾದಿ ಜನರನ್ನು ಕರಕೊಂಡು ಬಂದು ಅವರಿಗೂ ಭೋಜನ ಮಾಡಿಸಿದರು, ಕೊನೆಗೆ ಊರಿನ ಅಂತ್ಯಜರನ್ನು ಕರೆಯಿಸಿ ಶೇಷಾನ್ನವನ್ನು ಅವರಿಗೆ ನೀಡಿ ಕಳಿಸಿದರು. ಎಲ್ಲರೂ ತೃಪ್ತಿಹೊಂದಿದರು. ಗಾಣಗಾಪುರದಲ್ಲಿ ಅಂದಿನ ದಿನ ಒಂದು ಪ್ರಾಣಿಯೂ ಕೂಡ ಸಮಾರಾಧನೆಯ ಗ್ರಾಸ ಭುಂಜಿಸದೆ ಉಳಿಯಲಿಲ್ಲ. ನಂತರ ಗುರುಗಳು ಆ ಬ್ರಾಹ್ಮಣನಿಗೆ ಭೋಜನ ಮಾಡಲು ಹೇಳಿದರು, ಅವನು ಭೋಜನ ಮಾಡಿದ ಮೇಲೆಯೂ ಇನ್ನೂ ಅಡಿಗೆ ಉಳಿಯಿತು. ಅದನ್ನು ಗುರುಗಳ ಅಪ್ಪಣೆಯಿಂದ ನದೀ ಪ್ರವಾಹಕ್ಕೆ ನೀಡಿದರು. ದರಿದ್ರ ಬ್ರಾಹ್ಮಣನು ಮಾಡಿದ ಸಮಾರಾಧನೆಯಿಂದ ಜಲಚರಗಳೂ ಕೂಡ ತೃಪ್ತಿಪಡೆದವು.

ಈ ಪ್ರಕಾರ ನಡೆದ ಆ ಸಮಾರಾಧನೆಯಲ್ಲಿ ಆ ದಿನ ನಾಲ್ಕು ಸಾವಿರ ಜನರುಗಳ ಭೋಜನವಾಯಿತು, ಈ ಸಮಾರಾಧನೆಯು ಜನರನ್ನೆಲ್ಲ ಚಕಿತಗೊಳಿಸಿತು, ಶ್ರೀ ಗುರುಗಳ ಅಘಟಿತ ಘಟನಾ ಸಾಮರ್ಥ್ಯವು ದಿಗ್ದೇಶಗಳಲ್ಲಿ ಹೊಗಳಲ್ಪಡಹತ್ತಿತು.

ಶ್ರೀ ಗುರುಗಳು ದೂರಿನಿಂದ ಬಂದ ಬ್ರಾಹ್ಮಣನು ದರಿದ್ರನಾದರೂ ನಿಷ್ಠೆಯಿಂದ ಭಿಕ್ಷೆ ಮಾಡಿದುದಕ್ಕೆ ಸಂತುಷ್ಟರಾದರು, ಹಾಗು ಅವನನ್ನು 'ಸುಖಿಯಾಗು' ಎಂದು ಹರಸಿ ಕಳಿಸಿಕೊಟ್ಟರು."
ಈ ಪ್ರಕಾರ ಸಿದ್ಧಮುನಿಯು ಹೇಳಿದನು.

—೦—

# ೩೯ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ "ನಾಮಧಾರಕಾ ! ಶ್ರೀ ಗುರುಗಳ ಮಹಿಮೆಯನ್ನು ಪ್ರಕಟಿಸಿದ ಇನ್ನೊಂದು ಅಪೂರ್ವ ಸಂಗತಿಯನ್ನು ಹೇಳುವೆನು ಕೇಳು" ಎಂದು ಸಿದ್ಧಮುನಿಯು ಹೇಳ ಹತ್ತಿದನು.

ಗಾಣಗಾಪುರ ಗ್ರಾಮದಲ್ಲಿ ಸೋಮನಾಥನೆಂಬ ಹೆಸರಿನ ಶೌನಕ ಗೋತ್ರದ ಬ್ರಾಹ್ಮಣನಿದ್ದನು. ಗಂಗಾದೇವಿ ಎಂಬ-ಪತ್ನಿಯಿಂದೊಡಗೂಡಿ ಆತನ ಸಂಸಾರಸಾಗಿದ್ದಿತು. ಅವರಿಬ್ಬರು ವಾರ್ಧಕ್ಯದ ಅವಸ್ಥೆ ಮುಟ್ಟಿದರೂ ಅವರಿಗೆ ಮಕ್ಕಳಾಗಲಿಲ್ಲ. ಪುತ್ರಾಪೇಕ್ಷೆಯಿಂದ ಅವರು ಹಲವು ವ್ರತೋಪವಾಸ ಮಾಡಿದರು, ದಾನ-ಧರ್ಮ ಮಾಡಿದರು, ಉಪಯೋಗವಾಗಲಿಲ್ಲ. ಗಂಗಾದೇವಿಯು ನಿತ್ಯವೂ ಗುರುಮಠಕ್ಕೆ ಬಂದು ಪಾದ ದರ್ಶನ ತೆಗೆದುಕೊಳ್ಳುತ್ತಿದ್ದಳು. ಇದರಲ್ಲಿ ಆಕೆ ಎಂದೂ ತಪ್ಪಿರಲಿಲ್ಲ. ಆಕೆಯ ಅವ್ಯಾಹತ ನಿಷ್ಠೆಯನ್ನು ನೋಡಿ ಗುರುಗಳು ಸಂತುಷ್ಟರಾದರು.

ಒಂದು ದಿನ ಗುರುಗಳು ಆ ಮುಪ್ಪಿನ ಮುತ್ತೈದೆ ಗಂಗಾದೇವಿಯನ್ನು ಕುರಿತು— "ಬ್ರಾಹ್ಮಣಪತ್ನಿಯೇ ! ನಿತ್ಯವೂ ನೀನು ನೀರಾಜನದಾರ್ತಿಕ್ಯ ಸೇವೆಯಿಂದ ನಮ್ಮನ್ನು ಸಂತೋಷಪಡಿಸುವಿ ನಾವು ಒಂದೊಂದು ದಿನ ಕಾರ್ಯನನ್ನು ಕಾಣದಿದ್ದರೂ ಸತತವೂ ಸಂಧ್ಯಾಕಾಲದಲ್ಲಿ ನಿನ್ನ ನೀರಾಜನ ಸೇವೆಯ ಬೆಳಕನ್ನು ಕಂಡೇ ಕಾಣುವೆನು. ಈ ಪ್ರಕಾರ ಅವ್ಯಾಹತ ಸೇವೆ ಮಾಡುವಲ್ಲಿ ನಿನ್ನ ಉಪೇಕ್ಷ-ಬಯಕೆಗಳೇ

ನಾವೂ ಇಸ್ಥಿರಬೇಕಲ್ಲವೇ? ಹಾಗಿದ್ದರೆ ಹೇಳು, ಶ್ರೀ ನಾರಾಯಣ—ಗೌರೀರಮಣ—ಗುರುಪ್ರಸಾದ ಫಲವು
ನಿನಗೆ ಸಿಕ್ಕೇ ಸಿಗುವದು'' ಎಂದೆನ್ನಲು ಗಂಗಾದೇವಿಯು— “ಸ್ವಾಮಿ ! ಮಕ್ಕಳಿಲ್ಲದವಳಿಗೆ ಮೋಕ್ಷವಿಲ್ಲ'
ವಂತೆ. ಅವಳು ಬಂಜೆಯೆಂದು ಜನರಾಡುವರು, ಅದರಂತೆಯೇ ನನ್ನ ಸ್ಥಿತಿಯಾಗಿದೆ. ನನಗೆ ಸಂತತಿಯೇ
ಲಭಿಸಲಿಲ್ಲ. ಮಕ್ಕಳಿಲ್ಲದ ನಮ್ಮ ಮನೆಯು ಕಾಡಡವಿಯಂತೆ ಸತತವೂ ಹಾಳು ಸುರಿಯುತ್ತಿದೆ. ಮಕ್ಕಳ
ನ್ನೆತ್ತಿ ಆಡಿಸುವ, ಅವರನ್ನು ಮುದ್ದಾಡುವ, ಅವರಿಗೆ ತಿನಿಸುವ–ಉಣ್ಣಿಸುವ ಇತ್ಯಾದಿ ಯಾವದೊಂದು
ಸೊಬಗು ನನ್ನ ಅದೃಷ್ಟದಲ್ಲಿ ಆ ವಿರಂಚಿಯು ಬರೆದಿರುವದೇ ಇಲ್ಲೆಂದು ತೋರುವದು. “ಸ್ವಾಮಿ ! ನಾನು
ಇದೇ ಬಳಲಿಕೆಯಲ್ಲಿ ನರಳುತ್ತ ಈಗ ಅರವತ್ತರ ಮನೆ ಮುಟ್ಟಿದೆನು. ಇದುವರೆಗಿನ ನನ್ನ ಅಪೇಕ್ಷೆಯು
ಸಂತತಿಯ ಸಂಬಂಧವಿದ್ದಿತು. ಈಗ ಅದು ಪಲ್ಲಟವಾಗಿ ಸದ್ಗತಿಯನ್ನು ಇಚ್ಛಿಸುವೆನು” ಎಂದಳು, ಗುರು
ಗಳು ಆಕೆಯ ಮಾತಿಗೆ ನಗುತ್ತ— “ಗಂಗಾದೇವಿ ! ‘ಮಕ್ಕಳಿಂದ ಸದ್ಗತಿ’ ಎಂದು ಹೇಳುತ್ತಿದ್ದ ನೀನು
ಈಗ ಮಕ್ಕಳಿಲ್ಲದೆ ಸದ್ಗತಿ ಪಡೆಯುವದಕ್ಕೆ ಬಯಸುವಿಯಲ್ಲ ! ಇದು ಆಶ್ಚರ್ಯವು. ನಿನಗಂತೂ ಸದ್ಗ
ತಿಯು ನಿಶ್ಚಿತವೇ ಇರುವದು. ಆದರೆ ನೀನು ಇಹ ಜನ್ಮದಲ್ಲಿಯೇ ಪುತ್ರನೊಬ್ಬನನ್ನು ಹಡೆದು ಸುಖವಾಗಿ
ಜೀವಿಸಿ ಸದ್ಗತಿಯನ್ನು ಪಡೆಯುವಿ, ಇದು ನಿಶ್ಚಿತವು” ಎಂದೆನ್ನಲು ಆಕೆ ನಗಹತ್ತಲು ಗುರುಗಳು—
ಸ್ವಾಧ್ವಿ ! ಇದು ನಗೆಯ ಮಾತು ಅಲ್ಲ ? ನಮ್ಮ ಮಾತಿನ ಮೇಲೆ ನಿನ್ನ ವಿಶ್ವಾಸ–ನಿರ್ಧಾರವಿರಲಿ” ಎಂದು
ನುಡಿದರು. ಕೂಡಲೆ ಆಕೆಯ ವೃತ್ತಿಯು ಬದಲಾಗಿ ಗುರುವಚನವನ್ನು ನಂಬಿ ನಮಸ್ಕರಿಸಿದಳು. ನಂತರ
ಆಕೆ ತಾನು ಇದುವರೆಗೆ ಅಶ್ವತ್ಥಸೇವೆ ಮಾಡಿದುದನ್ನು ಹೇಳಿ— “ಸ್ವಾಮಿ ! ಅಶ್ವತ್ಥ ಸೇವೆಯ ಬಗೆಗೆ

ನನ್ನ ಮನಸ್ಸು ಹಿಂದಾಗಹತ್ತಿದೆ'' ಎನ್ನಲು ಗುರುಗಳು— "ಸಾಧ್ವಿ ! ಸಂಶಯದಿಂದ ಮನವನ್ನು ಹಿಂದೂಡಬೇಡ. ಅಶ್ವತ್ಥ ಸೇವೆಯು ಮಹಾಪುಣ್ಯದಾಯಕವು. ಅದು ಎಂದೂ ವ್ಯರ್ಥವಾಗದು. ನಮ್ಮ ಸೇವೆ ಮಾಡಿದಂತೆಯೇ ಇನ್ನು ಮುಂದಾದರೂ ಅಶ್ವತ್ಥ ಸೇವೆ ಮಾಡು, ನಿಜವಾಗಿಯೂ ನಿನಗೆ ಪುತ್ರಪ್ರಾಪ್ತಿಯಾಗುವದು. ಇದರ ಹೊರತು ನಿನಗೆ ಹೇಳುವದೇನಂದರೆ— "ಸಾಧ್ವಿ ! ನೀನು ದಿನಾಲೂ ಸಂಗಮತೀರಕ್ಕೆ ಹೋಗು. ಅಲ್ಲಿ ಗಹನವಾದ ಅಶ್ವತ್ಥವೃಕ್ಷವಿರುವದು. ನಾವು ಅಲ್ಲಿಯೇ ಅನುಷ್ಠಾನ ಮಾಡುವೆವು. ನೀನು ಏಕಚಿತ್ತದಿಂದ ನಮ್ಮಿಂದ ಸಹಿತವಾಗಿ ಅಶ್ವತ್ಥನ ಸೇವೆ ಮಾಡು. ಆ ಅಶ್ವತ್ಥನ ಮಹಿಮೆ ಅಗಾಧವಿದೆ. ಅಶ್ವತ್ಥನೆಂಬ ಹೆಸರಿನಿಂದ ನಾರಾಯಣನು ಆ ವೃಕ್ಷದಲ್ಲಿರುವನು. ಅಲ್ಲಿಯೇ ನಾವೂ ಇರುವೆವು" ಎಂದು ಹೇಳಿ ಆ ಬ್ರಾಹ್ಮಣ ಪತ್ನಿಗೆ ಬ್ರಹ್ಮಾಂಡ ಪುರಾಣದಲ್ಲಿ ಬ್ರಹ್ಮನು ನಾರದನಿಗೆ ಬೋಧಿಸಿದ ಅಶ್ವತ್ಥ ಮಹಿಮೆಯನ್ನು ಸಾದ್ಯಂತವಾಗಿ ಹೇಳಿದರು. ಮತ್ತು ಅವರು— "ಸಾಧ್ವಿ ! ತಂದೆಯಿಂದ ಬೋಧಿಸಪಡೆದ ನಾರದನು ಅದೇ ಮಹಿಮೆಯನ್ನು ಎಲ್ಲ ಋಷಿಗಳಿಗೆ ಹೇಳಿದನು. ಆ ಋಷಿಗಳು ನಾರದರಿಂದ ಬೋಧಿಸಪಡೆದ ಅಶ್ವತ್ಥ ಮಹಿಮೆಯನ್ನು ಕೇಳಿ ತಾವೂ ಅಶ್ವತ್ಥವಿಧಾನವನ್ನಾಚರಿಸಿ ಅಭೀಷ್ಟಗಳನ್ನು ಪೂರೈಸಿಕೊಂಡರು" ಎಂದ. ಶ್ರೀ ಗುರುಗಳು ಆ ಬಂಜೆ ಸ್ತ್ರೀಯಳಿಗೆ ಹೇಳಿದರು. ಮತ್ತು ಆವಳನ್ನು ಕುರಿತು ಗುರುಗಳು— ಬ್ರಾಹ್ಮಣ ಪತ್ನಿಯೆ ! ಈ ಪ್ರಕಾರ ಅಶ್ವತ್ಥ ಮಹಿಮೆಯಿರುವದು ಭಾವಭಕ್ತಿಗನುಸರಿಸಿಯೇ ಫಲಪ್ರಾಪ್ತಿಯಿರುವದು. ನೀನು ಏನೊಂದು ಸಂದೇಹವನ್ನು ತಾಳದೆ ನಾನು ಹೇಳಿದಂತೆ ಆಚರಿಸು'' ಎಂದು ಹೇಳಲು ಆ ಬ್ರಾಹ್ಮಣಿತಿಯು ಶ್ರೀ ಗುರುಗಳ ವಚನವನ್ನು ಕೇಳಿ ನಮಸ್ಕರಿಸಿದಳು. ಮತ್ತು ಆಕೆಯು— "ಸ್ವಾಮಿ !

ನನಗೆ ಅರವತ್ತು ವರ್ಷಗಳಾಗಿರುವವು. ಅಂದಮೇಲೆ ನನಗೆ ಪುತ್ರನೆಂತು ಜನಿಸುವನು? ಇದಿರಲಿ. ನಿಮ್ಮ ವಾಕ್ಯವು ನನಗೆ ಕೊನೆಯದೇ ಎಂದು ಭಾವಿಸಿ ಅಂಗೀಕರಿಸುವೆನು. ಗುರುವಾಕ್ಯವು ಕಾಮಧೇನು ಸದೃಶವೆಂದು ವೇದ ಪುರಾಣಗಳೂ ಹೇಳುವವು. ಅಂದಮೇಲೆ ಇನ್ನು ನಾನು ಏನೊಂದು ಅನುಮಾನ ತಾಳದೆ ಸೇವೆಯನ್ನು ಕೈಕೊಳ್ಳುವೆನು. ನಾನು ಅಶ್ವತ್ಥನನ್ನು ನಂಬದೆ ನಿಮ್ಮ ವಚನಗಳ ಮೇಲೆಯೇ ನಿಶ್ಚಲವಿಶ್ವಾಸವಿಟ್ಟಿರುವೆನು'' ಎಂದು ನುಡಿದು ಆಕೆ ಗುರುಗಳಿಗೆ ವಂದಿಸಿದಳು. ಹಾಗು ಗುರುನಿರೋಪದಂತೆ ಸಂಗಮ ಸ್ನಾನಕ್ಕೆ ಹೋದಳು. ಅಲ್ಲಿಯ ಆರು ತೀರ್ಥಗಳ ಸ್ನಾನ ಮಾಡಿ ಅಶ್ವತ್ಥನ ಸೇವೆಗಾರಂಭಿಸಿದಳು, ಒಂದೇ ಸವನೆ ಆಕೆ ಮೂರು ರಾತ್ರಿಗಳನ್ನು ಸೇವೆಯಲ್ಲಿ ಕಳೆದಳು, ಮೂರನೆಯ ದಿವಸದ ರಾತ್ರಿಯಲ್ಲಿ ಅವಳು ಒಂದು ಅಪೂರ್ವ ಕನಸು ಕಂಡಳು, ಅಂದಿನ ಆಕೆಯ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನನ್ನು ನೋಡಿ ಅವನಿಗೆ ಭಿಕ್ಷೆ ತಂದು ನೀಡಿದಳು. ಆ ವಿಪ್ರನು ತನಗೆ— "ನೀನು ಗಾಣಗಾಪುರಕ್ಕೆ ಹೋಗು, ಅಲ್ಲಿ ಶ್ರೀ ಗುರುನಾಥನಿರುವನು. ಆ ಗುರುವಿಗೆ ನೀನು ಏಳು ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡು. ಮತ್ತು ಆತನು ನಿನಗೆ ಕೊಟ್ಟ ಪ್ರಸಾದ ಭಕ್ಷಿಸು. ಈಗಲೇ ನೀನು ಗಾಣಗಾಪುರಕ್ಕೆ ಹೋಗು'' ಎಂದು ಆ ಬ್ರಾಹ್ಮಣನು ತನಗೆ ಹೇಳಿದಂತಾಯಿತು. ಬಳಿಕ ಶೀಘ್ರವೇ ಆಕೆ ನಿದ್ರೆಯಿಂದ ಎಚ್ಚತ್ತಳು. ಅಲ್ಲಿಯ ಕಲ್ಪವೃಕ್ಷದಂತಿರುವ ಅಶ್ವತ್ಥದ ಸೇವೆಯನ್ನು ಮಾಡಿದಳು. ಇಂದು ಆಕೆ ಸೇವೆ ಕೈಕೊಂಡ ನಾಲ್ಕನೆಯ ದಿನವಾಗಿತ್ತು. ಆ ದಿವಸದ ಸೇವೆ ಮುಗಿಸಿ ಅವಳು ಗ್ರಾಮದಲ್ಲಿರುವ ಗುರುಮಠಕ್ಕೆ ಬಂದಳು. ಗುರುಗಳಿಗೆ ವಂದಿಸಿದಳು. ಆಗ ಗುರುಗಳು ಮನಸ್ಸಿನಲ್ಲಿಯೇ ನಗುತ್ತ ಅವಳಿಗೆ ಎರಡು ಹಣ್ಣುಗಳನ್ನು ಕೊಟ್ಟರು. ಹಾಗು ಆಕೆಗೆ— "ಸಾಧ್ವಿ!

ಈ ಫಲಗಳನ್ನು ಭಕ್ಷಿಸು, ನಿನ್ನ ಕೆಲಸವಾಯಿತು. ಇನ್ನು ಭೋಜನ ಮಾಡು, ನಿನಗೆ ಒಬ್ಬ ಮಗಳೂ ಒಬ್ಬ ಮಗನೂ ಹುಟ್ಟುವರು. ನೀನು ಇಂದು ಪಾರಣೆಯನ್ನು ಮುಗಿಸಿ ಈ ಫಲಗಳನ್ನು ಭಕ್ಷಿಸಿ ಬ್ರಾಹ್ಮಣರಿಗೆ ದಾನ ಕೊಟ್ಟು ವ್ರತವನ್ನು ಮುಕ್ತಾಯಗೊಳಿಸು'' ಎಂದು ಹೇಳಲು ಆಕೆ ಗುರುಗಳ ಹೇಳಿಕೆಯಂತೆ ಎಲ್ಲವನ್ನು ಆಚರಿಸಿ ವ್ರತ ಮುಗಿಯಿಸಿದಳು.

ಅದೇ ದಿನದ ಸೂರ್ಯಾಸ್ತವಾಯಿತು, ಸೋಮನಾಥ ಬ್ರಾಹ್ಮಣನ ಪತ್ನಿಯು ಬಹಿಷ್ಠೆಯಾದಳು. ಮೂರು ದಿನ ಮೌನದಿಂದಿದ್ದಳು, ಹವಿಷ್ಯಾನ್ನ ಭುಂಜಿಸಿದಳು, ಶ್ವೇತ ವಸ್ತ್ರವನ್ನು ಉಟ್ಟುಕೊಂಡಳು. ಇನ್ನಾರ ಮುಖ ದರ್ಶನ ತೆಗೆದುಕೊಳ್ಳಲಿಲ್ಲ ಹೀಗೆ ಅವಳು ಮೂರು ರಾತ್ರಿ ಕಳೆದು ನಾಲ್ಕನೆಯ ದಿನ ಸುಸ್ನಾತೆಯಾದಳು. ನಂತರ ಅವಳು ಶ್ರೀ ಗುರು ದರ್ಶನ ಪಡೆದಳು. ತನ್ನ ಗಂಡನಿಂದೊಡಗೂಡಿ ಗುರು ಪೂಜೆ ಮಾಡಿದಳು. ಗುರುಗಳಿಗೆ ನಮಸ್ಕರಿಸಲು ಅವರು— 'ಸಾಧ್ವಿ ! ನೀನು ಪುತ್ರವತಿಯಾಗು' ಎಂದು ವರದ ವಾಕ್ಯ ಉಚ್ಚರಿಸಿದರು. ನಂತರ ಆ ಪತಿ—ಪತ್ನಿಯರು ಮನೆಗೆ ಬಂದರು. ಮರುದಿನ ಐದನೆಯ ದಿನವು. ಅಂದು ಬ್ರಾಹ್ಮಣನು ಋತುದಾನ ನೀಡಿದನು, ಮುಂದೆ ಅವಳು ಬಸಿರಾದಳು, ಊರಲ್ಲೆಲ್ಲ ಈ ವಾರ್ತೆ ಪಸರಿಸಿತು, ಆಯುಷ್ಯದ ದಿನಗಳೆದ ಬಂಜೆಯು ಬಸಿರಾದ ಸುದ್ದಿಯನ್ನು ಕೇಳಿ ಊರ ಜನರೆಲ್ಲರು ವಿಸ್ಮಿತರಾದರು ! ಮುಪ್ಪಿನ ಮುದುಕ ಸೋಮನಾಥನ ಪತ್ನಿಯು ಮುದಿಕೆಯಾಗಿದ್ದರೂ ಗರ್ಭವತಿಯಾದುದು ಆಶ್ಚರ್ಯವಲ್ಲದೆ ಮತ್ತೇನು? ಆ ಬ್ರಾಹ್ಮಣ ದಂಪತಿಗಳಿಗೆ ಬಲು ಸಂತೋಷ ! ಅವರ ಆಪ್ತೇಷ್ಟರಿಗೂ ಹರುಷ ! ಆ

ಗರ್ಭವತಿಯ ಬಳಗದ ಸ್ತ್ರೀಯರು ಈಕೆಗೆ ಪ್ರಥಮ ಗರ್ಭವೆಂದು ಬಗೆದು ಬಸಿರ ಹೆಂಗಸಿಗೆ ಮಾಡತಕ್ಕ ಸಮಾರಂಭಗಳನ್ನು ಮಾಡಿದರು, ಹೂಮುಡಿಸಿದರು, ಉಡಿತುಂಬಿದರು, ಆಕೆಯ ಬಯಕೆಗಳನ್ನು ಪೂರೈಸಿದರು, ಆಕೆಯ ಗರ್ಭಕ್ಕೆ ಎಂಟು ತಿಂಗಳು ತುಂಬಲು ಸೀಮಂತ ಕಾರ್ಯವನ್ನೂ ಸಡಗರದಿಂದ ಮಾಡಿದರು. ಹೀಗಿರಲು ಅವಳಿಗೆ ನವಮಾಸಗಳು ಸಂಪೂರ್ಣ ತುಂಬಿದವು. ಮುಂದೊಂದು ಶುಭದಿನದಲ್ಲಿ ಆಕೆಗೆ ಒಂದು ಕನ್ಯಾರತ್ನ ಜನಿಸಿತು, ತಮ್ಮ ಬಂಜೆತನ ಹಿಂಗಿತೆಂದು ಆ ಗಂಡ-ಹೆಂಡರಿಗೆ ಬಲು ಹಿಗ್ಗು, ಅವರು ದಯಾಮೂರ್ತಿ ಶ್ರೀ ಗುರುಗಳ ಸ್ಮರಣೆಯಿಂದ ಜಾತ ಶಿಶುವಿನ ಜಾತಕರ್ಮ, ನಾಮಕರಣಗಳನ್ನು ಮಾಡಿದರು, ಸೋಮನಾಥನು ಕೈಬಿಚ್ಚಿ ದಾನ-ಧರ್ಮ ಮಾಡಿದನು. ಜ್ಯೋತಿಷಿಗಳು ಕನ್ಯೆಯ ಜನನ ಲಗ್ನದಿಂದ ಜಾತಕವನ್ನು ಬರೆದರು. ಬ್ರಾಹ್ಮಣಪತ್ನಿಯು ಜನನಾಶೌಚ ಮುಗಿದನಂತರ ತನ್ನ ಕೂಸಿನೊಂದಿಗೆ ಹೋಗಿ ಶ್ರೀ ಗುರು ದರ್ಶನ ಪಡೆದಳು. ಆಕೆ— "ಸ್ವಾಮಿ! ನನಗೆ ಗಂಡುಮಗು ಹುಟ್ಟಲಿಲ್ಲವಲ್ಲ!" ಎಂದು ಕೇಳಲು ಗುರುಗಳು ನಕ್ಕು— ಸಂಶಯಬೇಡ ಇನ್ನುಮುಂದೆ ನೀನು ಪುತ್ರನನ್ನೆ ಹಡೆಯುವಿ, ಎಂದು ಹೇಳಿ ಗುರುಗಳು ಆಕೆಯ ಕೂಸನ್ನು ಅಮೃತ ದೃಷ್ಟಿಯಿಂದ ನಿರೀಕ್ಷಿಸಿದರು. ಅವರ ಭವಿಷ್ಯವನ್ನು ಹೇಳಿದರು. ಎಂತೆಂದರೆ— "ಬ್ರಾಹ್ಮಣ ದಂಪತಿಗಳೇ! ಈಕೆಯ ಪತಿಯು ವಿಜ್ಞಾನಿಯಾಗುವನು, ಶತಾಯುಷಿಯಾಗಿ ಹಲವು ಮಕ್ಕಳು ಈಕೆಗೆ ಹುಟ್ಟುವವು. ಪತಿವ್ರತೆಯಾದ ಇವಳು ಪ್ರಸಿದ್ಧಳಾಗುವಳು. ವಿದೇಶದ ಮಹಾರಾಜರು ಈಕೆಯ ದರ್ಶನಕ್ಕೆ ಬರುವರು." ಎಂದು ಭವಿಷ್ಯ ನುಡಿದರು. ಮತ್ತೆ ಗುರುಗಳು— ತಾಯಿ! ನೀನು ಇಚ್ಛಿಸುವ ಮಗನು ಎಂಥವನಿರಬೇಕು? ಮೂವತ್ತು

ವರ್ಷದ ಬುದ್ಧಿವಂತನೋ? ನೂರುವರ್ಷದ ಮೂರ್ಖನೋ'' ಎಂದು ಕೇಳಲು ಆಕೆ— ''ಸ್ವಾಮಿ! ವಯಸ್ಸಿನ ವಿಚಾರ ಬೇಕಾಗಿಲ್ಲ. ನನ್ನ ಮಗನು ಜ್ಞಾನಿಯೂ ವಿದ್ವಾಂಸನೂ ಆಗಿ ಖ್ಯಾತಿಯನ್ನು ಪಡೆಯುವವನಿರಬೇಕು. ಹಾಗು ಅವನಿಗೆ ಐಯ್ವರು ಗಂಡುಮಕ್ಕಳ ಸಿರಿಯುಂಟಾಗಬೇಕು'' ಎಂದಳು ಅದಕ್ಕೆ ಗುರುಗಳು 'ತಥಾಸ್ತು' ಎಂದು ವರವಾಕ್ಯ ನುಡಿದರು. ಅದರಂತೆ ಸೋಮನಾಥನಿಗೆ, ಮಗನು ಹುಟ್ಟಿ ಐದು ಮಕ್ಕಳನ್ನು ಹಡೆದನು. ಗುರುಗಳು ಕನ್ಯೆಯ ಭವಿಷ್ಯ ಹೇಳಿದಂತೆ ಮುಂದೆ ಆಕೆಯ ಪತಿಯು ಯಜ್ಞ ಮಾಡಿ ದೀಕ್ಷಿತನೆಂದು ಪ್ರಸಿದ್ಧನಾದನು. ಹಾಗು ಆ ಕನ್ಯೆಯು 'ದೀಕ್ಷಿತ ಪತ್ನಿ ಸರಸ್ವತಿ' ಎಂದು ನಾಡಿನ ಎಲ್ಲರಿಗೂ ಪರಿಚಿತಳಾದಳು.''

ಈ ಪ್ರಕಾರ ಸಿದ್ಧಮುನಿಯು ವೃದ್ಧೆವಂಧ್ಯಳು ಪುತ್ರವತಿಯಾದಳೆಂದು ನಾಮಧಾರಕನಿಗೆ ಹೇಳಿದನು.

—o—

# ೪೦ ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ ॥ ನಾಮಧಾರಕನೆ! ಶ್ರೀ ಗುರುಗಳ ಸನ್ನಿಧಿಯಲ್ಲಿ ವರ್ತಿಸಿದ ಒಂದು ವಿಚಿತ್ರ ಘಟನೆಯನ್ನು ಹೇಳುವೆನು ಕೇಳು.

ಶ್ರೀ ಗುರುಗಳು ಗಾಣಗಾಪುರದಲ್ಲಿ ಇರುವಾಗ ಆಪಸ್ತಂಭ ಶಾಖೆಯ ಗಾರ್ಗ್ಯಗೋತ್ರದ

ಬ್ರಾಹ್ಮಣನೊಬ್ಬನು ಗುರುದರ್ಶನಕ್ಕೆಂದು ಬಂದನು. ಅವನ ಹೆಸರು 'ನರಹರಿ'ಯು. ನರಹರಿಯು ಗುರುಮಠಕ್ಕೆ ಬಂದನು, ಶ್ರೀಗುರುಗಳನ್ನು ಕಂಡನು. ಆನಂದದಿಂದ ಸ್ತೋತ್ರ ಮಾಡಿದನು. ಹಿಂದಿನಿಂದ ಅವನು ಗುರುಗಳೆದುರು ಕೈಮುಗಿದು ನಿಂತು— "ಪರಮ ಪುರುಷನೇ ಜಗದ್ಗುರುವೆ! ನಾನು ಈ ಸಂಸಾರದಲ್ಲಿ ಜನಿಸಿದುದು ಕಲ್ಲಿನೋಪಾದಿ ನಿರರ್ಥಕವಾಗಿದೆ. ಸ್ವಾಮಿ! ಪ್ರಾಕ್ತನ ದೋಷದಿಂದ ನಾನು ಕುಷ್ಟರೋಗಪೀಡಿತನಾಗಿರುವೆನು. ಆದುದರಿಂದಲೇ ಬ್ರಾಹ್ಮಣರು ನನ್ನನ್ನು ಧಿಕ್ಕರಿಸುವರು. ನಾನು ಯಜುಃಶಾಖೆಯ ವೇದವನ್ನೋದಿರುವೆನು. ಈ ದೃಷ್ಟಿಯಿಂದಾದರೂ ಅವರು ನನ್ನ ಇರುವಿಕೆಗೆ ಬೇಜಾರುಗೊಳ್ಳದೆ ಸಹಾನುಭೂತಿಯನ್ನು ತೋರಿಸಬೇಕಾಗಿತ್ತು ಆದರೆ ಪರಿಸ್ಥಿತಿಯು ಹಾಗಿಲ್ಲ. ಅವರೆದುರು ನಾನೊಬ್ಬನು ಕೀಳನಿಗಿಂತಲೂ ಕೀಳನಾಗಿರುವೆನು. ಬೆಳಗಿನಲ್ಲಿ ಎದ್ದ ಜನರು ನನ್ನ ಮುಖವನ್ನು ಸಹ ನೋಡರು. ಇಂಥ ದುರವಸ್ಥೆಗೀಡಾದ ನನ್ನ ಮನಸ್ಸು ಇಹಜನ್ಮದ ಬಗೆಗೆ ಔದಾಸೀನ್ಯ ತಾಳಿರುವದು. ನಾನು ಜನ್ಮಾಂತರದಲ್ಲಿ ಹಲವು ಪಾಪಕರ್ಮ ಮಾಡಿದ್ದುದರಿಂದಲೇ ನನಗೆ ಈ ಅವಸ್ಥೆಯೊದಗಿರಬಹುದು. ಈ ನನ್ನ ರೋಗ ನಿವಾರಣೆಗೆ ನಾನು ಹಲವು ಪ್ರಯತ್ನ ಮಾಡಿದರೂ ನಿರರ್ಥಕವೇ ಆಯಿತು. ಕೊನೆಗೆ ತಮ್ಮ ದರ್ಶನ ಪಡೆದು ಪ್ರಾಣತ್ಯಾಗ ಮಾಡುವ ನಿರ್ಧಾರದಿಂದ ಇಲ್ಲಿಗೆ ಬಂದೆನು. ನಿಮ್ಮ ದರ್ಶನವಾಯಿತು, ಆನಂದವಾಯಿತು" ಎಂದು ತನ್ನ ಸ್ಥಿತಿಯನ್ನು ಹೇಳಿ ಗುರುಗಳಿಗೆ ನಮಸ್ಕರಿಸಿದನು.

ಭಕ್ತವತ್ಸಲರಾದ ಗುರುಗಳು ನರಹರಿಯ ದುಃಸ್ಥಿತಿಯನ್ನು ತಿಳಿದು ದಯೆಯಿಂದ ಅವನನ್ನು ಕುರಿತು— "ನಿನಗೆ ಈ ರೋಗವು ಜನ್ಮಾಂತರದ ಪಾಪಸಂಗ್ರಹದಿಂದ ಪ್ರಾದುರ್ಭವಿಸಿರುವದೆಂಬುದು

ನಿಜ. ಈ ನಿನ್ನ ಪಾಪ ನಿಷ್ಕೃತಿಗೆ ನಾನು ಹೇಳಿದಂತೆ ಆಚರಿಸಿದರೆ ಶೀಘ್ರವೇ ನೀನು ದಿವ್ಯದೇಹಿಯಾಗುವಿ, ನಾನು ಹೇಳುವದೇನಂದರೆ— 'ಆಗೋ! ಅತ್ತಕಡೆಯಿಂದ ಒಬ್ಬನು ಒಣಗಿದ ಒಂದು ಔದುಂಬರ ಕಾಷ್ಠವನ್ನು ಹೊತ್ತುಕೊಂಡು ಹೋಗುತ್ತಾನೆ. ಆ ಕಟ್ಟಿಗೆಯು ಒಣಗಿ ನಾಲ್ಕು ವರ್ಷಗಳಾಗಿರಬಹುದು. ನೀನು ಆ ಮನುಷ್ಯನಿಂದ ಆ ಕಾಷ್ಠವನ್ನು ಯಾಚಿಸಿ ಅದನ್ನು ಸಂಗಮಕ್ಕೆ ತೆಗೆದುಕೊಂಡು ಹೋಗು. ಅಲ್ಲಿಯ ಸಂಗಮೇಶ್ವರನ ಪೂರ್ವನಿಟ್ಟಿನಲ್ಲಿ ಭೀಮಾ ನದಿಯ ತೀರದಲ್ಲಿ ನೆಟ್ಟು ನಂತರ ಸಂಗಮ ಸ್ನಾನ ಮಾಡು. ಅಲ್ಲಿರುವ ಅಶ್ವತ್ಥವನ್ನು ಪೂಜಿಸು, ಮತ್ತೆ ಸ್ನಾನಮಾಡು. ಕೈಯಲ್ಲಿ ಎರಡು ತಂಬಿಗೆಗಳಲ್ಲಿ, ನೀರು ತುಂಬಿ ತಂದು ನೀನು ನೆಟ್ಟ ಔದುಂಬರಕ್ಕೆ ಹನಿಸು. ಈ ಕ್ರಮ ನೀನು ಕೈಕೊಂಡಿಯಾದರೆ ಒಪ್ಪೊತ್ತಿನಲ್ಲಿ ಆ ಕಾಷ್ಠವು ಚಿಗಿಯುವದು. ಚಿಗಿತು ಅದಕ್ಕೆ ಎಲೆಗಳು ಕಂಡುಬರುವವು. ಹೀಗೆ ಆ ಕಾಷ್ಠವು ಸಜೀವವಾದಮೇಲೆ ನಿನ್ನ ಮೈತುಂಬಾ ವ್ಯಾಪಿಸಿದ ಈ ರೋಗ ನಿವಾರಣೆಯಾಗುವದು" ಎಂದು ಹೇಳಿದರು. ನರಹರಿಯು ಕೂಡಲೇ ಕಾಷ್ಠಭಾರ ಹೊತ್ತೊಯ್ಯುತ್ತಿದ್ದ ಮನುಷ್ಯನ ಬಳಿಗೆ ಹೋಗಿ ತನ್ನ ಸ್ಥಿತಿಯನ್ನು ಅವನಿಗೆ ತಿಳಿಸಿದನು. ಆ ಮನುಷ್ಯನ ದೀನತೆಗೆ ಮನಕರಗಿ ತಾನು ಹೊತ್ತು ತಂದಿದ್ದ ಔದುಂಬರ ಕಾಷ್ಠವನ್ನು ನರಹರಿಗೆ ಕೊಟ್ಟನು ನರಹರಿಯು ಆ ಕಾಷ್ಠವನ್ನು ತೆಗೆದುಕೊಂಡು ಹೋಗಿ ಗುರುಗಳು ಹೇಳಿದ ಸ್ಥಾನದಲ್ಲಿಯೇ ನಡಿಸಿದನು. ದಿನಾಲು ನೀರು ತಂದು ಅದರ ಬೊಡ್ಡೆಗೆ ಹಾಕಹತ್ತಿದನು. ಇದರಂತೆ ಅವನು ಉಪವಾಸದಿಂದಲೇ ಏಳು ದಿನಗಳವರೆಗೆ ಭಕ್ತಿಭಾವದಿಂದ ಗುರುಗಳು ಹೇಳಿದಂತೆ ಆಚರಿಸಿದನು. ಅವನು ಎರಡೆರಡು ತಂಬಿಗೆ ನೀರು ತುಂಬಿ ತಂದು ಒಣಕಟ್ಟಿಗೆಗೆ ಸುರುವುತ್ತಿರುವದನ್ನು

ಜನರು ನೋಡಿ 'ಇವ ಹುಚ್ಚತನ' ಎಂದು ನಗಹತ್ತಿದರು. 'ಒಣ ಕಟ್ಟಿಗೆ ಎಂದಾದರೂ ಚಿಗುರೊಡೆಯುವದುಂಟೇ? ನಿನ್ನ ಶ್ರಮವು ನಿರರ್ಥಕವು' ಎಂದು ಅವನಿಗೆ ಪ್ರಕಟವಾಗಿಯೇ ಹೇಳಹತ್ತಿದರು. ಆದರೂ ಅವನು ಜನರಾಡುವ ನುಡಿಗಳನ್ನು ತನ್ನ ಕಿವಿಯ ಮೇಲೆ ಹಾಕಿಕೊಳ್ಳದೆ ಗುರೂಪದಿಷ್ಟತೆಯನ್ನು ಬಿಡದೆ ಶ್ರದ್ಧೆ ಕೈಕೊಂಡ ಕ್ರಿಯೆಯನ್ನು ಮಾಡುತ್ತಲೇ ಇದ್ದನು.

ಗುರುಮಠದಲ್ಲಿಯ ಶಿಷ್ಯರು ಸಂಗಮಕ್ಕೆ ಬಂದಾಗ ನರಹರಿ ಬ್ರಾಹ್ಮಣನು ಒಣ ಕಟ್ಟಿಗೆಗೆ ನೀರು ಹನಿಸುವದನ್ನು ನೋಡಿದರು, ಉಪವಾಸದಿಂದ ಬಾಡಿದ ಅವನ ಮುಖವನ್ನೂ ನೋಡಿದರು. 'ಹೀಗೇಕೆ?' ಎಂದು ಕೇಳಲು ನರಹರಿಯು 'ಗುರ್ವಾಜ್ಞೆ' ಎಂದು ಇಷ್ಟೇ ಉತ್ತರ ಕೊಟ್ಟನಲ್ಲದೆ ಅವರೊಡನೆ ಹೆಚ್ಚು ಮಾತಾಡಲೇ ಇಲ್ಲ. ಶಿಷ್ಯರು ಹಾಗೇ ಗುರುಮಠಕ್ಕೆ ಹೋದರು. ನರಹರಿಯು ನಿರರ್ಥಕ ಶ್ರಮವನ್ನೂ ನಿರಾಹಾರದಿಂದ ಅವನು ಬಳಲಿರುವನೆಂಬುದನ್ನು ಶ್ರೀ ಗುರುಗಳಿಗೆ ಶ್ರುತಪಡಿಸಿದರು. ಗುರುಗಳು ಆ ಶಿಷ್ಯರಿಗೆ— "ಹೃದಯದ ಭಾವವನ್ನನುಸರಿಸಿ ಸಿದ್ಧಿ ಲಭಿಸುವದು" "ಗುರುವಾಕ್ಯವು ಶಿಷ್ಯನನ್ನು ಉದ್ಧರಿಸುವ ಶಕ್ತಿ ಕಾರಣವು" "ಭಕ್ತನ ಅಂತಃಕರಣದಂತೆ ಅವನು ಪಡೆಯುವ ಸಿದ್ಧಿಯು" ಈ ಮಾತುಗಳನ್ನು ಅವರಿಗೆ ಬೋಧಿಸಿದರು. ಹಾಗು ಇವುಗಳ ಸ್ಪಷ್ಟತೆಗಾಗಿ ಸ್ಕಂದ ಪುರಾಣದಲ್ಲಿಯ ಒಂದು ಇತಿಹಾಸವನ್ನು ತಮ್ಮ ಶಿಷ್ಯರಿಗೆ ಹೇಳಿದರು. ಅದಾವುದೆಂದರೆ—

"ಪೂರ್ವದಲ್ಲಿ ಪಾಂಚಾಲ ನಗರದಲ್ಲಿ ಸಿಂಹಕೇತು ಎಂಬ ರಾಜನಿದ್ದನು. 'ಧನಂಜಯ'ನೆಂಬವನು ಆ ರಾಜನ ಮಗನು. ಒಂದು ದಿನ ಆ ರಾಜಪುತ್ರನು ಬೇಟೆಗಾಗಿ ಒಂದು ಅರಣ್ಯಕ್ಕೆ ಹೋದನು.

ಅವನ ಜೊತೆಗೆ ಒಬ್ಬ ಬೇಡರ ಜಾತಿಯ ಸೇವಕನಿದ್ದನು. ಅವರಿಬ್ಬರು ವನದಲ್ಲಿ ಸುತ್ತಾಡುತ್ತಿರುವಾಗ ಆ ಬೇಡನು ನೆಲದ ಮೇಲೆ ಬಿದ್ದಿರುವ ಒಂದು ಭಿನ್ನವಾದ ಲಿಂಗವನ್ನು ನೋಡಿದನು. ಅದು ಬಲು ಸುಂದರವಾದುದ್ದಿದುದರಿಂದ ಕೂಡಲೆ ಬೇಡನು ಅದನ್ನು ಕೈಯಲ್ಲಿ ತಕ್ಕೊಂಡು ಬಹಳೇ ಕೌತುಕದಿಂದ ನಿರೀಕ್ಷಿಸಹತ್ತಿದನು. ರಾಜಪುತ್ರನು ಅವನನ್ನು ನೋಡಿ— "ಎಲೈ ! ಅದು ಭಿನ್ನವಾದ ಲಿಂಗವು, ಇಂಥ ಆಕಾರದ ಲಿಂಗಗಳು ಭೂಮಿಯ ಮೇಲೆ ಹೇರಳವಾಗಿ ಬಿದ್ದಿರುವವು" ಎನ್ನಲು ಬೇಡನು— "ಜಿಯಾ ! ಲಿಂಗಪೂಜೆ ಮಾಡಬೇಕೆಂಬ ಹುಂಬಲವು ನನ್ನಲ್ಲಿ ಬಲು ದಿನಗಳಿಂದಲೂ ಇರುವದು. ಅದಕ್ಕಾಗಿ ಇದನ್ನು ತೆಗೆದುಕೊಂಡೆನು" ಎಂದನು. ರಾಜಪುತ್ರನು ನಗುತ್ತ— "ಲಿಂಗವನ್ನು ಒಂದೇ ಮನಸಿನಿಂದ ಪೂಜಿಸಬೇಕು, ಅದಕ್ಕೆ ನಮಸ್ಕರಿಸಬೇಕು" ಎಂದು ಹೇಳುತ್ತಿರುವಾಗ ಬೇಡನು— ರಾಜಪುತ್ರರೆ ! ಈ ಲಿಂಗ ಪೂಜೆಯ ಪ್ರಕಾರವನ್ನೂ ವಿಧಿ-ವಿಧಾನಗಳನ್ನೂ ನನಗೆ ಬೋಧಿಸುವ ಗುರುಗಳು ನೀವೇ ಎಂದು ನಂಬಿರುವೆನು. ಆದ್ದರಿಂದ ಅವನ್ನೆಲ್ಲ ನನಗೆ ಉಪದೇಶ ಮಾಡಿರಿ" ಎಂದು ನಮಸ್ಕರಿಸಿದನು. ಆಗ ರಾಜಪುತ್ರನು— 'ವ್ಯಾಧನೆ ! ಈ ಲಿಂಗದ ಕಲ್ಲನ್ನು ನೀನು ಪದರಿನಲ್ಲಿ ಕಟ್ಟಿಕೊಂಡು ಮನೆಗೆ ತೆಗೆದುಕೊಂಡು ಹೋಗು. ಹೆಂಡತಿಯಿಂದ ಕೂಡಿಕೊಂಡು ಇದನ್ನು ನೀನು ನಿತ್ಯವೂ ಪೂಜೆಮಾಡು. ನೀನು ದಿನಾಲು ಭಕ್ತಿಯಿಂದ ಪೂಜಿಸುತ್ತ ಇದೇ ಲಿಂಗವು ಸಾಕ್ಷಾತ್ ಶಿವನು ಎಂದು ಭಾವಿಸುತ್ತ ನಿನ್ನ ನಿಷ್ಠೆ ತೋರಿಸಿದರೆ ಆ ಶಿವನೇ ನಿನಗೆ ಪ್ರತ್ಯಕ್ಷನಾಗಿ ತನ್ನ ಲೋಕಕ್ಕೆ ನಿನ್ನನ್ನು ಕರೆದೊಯ್ಯುವನು. ಆದ್ದರಿಂದ ಇದನ್ನು ಒಯ್ದು ಪೂಜೆ ಮಾಡು. ಹಲವು ಪ್ರಕಾರದ ಹೂವು, ಬಿಲ್ವಪತ್ರಿ, ಧೂಪ-ದೀಪ ಆರತಿ-ನೈವೇದ್ಯ ಇವೆಲ್ಲವನ್ನೂ

ತಪ್ಪದೆ ಅರ್ಪಿಸಬೇಕು. ಶಿವನು ಚಿತಾಭಸ್ಮ ಪ್ರಿಯನು, ನೀನು ದಿನಾಲು ಚಿತಾಭಸ್ಮ ತಂದು ಸಮರ್ಪಿಸು' ಇತ್ಯಾದಿ ಲಿಂಗ ಪೂಜೆಯ ತಾಂತ್ರಿಕ ವಿಧಿಯನ್ನು ಆ ಬೇಡನಿಗೆ ಬೋಧಿಸಿದನು. ಬೇಡನು ರಾಜಪುತ್ರನ ಹೇಳಿಕೆಯನ್ನು ಗುರು ಬೋಧೆಯೆಂದು ನಂಬಿ ದಿನಾಲು ಅವನು ಹೇಳಿದಂತೆ ತನ್ನ ಮನೆಯಲ್ಲಿ ಆ ಲಿಂಗಪೂಜೆ ನಡೆಯಿಸಿದನು. ಅವನ ಹೆಂಡತಿಯು ಅವನಿಗೆ ಪೂಜೆಯ ಸಾಹಿತ್ಯ ಸಾಮಗ್ರಿಗಳನ್ನು ಒದಗಿಸಿಕೊಡುವಳು. ಪೂಜೆ ಮುಗಿದ ನಂತರ ಬೇಡನು ತಾನು ತೀರ್ಥ-ಪ್ರಸಾದ ಸ್ವೀಕರಿಸಿ ಹೆಂಡತಿಗೆ ಕೊಡುವನು. ಇದೇ ಕ್ರಮವು ಎಷ್ಟೋ ದಿವಸ ನಡೆಯಿತು. ಎಂದೂ ಅವನು ಮಾಡುತ್ತಿರುವ ಲಿಂಗ ಪೂಜೆಗೆ ಪ್ರತ್ಯಯ ಬರಲಿಲ್ಲ. ಆದರೆ—

ಮುಂದೊಂದು ದಿನ ಅವನು ಪೂಜೆಯ ಎಲ್ಲ ವಸ್ತುಗಳನ್ನು ಕೂಡಿಸಿಕೊಂಡನು, ಚಿತೆಯ ಭಸ್ಮ ದೊರೆಯಲಿಲ್ಲ. ತನ್ನ ಊರಿನ ಹಾಗು ಸುತ್ತಲಿನ ನಾಲ್ಕಾರು ಹಳ್ಳಿಗಳ ಸ್ಮಶಾನಗಳನ್ನು ಅಡ್ಡಾಡಿದನು, ಎಲ್ಲಿಯೂ ಆ ಭಸ್ಮ ದೊರೆಯಲಿಲ್ಲ. ಎಂದೂ ಒದಗದ ಪ್ರಸಂಗವು ಇಂದು ಒದಗಿತು, ಇಂದಿನ ಪೂಜೆ ಸಾರ್ಥವಾಗದಿದ್ದರೆ ಇದುವರೆಗೆ ಆಚರಿಸಿದ ಧರ್ಮವೆಲ್ಲ ಅಳಿದು ಹೋಗುವದು' ಎಂದು ಚಿಂತೆಗೊಳಗಾದನು. ಇಷ್ಟೇ ಅಲ್ಲ ಆವಿನ ಲಿಂಗಪೂಜೆ ಕಟ್ಟಾದುದರಿಂದ ಅವನು ಪ್ರಾಣತ್ಯಾಗಕ್ಕೆ ಸಿದ್ಧನಾದನು. ಅವನ ಹೆಂಡತಿಯು ಅವನ ಹವಣಿಕೆ ತಿಳಿದಳು. ಅವಳು ಗಂಡನನ್ನು ಕುರಿತು— ''ಲಿಂಗಪೂಜೆಗೆ ಚಿತೆಯಭಸ್ಮ ಪಡೆಯಲು ನಾನು ಹೇಳಿದಂತೆ ನೀವು ಮಾಡಿರಿ. ನಾನು ಒಂದು ಕೋಣೆಯಲ್ಲಿ ಸೇರಿ ನನ್ನನ್ನೇ ನಾನು ಸುಟ್ಟುಕೊಳ್ಳುವೆನು. ಆದರಿಂದ ನಿಮಗೆ ಬಹು ದಿವಸ ಸಾಲುವಷ್ಟು ಭಸ್ಮ ಸಿಗುವದು'' ಎಂದು ಹೇಳಿ

ಒಳಕ್ಕೆ ಹೋಗಿ ಸುಟ್ಟುಕೊಂಡಳು, ಆಕೆಯ ದೇಹವು ದಗ್ಧವಾಗಿ ಭಸ್ಮವಾಯಿತು. ಬೇಡನು ಆ ಭಸ್ಮದಿಂದ ಲಿಂಗಪೂಜೆ ಮಾಡಿ ಭಕ್ತಿಪರವಶನಾದನು. ಅಂದಿನ ಪೂಜೆಯ ವಿಧಾನಗಳೆಲ್ಲ ಮುಗಿದವು. ತಾನು ತೀರ್ಥ-ಪ್ರಸಾದ ಸ್ವೀಕರಿಸಿದನು. ದಿನದಂತೆ ತನ್ನ ಹೆಂಡತಿಯನ್ನು ಕರೆದು— "ತೀವ್ರ ಬಂದು ತೀರ್ಥ ಪ್ರಸಾದ ತೆಗೆದುಕೋ" ಎಂದು ಕರೆಯಲು ಆಕೆ ಬಂದು ಕೈಯೊಡ್ಡಿ ತೀರ್ಥ-ಪ್ರಸಾದ ಸ್ವೀಕರಿಸಿದಳು !

ಪೂಜೆಯ ಭಕ್ತಿಯಲ್ಲಿ ಮಗ್ನನಾಗಿದ್ದ ಬೇಡನು ತನ್ನ ಆ ಸ್ಥಿತಿಯಲ್ಲಿಯೇ ಹೆಂಡತಿಗೆ ತೀರ್ಥ ಪ್ರಸಾದ ಕೊಟ್ಟನು. ಆಕೆ ಸ್ವೀಕರಿಸಿದ ಮೇಲೆ ಅವನ ಮೈಮೇಲೆ ಪರಿವೆ ಬಂದಿತು, ಹೆಂಡತಿಯನ್ನು ದಿಟ್ಟಿಸಿ ನೋಡಿ ದಂಗಾದನು ! ಚಕಿತನಾದನು. ಅವನು ಆಕೆಗೆ— "ನೀನು ಸುಟ್ಟುಕೊಂಡು ಸತ್ತಿದ್ದೆಯಲ್ಲ ! ಹೇಗೆ ಬಂದಿ? " ಎನ್ನಲು ಆಕೆ— 'ಅದಾವುದೂ ನನಗೆ ಗೊತ್ತಿಲ್ಲ. ನಾನು ಕೋಣೆಯಲ್ಲಿ ಶಾಂತ ನಿದ್ರೆ ಮಾಡುತ್ತಿದ್ದೆನು. ನೀವು ತೀರ್ಥ ಪ್ರಸಾದ ಸ್ವೀಕರಿಸಲು ಕರೆದ ಕೂಡಲೆ ಎಚ್ಚರಾಗಿ ಬಂದೆನು, ತೀರ್ಥ-ಪ್ರಸಾದ ಸ್ವೀಕರಿಸಿದೆನು, ಹೆಚ್ಚಿನದೇನೂ ನನಗೆ ಗೊತ್ತಿರುವದಿಲ್ಲ" ಎಂದು ಹೇಳಿದಳು."

ಗುರುಗಳು:— "ಶಿಷ್ಯರೆ ! ಇದೆಲ್ಲವು ದೇವರ ಕೃತಿಯು. ಬಳಿಕ ಆ ಬೇಡನಿಗೆ ಪ್ರಸನ್ನನಾಗಿದ್ದ ಶಿವನು ತನ್ನ ಸಗುಣಸ್ವರೂಪದಿಂದ ಅಲ್ಲಿಯೇ ಪ್ರಕಟನಾದನು. ಹಾಗು ಅವನು ವ್ಯಾಧನಿಗೆ—"ನಿನ್ನ ಸಂಸಾರವು ಸುಖವುಳ್ಳದ್ದಾಗುವದು, ನಿನಗೆ ಒಂದು ರಾಜ್ಯ ದೊರಕುವದು. ಅನಂತರ ನೀನು ಕಲ್ಪ ಕೋಟಿಯ ವರೆಗೆ ರಾಜ್ಯವಾಳುವಿ" ಎಂದು ಶಿವನು ವರನೀಡಿ ಕೈಲಾಸಕ್ಕೆ ಹೋದನು" ಎಂದು ಹೇಳಿದರು

ಬಳಿಕ ಗುರುಗಳು— "ಶಿಷ್ಯರೇ ! ಆ ನರಹರಿಯು ವಿಶ್ವಾಸದಿಂದ ಒಣಗಿದ ಕಟ್ಟಿಗೆಯ ಸೇವೆ ನಡೆಯಿಸಿರುವನು. ಅವನ ಭಾವನೆಯಂತೆ ಅವನ ಅಭೀಷ್ಟ ಸಿದ್ಧಿಸುವದು" ಎಂದು ಹೇಳಿ ಗುರುಗಳು ಸಂಗಮದ ಕಡೆಗೆ ಹೋದರು. ಅಲ್ಲಿ ಅನುಷ್ಠಾನ ನಡೆಯಿಸಿದರು, ನರಹರಿ ಬ್ರಾಹ್ಮಣನು ಅಲ್ಲಿಯೇ ಇದ್ದನು. ಅವನನ್ನು ನೋಡಿ ಗುರುಗಳು ಪ್ರಸನ್ನರಾದರು. ತುಂಬಿದ ತಮ್ಮ ಕಮಂಡಲದ ಜಲವನ್ನು ಆ ಒಣ ಕಟ್ಟಿಗೆಗೆ ಹಾಕಿದರು. ಆಗಲೇ ಅದು ಚಿಗಿತು ಎಲೆಗಳೊಡೆದವು. ಆ ಒಣಗಿದ ಕಟ್ಟಿಗೆಯು ದೊಡ್ಡ ಔದುಂಬರ ವೃಕ್ಷವಾಗಿ ತೋರಹತ್ತಿತು. ಆಗಲೇ ನರಹರಿಯ ಶರೀರವು ಸುದೇಹವಾಯಿತು. ಬಂಗಾರ ವರ್ಣದ್ದಾಯಿತು.

ನರಹರಿಯು ವಿದ್ವಾಂಸನು, ತನ್ನ ರೋಗ ದೂರಾದ್ದರಿಂದ ಅವನಿಗೆ ಬಹಳೇ ಸಂತೋಷವಾಯಿತು. ತನ್ನ ವಿದ್ವತ್ತೆಯಿಂದ ಶ್ರೀ ಗುರುಗಳ ಸಂಬಂಧವಾಗಿ ಸ್ತೋತ್ರಪರ ಶ್ಲೋಕ ರಚಿಸಿ ಗುರುಗಳೆದುರು ಪಠಿಸಿದನು. ಒಣ ಕಟ್ಟಿಗೆ ಚಿಗಿತು ಮರವಾದುದೂ, ನರಹರಿಯ ದೇಹವು ಸುದೇಹವಾದುದೂ ಎಲ್ಲರಿಗೂ ಆಶ್ಚರ್ಯವಾಯಿತು. ಬಳಿಕ ಗುರುಗಳು ಮಠಕ್ಕೆ ಬಂದರು. ಗುರುಗಳು ನರಹರಿಗೆ ಶ್ರೇಷ್ಠ ವರ ನೀಡಿ ಅವನಿಗೆ 'ಯೋಗೇಶ್ವರ' ಎಂದು ಹೆಸರಿಟ್ಟರು. "ನೀನು ನಿನ್ನವರೊಡನೆ ಬಂದು ಇಲ್ಲಿಯೇ ಇದ್ದುಬಿಡು" ಎಂದು ಹೇಳಿ ಅವನಿಗೆ 'ವಿದ್ಯಾ ಸರಸ್ವತಿ' ಮಂತ್ರ ಉಪದೇಶಿಸಿದರು. ಮತ್ತೂ ಅವರು— "ನರಹರಿ ! ನಿನಗೆ ಮೂವರು ಮಕ್ಕಳಾಗುವರು, ಅವರಲ್ಲಿ 'ಯೋಗಿ' ಎಂಬುವನು ಪ್ರಸಿದ್ಧನಾಗುವನು, ಹಾಗು ಉಳಿದವರು ನಮ್ಮ ಸೇವೆ ಕೈಕೊಂಡು ವಂಶಪರಂಪರೆ ನಮ್ಮ ಸೇವಕರಾಗುವರು" ಎಂದು

ಭವಿಷ್ಯ ನುಡಿದರು.''

ಎಂದು ಸಿದ್ಧಮುನಿಯು ಹೇಳಿದನು.

—೦—

# ೪೧ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು "ತನ್ನ ಪೂರ್ವಜರು ಶ್ರೀ ಗುರುಗಳ ಸೇವೆ–ಭಕ್ತಿಗಳನ್ನು ಅದಾವ ರೀತಿಯಿಂದ ಕೈಕೊಂಡು ಗುರುಪ್ರಸನ್ನತೆ ಪಡೆದರು? " ಎಂದು ಕೇಳಲು ಸಿದ್ಧಮುನಿಯು—

ನಾಮಧಾರಕನೆ ! ಘೋಸರ ಗ್ರಾಮಾಧಿಕಾರಿ ಸಾಯಂದೇವನ ಚರಿತ್ರೆಯನ್ನು ಈ ಮೊದಲೇ ನಿನಗೆ ಹೇಳಿರುವೆನಲ್ಲವೇ? ಅದೇ ಸಾಯಂದೇವನು ನಿನ್ನ ಪೂರ್ವಜನು. ಆವನು ತನ್ನಲ್ಲಿಯ ಭಕ್ತಿಯಿಂದ ಶ್ರೀಗುರುಗಳ ಪ್ರೀತಿಗೆ ಪಾತ್ರನಾದನು. ಯವನರ ಸೇವೆಯಿಂದ ಅವನು ನಿವೃತ್ತನಾಗಿ ದಕ್ಷಿಣ ದೇಶದಲ್ಲಿಯ ತನ್ನ ಗ್ರಾಮಕ್ಕೆ ಬಂದನು. ಗಾಣಗಾಪುರದಲ್ಲಿ ಶ್ರೀ ಗುರುಗಳ ವಾಸ್ತವ್ಯವಿರುವದೆಂದು ಕೇಳಿ ಅವನು ಅಲ್ಲಿಗೆ ಬಂದನು. ಶ್ರೀ ಗುರುಗಳಿರುವ ಮಠಕ್ಕೆ ಹೋಗಿ ಗುರುಗಳಿಗೆ ನಮಸ್ಕರಿಸಿ ಗುರುಸ್ಮರಣೆ ಮಾಡುತ್ತ ಕುಳಿತನು. ಗುರುಗಳು ಬಹು ದಿವಸದ ನಂತರ ತಮ್ಮ ದರ್ಶನಕ್ಕೆ ಬಂದಿದ್ದ ಸಾಯಂದೇವನನ್ನು ಕೃಪಾದೃಷ್ಟಿ

ಯಿಂದ ಕಂಡರು. ಸಂತೋಷಪೂರ್ವಕ ಅವನಿಗೆ–'ನಿನ್ನ ವಂಶಜರು ಪರಂಪರೆಯಿಂದ ನನ್ನ ದಾಸಾನು ದಾಸರಾಗಲಿ' ಎಂದು ಆಶೀರ್ವದಿಸಿದರು. ಹಾಗು ಅವನನ್ನು ತಮ್ಮ ಜೊತೆಗೆ ಕರಕೊಂಡು ಸಂಗಮಕ್ಕೆ ಹೋದರು. ಗುರುಗಳು ಅವನಿಗೆ— 'ಸಾಯಂದೇವ ! ನೀನು ಸಂಗಮ ಸ್ನಾನ ಮಾಡಿ ಅಶ್ವತ್ಥನನ್ನು ಪೂಜಿಸಿ ಗುರುಮಠಕ್ಕೆ ನಡೆ. ಅಲ್ಲಿ ನಮ್ಮ ಪಂಕ್ತಿಯಲ್ಲಿ ನೀನು ಭೋಜನ ಮಾಡು" ಎಂದು ಹೇಳಿದರು. ಸಾಯಂದೇವನು ಗುರು ನಿರೋಪದಂತೆ ಸ್ನಾನಾದಿಗಳನ್ನು ಮುಗಿಸಿ ಮಠಕ್ಕೆ ಬಂದನು. ಶ್ರೀ ಗುರು ಪೂಜಾದಿಗಳು ತೀರಿದ ನಂತರ ಮಠದಲ್ಲಿ ಭೋಜನ ನಡೆಯಿತು. ಶ್ರೀ ಗುರುಗಳ ಪಂಕ್ತಿಯಲ್ಲಿ ಎಲ್ಲರ ಭೋಜನವಾಯಿತು. ಭೋಜನಾನಂತರದಲ್ಲಿ ಎಲ್ಲರು ಗುರುಗಳ ಸಮ್ಮುಖದಲ್ಲಿ ಕುಳಿತಿದ್ದರು. ಆಗ ಶ್ರೀಗುರುಗಳು ಸಾಯಂದೇವನ ಸಕಲ ವೃತ್ತಾಂತ ಕೇಳಿದರು. ಸಾಯಂದೇವನು— "ಸ್ವಾಮಿ ! ಈಗ ನಾನು ಸ್ವಗ್ರಾಮವಾದ ಉತ್ತರ ಕಾಂಚಿಯಲ್ಲಿ ಮನೆಮಾಡಿಕೊಂಡು ಇರುವೆನು. ನನ್ನ ಮಕ್ಕಳೂ ಬಂಧುಬಳಗವೂ ಅಲ್ಲಿಯೇ ಕುಶಲದಿಂದಿರುವರು. ನಾವೆಲ್ಲರು ಸಂಸಾರ ತಾಪದಿಂದ ಬೆಂದು ಬೆಂಡಾಗಿರುವೆವು. ಇನ್ನು ತಮ್ಮ ಸೇವೆ–ಭಕ್ತಿಗಳಲ್ಲಿಯೇ ಆನಂದ ಪಡೆಯುವ ನಿರ್ಧಾರ ಮಾಡಿರುವೆವು" ಎಂದು ಹೇಳಿದನು.

ಶ್ರೀ ಗುರುಗಳು ಸಾಯಂದೇವನನ್ನು ಕುರಿತು— "ಸಾಯಂದೇವ ! ನಮ್ಮ ಸೇವೆ ಸ್ವೀಕರಿಸುವದು ಕಠಿಣವೇ ಸರಿ. ಯಾಕಂದರೆ ಒಮ್ಮೆ ನಾವು ಗ್ರಾಮದಲ್ಲಿದ್ದರೆ ಇನ್ನೊಮ್ಮೆ ಅಡವಿ-ಅರಣ್ಯದಲ್ಲಿರುವೆವು. ಇಂಥ ನಮ್ಮೊಡನೆ ನೀವು ಕಷ್ಟಪಡುತ್ತ ಅದೆಂತು ಸೇವೆ ಮಾಡಿಕೊಂಡಿರುವಿರಿ? " ಎಂದೆನ್ನಲು ಸಾಯಂದೇವನು— "ಗುರುವಿನಲ್ಲಿ ನನ್ನ ಭಕ್ತಿಯು ದೃಢತರವಾಗಿರುವದರಿಂದ ನನಗೇನೂ ಭಯವಿಲ್ಲ"

ಎಂದು ನುಡಿಯಲು ಗುರುಗಳು ಮೆಚ್ಚಿದರು. ಮುಂದೆ ಮೂರು ತಿಂಗಳು ಸಾಯುಂದೇವನು ಗುರು ಸನ್ನಿಧಿಯಲ್ಲಿಯೇ ಕಾಲಕಳೆದನು.

ನಾಮಧಾರಕನೆ! ಸಾಯುಂದೇವನು ಗುರುಸನ್ನಿಧಿಯಲ್ಲಿ ಇರುವಾಗ ಮುಂದೊಂದು ದಿನ ಒಂದು ಭಯ-ವಿಚಿತ್ರ ಪ್ರಸಂಗದಿಂದ ಗುರುಗಳು ಅವನ ಭಕ್ತಿಯ ನಿಶ್ಚಲತೆಯನ್ನು ಒರೆಗ್ಹಚ್ಚಿ ನೋಡಿದರು. ಅದೆಂತೆಂದರೆ—

"ಒಂದು ದಿನ ಗುರುಗಳು ಮಠದಿಂದ ಸಂಗಮಕ್ಕೆ ಹೊರಟರು. ಸಂಗಡ ಸಾಯುಂದೇವನನ್ನು ಕರೆದೊಯ್ದರು ಅಶ್ವತ್ಥ ಸನ್ನಿಧಿಯಲ್ಲಿ ಗುರುಗಳು ಆ ಭಕ್ತನೊಡನೆ ಸೊಗಸಿನ ಮಾತುಗಳನ್ನಾಡುತ್ತ ಕುಳಿತಿರುವಷ್ಟರಲ್ಲಿಯೇ ಸೂರ್ಯಾಸ್ತವಾಯಿತು. ಆಗ ಗುರುಗಳು ಸಾಯುಂದೇವನ ಹೃದಯ ಪರೀಕ್ಷಿಸುವದಕ್ಕೆಂದು ಘೋರವಾದ ಬಿರುಗಾಳಿಯನ್ನುಂಟುಮಾಡಿದರು. ಆ ಗಾಳಿಯ ಜೊತೆಗೆ ಮಳೆ ಹನಿಗಳು ಉದಿರಲಾರಂಭಿಸಿದವು. ಅದನ್ನು ನೋಡಿ ಸಾಯುಂದೇವನು ಗುರುಗಳಿಗೆ ಮಳೆ ಹನಿಗಳು ತಗಲಬಾರದೆಂದು ತನ್ನ ಉತ್ತರೀಯಕವನ್ನು ಬಿಚ್ಚಿ ಗುರುಗಳ ಮೇಲೆ ಹಿಡಿದು ಕೊಂಡು ನಿಂತನು. ಹನಿಹನಿಗಳಾಗಿ ಉದಿರುತ್ತಿದ್ದ ಮಳೆಯು ಮುಸಲಗಾತ್ರದ ಸ್ವರೂಪ ಹೊಂದಿ ಸುರಿಯ ಹತ್ತಿತು. ಸಮಗ್ರ ತಾಸಿನ ವರೆಗೂ ಬಿದ್ದ ಮಳೆಯಿಂದ ಅವರ ವಸ್ತ್ರಗಳೆಲ್ಲವು ತೊಯ್ದು ನೀರು ಬಸಿಯಹತ್ತಿದವು. ಮಳೆಯು ಸ್ವಲ್ಪ ಕಡಿಮೆಯಾಗುವಷ್ಟರಲ್ಲಿಯೇ ಮತ್ತೆ ಗಾಳಿ ಬೀಸಿತು. ಈ ಗಾಳಿಯು ತೊಯ್ಸಿಕೊಂಡ ಅವರಲ್ಲಿ ಅಸಹ್ಯ ಚಳಿಯನ್ನು ಹುಟ್ಟಿಸಿತು, ಗುರುಗಳು ಗದಗುಟ್ಟ ನಡಗುತ್ತ ಸಾಯುಂದೇವನನ್ನು ಕುರಿತು—

ಭಕ್ತ ಸಾಯುಂದೇವನೇ! ಈ ಥಂಡಿಯು ಸಹಿಸಲಸಾಧ್ಯವಾಗಿದೆ. ನೀನು ಈಗಲೇ ನಮ್ಮ ಮಠಕ್ಕೆ ಹೋಗಿ
ಅಗ್ಗಿಷ್ಟಿಕೆಯನ್ನು ತಕ್ಕೊಂಡು ಬರಬೇಕು. ಒಳಿತಾಗಿ ಬೆಂಕಿಯಿಂದ ಕಾಸಿಕೊಂಡರೆ ಮಾತ್ರ ಚಳಿಯು
ದೂರಾಗುವದು, ಶೀಘ್ರಹೋಗು" ಎನ್ನುವಷ್ಟರಲ್ಲಿಯೇ ಸಾಯುಂದೇವನು ಮಠದ ಮಾರ್ಗ ಹಿಡಿದನು.
ಗುರುಗಳು ಅವನನ್ನು ಕರೆದು— "ಸಾಯುಂದೇವ! ನೀನು ಹೋಗಿ ಬರುವಾಗ ಅತ್ತಿತ್ತ ನೋಡದೆ ನೆಟ್ಟನೇ
ಸಾಗಿ ಇಲ್ಲಿಗೆ ಬಂದು ಬಿಡು'' ಎಂದು ಹೇಳಿದರು. ಅಪ್ಪಣೆಯಂತೆ ಸಾಯುಂದೇವನು ಮಠಕ್ಕೆ ಹೋದನು
ಕತ್ತಲೆ ಮಳೆಗಳನ್ನು ಆತನು ಲಕ್ಷಿಸಲಿಲ್ಲ. ರಾತ್ರಿಯ ಪೂರ್ವಭಾಗವು ಭಯಾನಕತೆ ಬೀರಹತ್ತಿತ್ತು
ಅವನು ಅಗಸೇ ಬಾಗಿಲಿಗೆ ಬಂದನು, ದ್ವಾರ ರಕ್ಷಕನನ್ನು ಕೂಗಿ ಕರೆದು ಬಾಗಿಲ ತೆರೆಯಿಸಿ ಊರೊ
ಳಗೆ ಸೇರಿದನು ಮಠಕ್ಕೆ ಹೋಗಿ ಅದೇ ಮಲಗಿದ ಶಿಷ್ಯರನ್ನು ಎಬ್ಬಿಸಿ ಅಗ್ಗಿಷ್ಟಿಕೆಯನ್ನು ಸಜ್ಜುಗೊಳಿಸಿ
ಕೊಂಡನು, ಅದನ್ನು ಕೈಯಲ್ಲಿ ಹಿಡಕೊಂಡು ಸಂಗಮಕ್ಕೆ ಹೊರಟನು. ಊರದಾಟಿ ಕೆಲವು ಅಂತರ ನಡೆ
ದನು, ಮಳೆ–ಗಾಳಿಗಳು ಇದ್ದೇಇದ್ದವು ಕಲ್ಲು–ಮುಳ್ಳು–ಕೆಸರು–ತೆಗ್ಗು–ದಿನ್ನೆ ಇವಾವುಗಳನ್ನು ಲಕ್ಷಿಸದೆ ಆ
ಸಾಯುಂದೇವನು ಭರದಿಂದ ನಡೆದಿರುವಾಗ ಕತ್ತಲೆಯಲ್ಲಿ ಕಣ್ಣರಳಿಸಿ ಬಲಕ್ಕಿನ ಹಾದಿಯನ್ನು ದಿಟ್ಟಿಸಿ
ನೋಡಿದನು. ಆಗ ಅವನಿಗೆ ಹಾದಿ ಕಾಣಲಿಲ್ಲ ಮಾತ್ರ ಎರಡು ಹಾವುಗಳು ಹೆಡೆತೆಗೆದು ಭುಸುಗುಟ್ಟುವ
ದನ್ನು ಆತನು ಕಂಡನು. ಬೆಚ್ಚಿದನು. ತೀವ್ರ ಮಠಸೇರಬೇಕೆಂದು ಓಡಹತ್ತಿದನು. ಆ ಹಾವುಗಳು ಭುಸು
ಗುಟ್ಟುತ್ತಲೇ ಅವನ ಎರಡೂ ಬದಿಯಿಂದ ಓಡಿ ಬರಹತ್ತಿದವು. ಅವನು ಹಿಂದೆ ನೋಡಿ ಓಡುವನು,
ಮುಗ್ಗಲಿಗೆ ನೋಡಿ ಹಾದೀ ತಪ್ಪುವನು. ಆದರೂ ಅವನು ಕೈಯಲ್ಲಿಯ ಅಗ್ಗಿಷ್ಟಿಗೆ ಬಿಡದೆ ಹಾವುಗಳ

ಕೈಗೆ ಸಿಗದೆ ದಾರಿ ಸಿಕ್ಕತ್ತ ಹೋಗಹತ್ತಿದನು, ಆ ಊರಿಗೆ ಅಪರಿಚಿತನಾದುದರಿಂದ ಮಠದ ದಾರಿಯೂ ಅವನಿಗೆ ತಪ್ಪಿತು, ಗುರುಗಳಿಗೆ ತೀವ್ರವೇ ಅಗ್ಗಿಷ್ಟಿಕೆಯನ್ನು ಒಯ್ದುಕೊಡುವ ಅವನ ಹವಣಿಕೆಗೆ ಇದೆಲ್ಲ ತೊಂದರೆ ಯುಂಟಾದ್ದರಿಂದ ಅವನು 'ಇದು ನನ್ನ ದುರ್ದೈವ' ಎಂದು ವ್ಯಥೆಪಡುತ್ತ ನಡೆದನು, ಗುರುಸ್ಮರಣೆ ಮಾಡುತ್ತ ಅವನು ಮುಂದೆ ನೋಡಿದನು, ಸಂಗಮದ ಅಶ್ವತ್ಥ ವೃಕ್ಷವೂ—ಅಲ್ಲಿ ದಿವ್ಯ ತೋರುವ ಪ್ರಕಾಶವೂ ಜನಜಂಗುಳಿಯು ಗುರುವಿಗೆ ಆರತಿಯನ್ನು ಮಾಡುವ ದೃಶ್ಯವೂ ಅವನ ಕಣ್ಣಿಗೆ ಬಿದ್ದವು, ಆಗ ಅವನು ಸರ್ಪಗಳು ಬೆಂಬತ್ತಿ ಬರುವ ಅಂಜಿಕೆಯನ್ನು ಲೆಕ್ಕಿಸದೆ ಅಶ್ವತ್ಥದ ಕಡೆಗೆ ಓಡಹತ್ತಿದನು ಆ ವೃಕ್ಷವನ್ನು ಸಮಿಸಮೀಪಿಸಿದಂತೆ ಅವನು ಕಂಡ ದೃಶ್ಯವೆಲ್ಲ ಮಾಯವಾಯಿತು, ವೃಕ್ಷದ ಅಡಿಯಲ್ಲಿ ಕುಳಿತ ಶ್ರೀ ಗುರುಗಳೊಬ್ಬರನ್ನೇ ಕಂಡು ನಮಸ್ಕರಿಸಿ ಅಗ್ಗಿಷ್ಟಿಕೆಯನ್ನಿಟ್ಟನು, ಅವನನ್ನು ಬೆಂಬಟ್ಟಕೊಂಡು ಬಂದ ಎರಡೂ ಸರ್ಪಗಳೂ ಅಲ್ಲಿಗೇ ಬಂದವು, ಅವು ತಮ್ಮ ಫಣೆಗಳನ್ನು ಗುರುಗಳ ಪಾದಗಳ ಮೇಲಿಟ್ಟು ವಂದಿಸಿ ಹಿಂದಿರುಗಿ ಹೋದವು, ಮಳೆ—ಗಾಳಿ ನಿಂತವು, ಮೊದಲಿನಂತೆ ಆಕಾಶ ನೆಲಗಳು ತೋರಹತ್ತಿದವು ಸಾಯಂದೇವನು ಇದೆಲ್ಲ ನೋಡಿ ಚಕಿತನಾದನು, 'ಶ್ರೀ ಗುರುಗಳ ಮಹಿಮೆ ಅಗಮ್ಯ' ವೆಂದು ಅರಿತು ಅವರ ಪಾದಕ್ಕೆ ನಮಸ್ಕರಿಸಿದನು. ಆಗ ಗುರುಗಳು— 'ಸಾಯಂದೇವ! ಮಠದಿಂದ ಬರುವಾಗ ಬೆದರಿದಿಯಾ? ನೀನು ಅಂಜಗುಳಿ ಇರಬಹುದೆಂದೇ ನಾವು ನಿನ್ನ ರಕ್ಷಣೆಗೆ ಇಬ್ಬರು ಸೇವಕರನ್ನು ಕಳಿಸಿದ್ದೆವು, ಆ ಸೇವಕರೇ ಇದೀಗ ಇಲ್ಲಿಗೆ ಬಂದು ಹೋದ ಸರ್ಪಗಳು. ನೀನು ಅತ್ತಿತ್ತ ನೋಡದೆ ಧೈರ್ಯದಿಂದ ಬಂದಿದ್ದರೆ ನಿನಗೆ ಈ ಜಂಗಾವಳಿನ ಸರ್ಪಗಳ ದರ್ಶನವಾಗುತ್ತಿದ್ದಿಲ್ಲ. ನಾವು ನಿನಗೆ ಹೇಳಿದ ಸೂಚ

ನೀಯು ನಿನಗೆ ನೆನಪಾಗಲಿಲ್ಲ. ಒಟ್ಟಿನಮೇಲೆ ಸಾಯುಂದೇವ! ಗುರುಭಕ್ತಿಯು ಕಠಿಣವಿದೆ. ದೃಢತೆಯಿಂದ ಆಚರಿಸಲು ಕಲಿಕಾಲದ ಭಯವಿಲ್ಲ" ಎಂದರು.

ಆ ಬಳಿಕ ಸಾಯುಂದೇವನು ಗುರುಗಳಿಗೆ ವಂದಿಸಿ— "ಸ್ವಾಮಿ! ನನಗ ಗುರುಭಕ್ತಿಯ ಪ್ರಕಾಶವನ್ನು ಬೋಧಿಸಬೇಕು" ಎನ್ನಲು ಶ್ರೀ ಗುರುಗಳು ಅವನಿಗೆ ಬ್ರಹ್ಮನ ವ್ಯಕ್ತ ಅವತಾರ ತ್ವಷ್ಟಬ್ರಹ್ಮನು. ಆ ತಷ್ಟಬ್ರಹ್ಮಪುತ್ರನ ಪೋಲ್ತರದ ಗುರುಭಕ್ತಿಯನ್ನು ಉದಹರಿಸಿ ಆ ಸಾಯಂದೇವನಿಗೆ ಗುರುಭಕ್ತಿಯ ಶ್ರೇಷ್ಠತೆಯನ್ನು ಬೋಧಿಸಿದರು. ಆ ತ್ವಷ್ಟಬ್ರಹ್ಮಪುತ್ರನ ಕಥೆಯು ಎಂತಿರುವದೆಂದರೆ.—

"ತ್ವಷ್ಟಬ್ರಹ್ಮನು ತನ್ನ ಮಗನ ವ್ರತಬಂಧ ಮಾಡಿ ವಿದ್ಯಾಭ್ಯಾಸಕ್ಕೆಂದು ಅವನನ್ನು ಗುರುಕುಲಕ್ಕೆ ಕಳಿಸಿದನು. ಅಲ್ಲಿ ಅವನು ಗುರು ಸೇವೆ ಮಾಡಿಕೊಂಡು ಇರುತ್ತಿರಲು ಒಂದು ದಿನ ದೊಡ್ಡ ಮಳೆ ಸುರಿದು ಗುರುವಿನ ಆಶ್ರಮವೆಲ್ಲ ಸೋರಿ ಒಳಗೆ ನೀರೇ ನೀರಾಯಿತು. ಗುರುವು ತನ್ನ ಈ ಶಿಷ್ಯನನ್ನು ಕುರಿತು— "ಶಿಷ್ಯನೆ! ನಮ್ಮ ಆಶ್ರಮವು ಜೀರ್ಣವಾಗಿ ಪ್ರತಿ ವರುಷವೂ ಸೋರುತ್ತಲೇ ಇರುವದು. ಆದ್ದರಿಂದ ನೀನು ಆವಶ್ಯಕ ಸಾಮಾನು ತಂದು ಎಂದೂ ಸೋರದ ಹಾಗೆ ದೃಢವಾಗಿ ಮಾಡು" ಎಂದನು. ಅಷ್ಟರಲ್ಲಿ ಗುರುಪತ್ನಿಯು ಬಂದು ಆ ಶಿಷ್ಯನಿಗೆ— ಎಲೈ ಶಿಷ್ಯನೆ! ನೀನು ನನಗೆ ಒಂದು ಕುಪ್ಪಸ ತೆಗೆದುಕೊಂಡು ಬಾ. ಅದರೆ ಆ ಕುಪ್ಪಸವು ನೆಯ್ದು ಅರಿವೆಯುದೂ ದಾರದಿಂದ ಹೊಲಿದಿರುವದೂ ಆಗಿರದೆ ವಿಚಿತ್ರ ಬಣ್ಣದ್ದಿರಬೇಕು. ಹಾಗು ನನ್ನ ಮೈಗೆ ಹಾಳತಾಗಿರಬೇಕು" ಎಂದಳು. ಅವಳಂತೆ ಗುರುಪುತ್ರನು ಆ ಶಿಷ್ಯನಿಗೆ— "ನನಗೆ ನನ್ನ ಪಾದದಳತೆಯ ಪಾದರಕ್ಷೆಗಳನ್ನು ತಂದು ಕೊಡು. ಅವಕ್ಕೆ ಕೆಸರು ರಾಡಿ ಹತ್ತಬಾರದು.

ಹಾಗು ಅವನ್ನು ನಾನು ಮೆಟ್ಟಿದ ಕೂಡಲೆ ಅವು ನನ್ನನ್ನು ಇಚ್ಛಿತ ಸ್ಥಳಕ್ಕೆ ಒಯ್ದು ಮುಟ್ಟಿಸುವಂಥವಿರಬೇಕು'' ಎಂದು ಹೇಳುವಷ್ಟರಲ್ಲಿಯೇ ಆ ಗುರುವಿನ ಚಿಕ್ಕ ಮಗಳು ಬಂದು ತೊದಲು ಮಾತಿನಿಂದ—'ನನಗೆ ಆನೆ ಹಲ್ಲಿನ ಆಟದ ಒಡವೆಗಳನ್ನು ತರಬೇಕು. ಅದರಲ್ಲಿ ಒಂದೇ ಕಂಬದ ಮನೆಯೊಂದು ಇರಬೇಕಲ್ಲದೆ ಅದು ಎಂದೂ ನಾಶವಾಗಬಾರದು, ನಾನು ಒಯ್ದಲ್ಲಿಗೆ ಅದು ಬರುವಂತಿರಬೇಕು. ಅದರಲ್ಲಿ ಮಣೆ, ಸಮೆ ಇತ್ಯಾದಿ ಸಾಮಾನುಗಳಿರಬೇಕು'' ಎಂದು ಹೇಳಿದಳು.

ಶಿಷ್ಯನು ಅವರೆಲ್ಲರ ಹೇಳಿಕೆ-ಬೇಡಿಕೆಗಳನ್ನು ಕೇಳಿಕೊಂಡನು. ಆಗಲೇ ಅಲ್ಲಿಂದ ಹೊರಟು ಅರಣ್ಯಕ್ಕೆ ಹೋದನು. ಅಲ್ಲಿ ಒಂದೆಡೆ ಕುಳಿತು— "ನಾನು ಬಾಲಬ್ರಹ್ಮಚಾರಿಯು. ಗುರುಮನೆಯವರ ಆಸೆಯನ್ನು ಪೂರೈಸುವ ಶಕ್ತಿಯು ನನ್ನಲ್ಲಿ ಇಲ್ಲ. ಊಟಕ್ಕಾಗಿ ಒಂದು ಪತ್ರಾವಳಿಯನ್ನು ಚುಚ್ಚಲಿಕ್ಕೆ ಬಾರದ ನಾನು ಇವೆಲ್ಲವನ್ನು ಅದೆಂತು ಪೂರೈಸಲಿ?" ಎಂದು ಚಿಂತಿಸುತ್ತ ಗುರುಸ್ಮರಣೆ ಮಾಡುತ್ತ ಕುಳಿತನು. "ಇನ್ನು ನಾನು ಹೀಗೆ ಕುಳಿತರೆ ಗುರುವು ಶಪಿಸುವನು'' ಎಂದು ತಿಳಿದು ಅಲ್ಲಿಂದ ಎದ್ದು ಮುಂದೆ ನಡೆದನು. ಹೋಗಹೋಗುತ್ತ ಅವನು— 'ನಾನು ಗುರುವಿನ ಆಜ್ಞೆ ತಿರಸ್ಕರಿಸುವದಕ್ಕಿಂತ ಪ್ರಾಣ ಕೊಡುವದೇ ಲೇಸು' ಎಂದು ಕೊನೆಯ ನಿರ್ಧಾರದಿಂದ ಆ ಅರಣ್ಯದಲ್ಲಿ ಮತ್ತೆ ಮುಂದೆ ಸಾಗಿದನು. ಅಷ್ಟರಲ್ಲಿಯೇ ಅವನಿಗೆ ಒಬ್ಬ ಅವಧೂತನ ದರ್ಶನವಾಯಿತು. ಈ ಬಾಲಕನನ್ನು ನೋಡಿ ಅವಧೂತನು ಇವನ ಸಂಗತಿಗಳನ್ನೆಲ್ಲ ಕೇಳಿಕೊಂಡನು. ಬಾಲಕನು ಅವಧೂತನನ್ನು ಕುರಿತು— "ನನ್ನ ಗುರುವಿನ ಹೆಂಡಿರ ಮಕ್ಕಳೂ ಗುರುವೂ ಇವರ ಇಚ್ಛೆಯನ್ನು ಹೇಗೆ ಪೂರೈಸಲಿ?" ಎಂದು ಉದಾಸೀನತೆಯಿಂದ ನುಡಿದನು. ಅದಕ್ಕೆ ಅವಧೂತನು—

"ಬಾಲಕನೆ ! ನೀನು ಕಾಶೀಪಟ್ಟಣಕ್ಕೆ ಹೋಗು, ಅಲ್ಲಿ ವಿಶ್ವೇಶ್ವರನನ್ನು ಆರಾಧಿಸು, ಇಂತಾದರೆ ನಿನ್ನ ಅಭೀಷ್ಟಗಳು ಸಿದ್ಧಿಸುವವು. ಆ ದೇವನಿಂದ ನಿನ್ನ ಬಯಕೆಗಳು ಈಡೇರಿ ನೀನೇ 'ವಿಶ್ವಕರ್ಮ'ನೆಂದು ಪ್ರಸಿದ್ಧನಾಗುವಿ. ಆ ಕಾಶಿಯಲ್ಲಿ ಆನಂದಕಾನನವೆಂಬ ಮಹಾಸ್ಥಾನವಿದೆ. ಅದು ಎಲ್ಲ ಕಾಮನೆಗಳನ್ನು ಲಭಿಸಿಕೊಡುವದು. ಕಾಶಿಯು ಸಕಲ ಧರ್ಮಗಳ ಕೇಂದ್ರವಾಗಿದೆ. ಹಾಗು ಮೋಕ್ಷಸ್ಥಾನವೆನ್ನಿಸಿದೆ. ಇಂಥ ಕಾಶೀ ಸ್ಥಾನವಿದ್ದಮೇಲೆ ನಿನಗೇಕೆ ಚಿಂತೆ, ಅಲ್ಲಿಯ ಮಹಿಮೆಯು ಅವರ್ಣನೀಯವಿದೆ" ಎಂದು ಹೇಳಲು ಆ ಬಾಲಬ್ರಹ್ಮಚಾರಿಯು ಅವಧೂತನಿಗೆ ನಮಸ್ಕರಿಸಿ— "ಸ್ವಾಮಿ ! ಈಗ ನಾನು ಅರಣ್ಯದಲ್ಲಿರುವೆ, ಕಾಶಿಗೆ ಹೇಗೆ ಹೋಗಲಿ?" ಎಂದನು. ಆಗಲಾ ಅವಧೂತನು— 'ನಾನೇ ನಿನ್ನನ್ನು ಕರಕೊಂಡು ಹೋಗುವೆನು ನಡೆ' ಎಂದು ಆ ಬಾಲಬ್ರಹ್ಮಚಾರಿಯನ್ನು ಕರಕೊಂಡು ಹೋದನು. ಅವನಿಗೆ ವಿಶ್ವೇಶ್ವರನ ದರ್ಶನ ಮಾಡಿಸಿದನು. ಅಲ್ಲಿರುವ ಎಲ್ಲ ತೀರ್ಥಗಳನ್ನೂ ದೇವರುಗಳನ್ನೂ ಅವನಿಗೆ ಹೇಳಿ ಕಾಶೀಯಾತ್ರೆಯ ಕ್ರಮವನ್ನು ಹೇಳಿಕೊಟ್ಟನು. ಆ ಬಳಿಕ ಅವಧೂತನು ಆ ವಿಶ್ವಕರ್ಮನಿಗೆ ಅಂತರ್ಗೃಹಯಾತ್ರೆ ದಕ್ಷಿಣ ಮಾನಸಯಾತ್ರೆ, ಉತ್ತರ ಮಾನಸಯಾತ್ರೆಗಳ ಕ್ರಮ ಹೇಳಹತ್ತಿದನು.

"ವಿಶ್ವಕರ್ಮನೆ ! ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿ ಮೊದಲು ಶ್ರೀ ವಿಶ್ವೇಶ್ವರನ ದರ್ಶನ ಪಡೆದ ನಂತರ ಅಂತರ್ಗೃಹಯಾತ್ರೆ ಕೈಕೊಳ್ಳಬೇಕು. ಭಾಗೀರಥಿ, ಕರ್ಣಿಕೇಶ್ವರ ಕಮಲೇಶ್ವರ, ವಾಸ್ಕೇಶ್ವರ ಪರ್ವತೇಶ್ವರ, ಗಂಗಾಕೇಶವ, ಲಲಿತಾದೇವಿ, ಜರಾಸಂಧೇಶ್ವರ ಸೋಮನಾಥ, ಶೂಲಕಂಠೇಶ್ವರ, ವಾರಾಹೇಶ್ವರ, ಬ್ರಹ್ಮೇಶ್ವರ, ಅಗಸ್ತ್ಯೇಶ್ವರ, ಹರಿಹರೇಶ್ವರ, ವೈಜನಾಥ, ಧ್ರುವೇಶ್ವರ, ಗೋಕರ್ಣೇಶ್ವರ,

ಹಾಟಕೇಶ್ವರ, ಅಸ್ಥಿಕ್ಷೇಪ ತಟಾಕೇಶ್ವರ, ಕಿಂಕರೇಶ್ವರ, ಭಾರಭೂತೇಶ್ವರ, ಚಿತ್ರಗುಪ್ತೇಶ್ವರ, ಚಿತ್ರಘಂಟೆ ಪಶುಪತೀಶ್ವರ, ಪಿತಾಮಹೇಶ್ವರ, ಕಲ್ಮೇಶ್ವರ, ಚಂದ್ರೇಶ್ವರ, ನಂತರ ವಿಶ್ವೇಶ್ವರ-ದರ್ಶನ ಪಡೆದು ಬಳಿಕ ವಿಘ್ನೇಶ್ವರ, ಅಗ್ನೀಶ್ವರ, ನಾಗೇಶ್ವರ, ಹರಿಶ್ಚಂದ್ರೇಶ್ವರ, ಚಿಂತಾಮಣಿ-ವಿನಾಯಕ, ಸೋಮನಾಥ-ವಿನಾಯಕ, ವಸಿಷ್ಠ, ವಾಮದೇವ, ತ್ರಿಸಂಧ್ಯೇಶ್ವರ, ವಿಶಾಲಾಕ್ಷಿ, ಧರ್ಮೇಶ್ವರ, ವಿಶ್ವಬಾಹು, ವಿನಾಯಕ, ವೃದ್ಧಾದಿತ್ಯ, ಚತುರ್ವಕ್ತ್ರೇಶ್ವರ, ಬ್ರಹ್ಮೇಶ್ವರ, ಪ್ರಕಾಮೇಶ್ವರ, ಈಶ್ವರ, ಈಶಾನ, ಚಂಡೀಚಂಡೇಶ್ವರ, ಭವಾನಿ-ಶಂಕರ, ಢುಂಢಿರಾಜ, ರಾಜರಾಜೇಶ್ವರ, ಲಾಂಗೂಲೇಶ್ವರ, ನಕುಲೇಶ್ವರ, ಪರಾನ್ನ ಪರದ್ರವ್ಯೇಶ್ವರ, ಅಸುರೇಶ್ವರ, ಗಂಗೇಶ್ವರ, ಜ್ಞಾನವಾಪಿ-ಜ್ಞಾನೇಶ್ವರ, ನಂದಿಕೇಶ್ವರ, ನಿಷ್ಕಲಂಕೇಶ್ವರ, ಮಾರ್ಕಂಡೇಶ್ವರ, ಸುರೇಶ್ವರ, ತಾರಕೇಶ್ವರ, ಮಹಾಕಾಳೇಶ್ವರ, ಮಹೇಶ್ವರ, ಮೋಕ್ಷೇಶ್ವರ, ವೀರಭದ್ರೇಶ್ವರ, ಅವಿಮುಕ್ತೇಶ್ವರ, ಮೋದಾದಿ ಪಂಚವಿನಾಯಕ, ಆನಂದಭೈರವ-ನಂತರ ವಿಶ್ವೇಶ್ವರ-ಹೀಗೆ ಅಂತರ್ಗೃಹಯಾತ್ರೆಯನ್ನು ಮುಗಿಸಬೇಕು.

ಬಳಿಕ ದಕ್ಷಿಣಮಾನಸ ಯಾತ್ರೆಯಲ್ಲಿ— ಮೋದಾದಿ ಪಂಚವಿನಾಯಕ, ಢುಂಢಿರಾಜ, ಭವಾನಿ ಶಂಕರ, ದಂಡಪಾಣಿ, ವಿಶಾಲಾಕ್ಷಿ, ಧರ್ಮಕೂಪ-ಧರ್ಮೇಶ್ವರ, ಗಂಗಾಕೇಶವ, ಲಲಿತಾದೇವಿ. ಜರಾಸಂಧೇಶ್ವರ, ಸೋಮನಾಥ, ವಾರಾಹೇಶ್ವರ, ದಶಾಶ್ವಮೇಧತೀರ್ಥ, ದಶಾಶ್ವಮೇಧೇಶ್ವರ, ಪ್ರಯಾಗತೀರ್ಥ-ಪ್ರಯಾಗೇಶ್ವರ, ಶೀತಲೇಶ್ವರ, ಸರ್ವೇಶ್ವರ, ಢುಂಢಿರಾಜ, ತಿಲಭಾಂಡೇಶ್ವರ, ರೇವಾಕುಂಡ, ಮಾನಸ ಸರೋವರ-ಮಾನಸೇಶ್ವರ, ಕೇದಾರಕುಂಡ-ಕೇದಾರೇಶ್ವರ, ಗೌರೀಕುಂಡ, ವೃದ್ಧಕೇದಾರೇಶ್ವರ, ಹನುಮಂತೇಶ್ವರ, ರಾಮೇಶ್ವರ, ಕ್ಷಮುಕುಂಡ-ಸಿದ್ಧೇಶ್ವರ, ಸ್ವಪ್ನಕುಂಡ-ಸ್ವಪ್ನೇಶ್ವರ, ಸಂಗಮ-ಸಂಗಮೇಶ್ವರ,

ಲೋಕಾರ್ಕಕೂಪ–ಈಶ್ವರ, ಅರ್ಕವಿನಾಯಕ. ಪರಾಶರೇಶ್ವರ, ಸನ್ನಿಹತ್ಯಕುಂಡ, ಕುರುಕ್ಷೇತ್ರಕುಂಡ, ಅಮೃತ ಕುಂಡ–ದುರ್ಗಾವಿನಾಯಕ. ದುರ್ಗಾದೇವಿ, ಅರವತ್ನಾಲ್ಕು ಯೋಗಿನಿಯರು, ಕುಕ್ಕುಟದ್ವಿಜ, ಗೌರಿ ಅಂಬೆ, ರೇಣುಕೆ, ಶಂಖೋದ್ಧಾರಕುಂಡ–ಶಂಖವಿಷ್ಣು, ಕಾಮಾಕ್ಷಿಕುಂಡ–ಕಾಮಾಕ್ಷಿದೇವಿ, ಅಯೋಧ್ಯಾಕುಂಡ–ಲಕ್ಷ್ಮೀ ದೇವಿ, ಲವಾಂಕುಶಕುಂಡ–ಲವಕುಶ, ಲಕ್ಷ್ಮೀಕುಂಡ–ಲಕ್ಷ್ಮೀನಾರಾಯಣ, ಸೂರ್ಯಕುಂಡ, ಸಾಂಬಾದಿತ್ಯ, ವೈಜನಾಥಕುಂಡ–ವೈಜನಾಥ, ಗೋದಾವರಿಕುಂಡ–ಗೌತಮೇಶ್ವರ, ಅಗಸ್ತಿಕುಂಡ–ಅಗಸ್ತ್ಯೇಶ್ವರ, ಶುಕ್ರಕೂಪ–ಶುಕ್ರೇಶ್ವರ, ಅನ್ನಪೂರ್ಣೆ, ಧುಂಡಿರಾಜ, ಜ್ಞಾನವಾಪಿ–ಜ್ಞಾನೇಶ್ವರ, ದಂಡಪಾಣಿ, ಆನಂದಭೈರವ,–ನಂತರ ವಿಶ್ವೇಶ್ವರ, ಹೀಗೆ ದಕ್ಷಿಣಮಾನಸ ಯಾತ್ರೆ ಮುಗಿಸಬೇಕು.

ಬಳಿಕ ಉತ್ತರ ಮಾನಸ ಯಾತ್ರೆಯಲ್ಲಿ— ಪಂಚಗಂಗೆಯ ಸ್ನಾನಮಾಡಬೇಕು. (ಕಿರಣಾ–ಧೂತಪಾಪ–ಸರಸ್ವತೀ–ಗಂಗೆ–ಯಮುನೆ) ಈ ಐದೂ ನದಿಗಳು ಪಂಚಗಂಗೆಯೂ ನಂತರ ಬಿಂದುಮಾಧವ, ಕೇಶವ, ಗೋಪಾಲಕೃಷ್ಣ, ನೃಸಿಂಹ, ಮಂಗಳಾಗೌರಿ, ಗಭಸ್ತೀಶ್ವರ, ಮಯೂರಾದಿತ್ಯ–ನಂತರ ವಿಶ್ವೇಶ್ವರ ನನ್ನು ಪೂಜಿಸಬೇಕು.

ಬಳಿಕ ಆದಿತ್ಯನನ್ನು ಪೂಜಿಸಿ ಕೇದಾರೇಶ್ವರ, ಪಾಪಭಕ್ಷೇಶ್ವರ, ನವಗ್ರಹ, ಕಾಲಭೈರವ, ಕ್ಷೇತ್ರಪಾಲ, ಕಾಲಕೂಪ–ಕಾಲೇಶ್ವರ, ಹಂಸತೀರ್ಥ, ಕೃತ್ತಿವಾಸೇಶ್ವರ, ಶಂಖಪಾಲ, ರತ್ನೇಶ್ವರ, ಸತ್ಯೇಶ್ವರ, ದಕ್ಷೇಶ್ವರ ಚತುರ್ವಕ್ತ್ರೇಶ್ವರ, ವೃದ್ಧ ಕಾಲಕೂಪ–ಕಾಲೇಶ್ವರ, ಅಪಮೃತ್ಯು–ಈಶ್ವರ, ಮಂದಾಕಿನಿ, ಮಧ್ಯಮೇಶ್ವರ, ಜಂಬುಕೇಶ್ವರ, ವಕ್ರತುಂಡ, ದಂಡಖಾತಕೂಪ, ಭೂತಭೈರವ, ಈಶಾನೇಶ್ವರ, ಜೈಗೀಷವ್ಯಗುಹ, ಘಂಟಾ

ಕುಂಡ, ವ್ಯಾಘ್ರೇಶ್ವರ, ಕಂದುಕೇಶ್ವರ, ಜ್ಯೇಷ್ಠವಾಪಿ--ಜೇಷ್ಠೇಶ್ವರ, ಸಪ್ತಸಾಗರ, ವಾಲ್ಮೀಕೇಶ್ವರ, ಭೀಮೋಟಜಾ--ಭೀಮೇಶ್ವರ, ಮಾತೃಪಿಂಡಕುಂಡ, ಪಿಶಾಚಮೋಚನತೀರ್ಥ, ಕಪರ್ದೀಶ್ವರ, ಕರ್ಕೋಟಕವಾಪಿ.-ಕರ್ಕೋಟಕೇಶ್ವರ, ಈಶ್ವರಗಂಗೆ, ಅಗ್ನೀಶ್ವರ, ಚಕ್ರಕುಂಡ, ಉತ್ತರಾರ್ಕ ಮತ್ಸ್ಯೋದರತೀರ್ಥ, ಓಂಕಾರೇಶ್ವರ, ಕಪಿಲೇಶ್ವರ, ಋಣಮೋಚನತೀರ್ಥ, ಪಾಪವಿಮೋಚನತೀರ್ಥ, ಕಪಾಲಮೋಚನತೀರ್ಥ, ಕೈಲಸ್ತಂಭ, ವೈತರಣಿ, ಕಪಿಲಧಾರೆ, ವೃಷಭಧ್ವಜ, ಜ್ವಾಲಾನೃಸಿಂಹ, ವರುಣಾಸಂಗಮ, ಕೇಶವಾದಿತ್ಯ, ಆದಿಕೇಶವ, ಪ್ರಹ್ಲಾದತೀರ್ಥ–ಪ್ರಹ್ಲಾದೇಶ್ವರ, ಕಪಿಲಧಾರೆ, ತ್ರಿಲೋಚನೇಶ್ವರ, ಅಸಂಖ್ಯಾತೇಶ್ವರ, ಮಹಾದೇವ, ದ್ರುಪದೇಶ್ವರ, ಗಂಗಾ–ಯಮುನಾ–ಸರಸ್ವತೀ ತೀರದಲಿಂಗಗಳು, ಕಾಮ್ಯತೀರ್ಥ–ಕಾಮೇಶ್ವರ, ಗೋಪ್ರಕಾರತೀರ್ಥ, ಪಂಚಗಂಗಾಸ್ನಾನ–ಮಣಿಕರ್ಣಿಕೆ ಸ್ನಾನ, ಜಲಾಶಯತೀರ್ಥ, ಹನುಮಂತ, ಮೋದಾದಿಪಂಚವಿನಾಯಕ, ಅನ್ನಪೂರ್ಣೆ, ಧುಂಡಿರಾಜ, ಜ್ಞಾನವಾಪಿ–ಜ್ಞಾನೇಶ್ವರ, ದಂಡಪಾಣಿ, ಮೋಕ್ಷಲಕ್ಷ್ಮೀವಿಲಾಸ, ಪಂಚಪಾಂಡವ, ದ್ರುಪದಿ, ಪ್ರುಪದ, ವಿನಾಯಕ, ಆನಂದಭೈರವ, ಅವಿಮುಕ್ತೇಶ್ವರ, ಇವೆಲ್ಲವುಗಳನ್ನು ಪೂಜಿಸಿ ವಿಶ್ವನಾಥನ ಸಮ್ಮುಖ ಹೋಗಬೇಕು. ಇಷ್ಟಾದರೆ ಇದು ಉತ್ತರಮಾನಸಯಾತ್ರೆಯಾಯಿತು.

ಬಳಿಕ ವಿಶ್ವೇಶ್ವರನನ್ನು ವಂದಿಸಿ ಪಂಚಕ್ರೋಶಯಾತ್ರೆ ಕೈಕೊಳ್ಳಬೇಕು. ಇಷ್ಟಲ್ಲಿ ಕಾಶೀಯಾತ್ರೆಯ ವಿವರವು ಕಾಶೀಖಂಡ ಪುರಾಣದಲ್ಲಿದೆ' ಎಂದು ಅವಧೂತನು ವಿಶ್ವಕರ್ಮ ಬಾಲಕನಿಗೆ ಹೇಳಿದನು, ಅದನ್ನೇ ಶ್ರೀ ಗುರುಗಳು ಸಾಯಂದೇವನಿಗೆ ಹೇಳಿದರು.

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೪೨ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ || ತದನಂತರ ಅವಧೂತನು ತ್ವಷ್ಟಬ್ರಹ್ಮಪುತ್ರ ವಿಶ್ವಕರ್ಮನಿಗೆ ಪಂಚಕ್ರೋಶಿ ಯಾತ್ರೆಯ ವಿವರವನ್ನು ಕ್ರಮಗೊಳಿಸಿ ಹೇಳಿದನು. ಅಲ್ಲಲ್ಲಿ ಆಚರಿಸ ತಕ್ಕ ಸ್ನಾನ-ದಾನ-ಪೂಜೆಗಳನ್ನು ಅವವುಗಳ ಫಲದೊಂದಿಗೆ ಬೋಧಿಸಿದನು, ಬಾಲಕನೆ! ನೀನಾದರೂ ವಿಧಿಯುಕ್ತವಾಗಿ ಅಂತರ್ಗೃಹಯಾತ್ರೆ, ದಕ್ಷಿಣ ಮಾನಸಯಾತ್ರೆ ಉತ್ತರಮಾನಸಯಾತ್ರೆ ಹಾಗು ಪಂಚ ಕ್ರೋಶೀ ಯಾತ್ರೆ. ಇವುಗಳನ್ನು ಗುರುಸ್ಮರಣೆಯೊಂದಿಗೆ ಆಚರಿಸು, ಅದರಿಂದ ನಿನಗೆ ಗುರುಮೂರ್ತಿ ಶಂಕ ರನು ಪ್ರಸನ್ನನಾಗುವನು." ಎಂದು ಹೇಳಿ ಅವಧೂತನು ಅಲ್ಲಿಯೇ ಅದೃಶ್ಯನಾದನು.!

ಆಗ ಬ್ರಹ್ಮಚಾರಿಯು— "ಈ ಅದೃಶ್ಯನಾದ ತಪಸ್ವಿಯೇ ನನ್ನ ನಿಜವಾದ ಗುರುವು ಹಾಗು ಈಶ್ವರನು, ನನ್ನ ಗುರುಕೃಪೆಯಿಂದ ನನಗೆ ಅವಧೂತ ಸ್ವರೂಪದಿಂದ ದರ್ಶನ ನೀಡಿ ಬೋಧಿಸಿದನು' ಎಂದು ದೃಢವಾಗಿ ನಂಬಿ ಕ್ರಮವಾಗಿ ಕಾಶಿಯ ಯಾತ್ರೆಗಳನ್ನು ಮುಗಿಯಿಸಿದನು. ಕಡೆಗೆ ವ್ಯೋಮಕೇಶ ವಿಶ್ವನಾಥನು ಅವನಿಗೆ ತನ್ನ ಸಗುಣ ಸ್ವರೂಪದಿಂದ ದರ್ಶನ ನೀಡಿ— 'ನಿನ್ನ ಇಚ್ಛಿತವರಗಳೇನು" ಎಂದು ಕೇಳಲು ಬ್ರಹ್ಮಚಾರಿಯು "ಗುರುವೂ ಅವನ ಹೆಂಡತಿ-ಮಗ-ಮಗಳು ಇವರೆಲ್ಲರು ಪ್ರಕಟಿಸಿದ ಬಯಕೆಯನ್ನು ಪೂರೈಸಬೇಕು" ಎಂದು ವರ ಬೇಡಿಕೊಂಡನು. ಈಶ್ವರನು 'ತಥಾಸ್ತು' ಎಂದು ನುಡಿದು— 'ಬಾಲಕಾ! ನಿನ್ನ ಗುರುಭಕ್ತಿಗೆ ಮೆಚ್ಚಿದೆನು ನೀನು ಸಕಲ ವಿದ್ಯಾಕುಶಲನಾಗುವಿ, ವಿಶ್ವಕರ್ಮನೆಂವರೆ

ನೀನೇ ! ನಿನಗೆ ಪುರುಷಾರ್ಥ ಪರಮಾರ್ಥಗಳು ಲಭಿಸಿದವು' ಎಂದು ಶಂಕರನು ವರವನ್ನು ನೀಡಿದನು.

ವಿಶ್ವಕರ್ಮನು ಶಿವನಿಂದ ವರಪಡೆದು ಅಲ್ಲಿಯೇ ತನ್ನ ಹೆಸರಿನ ಒಂದು ಲಿಂಗವನ್ನು ಸ್ಥಾಪಿಸಿದನು ಬಳಿಕ ಅಲ್ಲಿಂದ ಹೊರಟು ತನ್ನ ಗುರುವಿನ ಆಶ್ರಮಕ್ಕೆ ಬಂದನು. ಬರುವಾಗ ಗುರು ಮೊದಲಾದವರು ಹೇಳಿದ ಎಲ್ಲ ವಸ್ತುಗಳನ್ನು ತಂದು ಅವರವರ ಬಯಕೆ ಪೂರೈಸಿದನು. ಗುರುವು ಶಿಷ್ಯ ವಿಶ್ವಕರ್ಮನಿಗೆ ಪ್ರಸನ್ನನಾಗಿ ಮೋಕ್ಷದ ವರಪ್ರದಾನ ಮಾಡಿದನು" ಎಂದು ಶ್ರೀ ಗುರುಗಳು ಸಾಯಂದೇವನಿಗೆ ಹೇಳಿದರು.

ಸಾಯಂದೇವನು ಗುರುಗಳನ್ನು ಕುರಿತು— ಸ್ವಾಮಿ ! ನೀವು ಕಾಶೀಯಾತ್ರೆಯ ವಿಧಾನವನ್ನು ಹೇಳುವಾಗ ಅಲ್ಲಿ ನಾನು ನಿಮ್ಮ ಸಂಗಡವೇ ಇದ್ದೆನು. ಇದು ನನಗೆ ಸ್ವಪ್ನವೋ ಜಾಗ್ರತಿಯೋ ಎಂಬುದನ್ನು ನಾನು ತಿಳಿಯಲಾರೆ." ಎಂದು ನುಡಿದು ಸಾಯಂದೇವನು ತನ್ನ ಕವಿತ್ವಶಕ್ತಿಯಿಂದ ಗುರುಪರವಾಗಿ ವಿರಚಿಸಿದ ಸಂಸ್ಕೃತ ಶ್ಲೋಕಗಳನ್ನು ಪಠಿಸಿದನು. ದಂಡವತ್ತಾಗಿ ನಮಸ್ಕರಿಸಿದನು. ಮತ್ತೂ ಅವನು— ದಯಾನಿಧಿಯೇ! ನೀವು ನನಗೆ ಪರಮಾರ್ಥ ತೋರಿಸಿದಿರಿ, ನಿಜವಾಗಿ ಕಾಶೀಪುರವು ನಿಮ್ಮಲ್ಲಿಯೇ ಇರುವದು, ನೀನೇ ಶ್ರೀ ವಿಶ್ವನಾಥನು" ಎಂದು ಉದ್ಗರಿಸಿ ನಮಸ್ಕರಿಸಿದನು. ಶ್ರೀ ಗುರುಗಳು— "ಸಾಯಂದೇವನೆ! ನಿನಗೆ ಕಾಶೀಪುರವನ್ನು ತೋರಿಸಿದೆನು. ನಿನ್ನ ವಂಶದ ನಿನ್ನನಂತರ ಇಪ್ಪತ್ತೊಂದು ತಲೆಗಳವರೆಗೂ ಎಲ್ಲರಿಗೂ ಕಾಶೀಯಾತ್ರೆಯ ಫಲವು ಲಭಿಸುತ್ತಲೇ ಇರುವದು. ನೀನು ನಮ್ಮ ನಿಜಭಕ್ತನು, ನಿನಗೆ ವೃತ್ತಾಂತ ತೋರಿಸಿದೆನು. ಇನ್ನುಮುಂದೆ ನೀನು ನಮ್ಮ ಸೇವೆ ಕೈಕೊಂಡು ನಮ್ಮ

ಜೊತೆಗೇ ಇರಬೇಕು. ಪ್ರಾಂಭರಿಗೆ ವಂದಿಸಕೂಡದು, ನಿನ್ನ ಸತಿ–ಸುತರನ್ನು ಕರಕೊಂಡು ಬಂದು ನಮಗೆ ಬೆಟ್ಟಿಮಾಡಿಸು” ಎಂದು ಹೇಳಿ ಅವನಿಗೆ ಅಪ್ಪಣೆ ಕೊಟ್ಟು ಗುರುಮಠಕ್ಕೆ ಹೋದರು, ಭಕ್ತರಿಗೆಲ್ಲ ಗುರು ದರ್ಶನದಿಂದ ಆನಂದವಾಯಿತು. !

ನಾಮದೇವನು ಗುರುಗಳ ಅಪ್ಪಣೆ ಪಡೆದು ಸ್ವಗ್ರಾಮಕ್ಕೆ ಹೋದನು. ಗಾಣಗಾಪುರದ ಪವಿತ್ರ ವಾರ್ತೆಯನ್ನು ತನ್ನ ಹೆಂಡತಿ ಹಾಗು ಮಕ್ಕಳಿಗೆ ಹೇಳಿದನು. ಶ್ರೀ ಗುರು ಮಹಿಮೆಯನ್ನು ಕೇಳಿ ನಾಮದೇವನ ಪತ್ನಿ ಜಾನಾಬಾಯಿಯು ಗುರು ದರ್ಶನದ ಅಪೇಕ್ಷೆಯಿಂದ ತನ್ನ ಪತಿ–ಸುತರಿಂದ ಕೂಡಿಕೊಂಡು ನೇರವಾಗಿ ಎಲ್ಲರೂ ಗಾಣಗಾಪುರಕ್ಕೆ ಬಂದರು ಗುರುಮಠಕ್ಕೆ ಹೋಗಿ ಎಲ್ಲರೂ ಶ್ರೀ ಗುರುಗಳಿಗೆ ಆನಂದದಿಂದ ನಮಸ್ಕರಿಸಿದರು. ಮನಸಾರೆ ಗುರುಗಳ ಸ್ತುತಿ–ಸ್ತೋತ್ರಗಳನ್ನೂ ಪದಗಳನ್ನೂ ಹಾಡಿದರು. ಅವರು [illegible] ಹಾಡಿದ ಕನ್ನಡ ಪದಗಳು ಬಲು ರಮ್ಯವೂ ಭಕ್ತಿಪರವೂ ಆಗಿರುವವು.

ಶ್ರೀ ಗುರುಗಳು ನಾಮದೇವನಿಂದ ಹಾಡಲ್ಪಟ್ಟ ಪದಗಳನ್ನು ಕೇಳಿ ಬಲು ಸಂತುಷ್ಟತೆ ಹೊಂದಿದರು. ಹಾಗು ನಾಮದೇವನ ಪರಿವಾರಕ್ಕೆಲ್ಲ ಕ್ಷೇಮ ಕೇಳಿ ಅವರವರ ಕುಶಲ ವಾರ್ತೆಯನ್ನು ಕೇಳಿದರು. ನಾಮದೇವನ ಜಾನಾಬಾಯಿಯು ‘ಗುರುಕೃಪೆಯಿಂದ ನಾವೆಲ್ಲರೂ ಕ್ಷೇಮ ಸುಖದಿಂದ ಇರುವೆವು’ ಎಂದು ಹೇಳಿ ತನ್ನ ಮಕ್ಕಳು ಮಕ್ಕಳಿಂದ ಗುರುಗಳ ಪಾದಗಳಿಗೆ ನಮಸ್ಕಾರ ಮಾಡಿಸಿದರು. ಆ ಎಲ್ಲ ಮಕ್ಕಳಲ್ಲಿ ‘ನಾಗನಾಥ’ ನೆಂಬುವನು ನಾಮದೇವನ ಹಿರಿಯ ಮಗನು. ಶ್ರೀ ಗುರುಗಳು ಅವನನ್ನು ತಮ್ಮ

ಮುಂದೆ ಕರೆದು ಅವನ ಮಸ್ತಕದ ಮೇಲೆ ದಯಾ ಹಸ್ತವನ್ನಿಟ್ಟರು. ಹಾಗು ಅವರು ಸಾಯಂದೇವ ದಂಪತಿಗಳನ್ನು ಕುರಿತು— "ಈ ನಿಮ್ಮ ಮಗನು ಪೂರ್ಣಾಯುಷಿಯಾಗುವನು, ಇವನಿಗೆ ಬಹು ಸಂತತಿಯ ಯೋಗವಿರುವದು. ನಮ್ಮ ಪ್ರೀತಿಯ ಭಕ್ತನೆಂದರೆ ಈ ನಾಗನಾಥನೇ. ಇವನು ಸಿರಿವಂತನಾಗುವನು. ಇನ್ನು ನೀವು ಮ್ಲೇಂಛರ ಸೇವೆಯನ್ನು ಕೈಕೊಳ್ಳಬೇಡಿರಿ, ಅದರಿಂದ ನಿಮ್ಮ ಪ್ರಾಣಕ್ಕೆ ತೊಂದರೆಯಾಗುವದು. ಸಾಯಂದೇವ! ನಿನ್ನ ಈ ನಾಗನಾಥನ ಕೀರ್ತಿ ಪಸರಿಸುವದು" ಎಂದು ಹೇಳಿ ಗುರುಗಳು ಅವರೆಲ್ಲರನ್ನು ಕುರಿತು— "ನೀವೆಲ್ಲರು ಸಂಗಮಕ್ಕೆ ಹೋಗಿ ಸ್ನಾನ ಮಾಡಿ ತೀವ್ರವೇ ಬರಬೇಕು. ಈ ಊರಿನ ಜನರು ಇಂದು ಅನಂತನ ಪೂಜೆಗೆಂದು ಇಲ್ಲಿಗೆ ಬರುವವರಿರುವರು" ಎಂದು ಹೇಳಿ ಕಳಿಸಿದರು. ಸಾಯಂದೇವನೂ ಅವನ ಪರಿವಾರದವರೂ ಸಂಗಮ ಸ್ನಾನ ಮಾಡಿದರು. ವಿಧಿವತ್ತಾಗಿ ಅಶ್ವತ್ಥನನ್ನು ಪೂಜಿಸಿ ಗುರುಮಠಕ್ಕೆ ಬಂದರು. ಶ್ರೀ ಗುರುಗಳು— "ಸಾಯಂದೇವ! ಇಂದು ಅನಂತಚತುರ್ದಶಿಯು, ಇದು ಶ್ರೇಷ್ಠ ವ್ರತಗಳಲ್ಲೊಂದಾಗಿದೆ. ಎಲ್ಲ ಬ್ರಾಹ್ಮಣರಿಂದ ಕೂಡಿಕೊಂಡು ಅನಂತನ ಪೂಜೆ ಮಾಡಬೇಕಾಗುವದು" ಎಂದೆನ್ನಲು ಸಾಯಂದೇವನು— "ಸ್ವಾಮಿ! ನಮಗೆ ನೀವೇ ಅನಂತನೆಂಬ ಭಾವನೆ ದೃಢವಾಗಿದೆ. ಅದರಂತೆ ನೀವೇ ನಮ್ಮ ಗುರುವು, ನಿಮ್ಮ ಚರಣ ಪೂಜೆಯೇ ನಮಗೆ ವ್ರತವು" ಎಂದು ಹೇಳಿದನು. ಆಗ ಗುರುಗಳು— ಸಾಯಂದೇವ! ಕೌಂಡಿಣ್ಯ ಮಹರ್ಷಿಗಳು ಈ ಅನಂತನ ವ್ರತವನ್ನು ಪ್ರಖ್ಯಾತಗೊಳಿಸಿದರು" ಎಂದು ಹೇಳಲು ಸಾಯಂದೇವನು— "ಸ್ವಾಮಿ! ಈ ವ್ರತವನ್ನಾಚರಿಸುವ ವಿಧಿ-ವಿಧಾನಗಳೇನು? ಮೊದಲು ಈ ವ್ರತವನ್ನಾಚರಿಸಿ ಅದಾರು ಫಲ ಪಡೆದರು? ಈ ವ್ರತಕ್ಕೆ ಅನಂತನೇ

ದೈವತವೇಕಾದನು? ಈ ವ್ರತದಿಂದ ಲಭಿಸುವ ಪುಣ್ಯಗಳೇನು? ಎಂದು ಕೇಳಿದನು, ಗುರುಗಳು ಅವನ ಉತ್ಸುಕತೆಯನ್ನರಿತು ಅವನಿಗೆ ಅನಂತನ ವ್ರತದ ಆಚರಣೆಗಳನ್ನು ಹೇಳಹತ್ತಿದರು.''

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೪೩ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಶ್ರೀ ಗುರುಗಳು ಸಾಯಂದೇವನನ್ನು ಕುರಿತು— ''ಸಾಯಂದೇವ! ಪೂರ್ವದಲ್ಲಿ ಅನಂತ ವ್ರತವನ್ನು ಬಹು ಜನರು ಆಚರಿಸುತ್ತಿದ್ದರು. ಪಾಂಡುರಾಜನ ಪುತ್ರ ಯುಧಿಷ್ಠಿರನು ಈ ಶ್ರೇಷ್ಠವಾದ ವ್ರತವನ್ನು ಆಚರಿಸಿ ಕಳೆದು ಹೋಗಿದ್ದ ತನ್ನ ರಾಜ್ಯವನ್ನು ದೊರಕಿಸಿದನು. ಅವರು ವನವಾಸದಲ್ಲಿರುವಾಗ ಶ್ರೀ ಕೃಷ್ಣನು ಅವರ ಕಷ್ಟ ಪರಿಹರಿಸುವದಕ್ಕೆಂದು ಅಲ್ಲಿಗೆ ಬರಲು ಅವರೆಲ್ಲರು ತಮ್ಮ ಕಷ್ಟಗಳನ್ನು ತೋಡಿಕೊಂಡರು. ತಮ್ಮ ದುಃಖನಿವಾರಣೆಯ ಉಪಾಯ ಕೇಳಿದರು. ಕೃಷ್ಣನು ಅವರಿಗೆ ಅನಂತನ ವ್ರತವನ್ನು ಆಚರಿಸುವದಕ್ಕೆ ಬೋಧಿಸಿದನು. ಅವನು ಹೇಳಿದ್ದೇನೆಂದರೆ—

ಧರ್ಮರಾಜ! ಎಲ್ಲ ವ್ರತಗಳಲ್ಲಿ ಅನಂತನ ವ್ರತವು ಶ್ರೇಷ್ಠವಿದೆ. ಆ ವ್ರತದಲ್ಲಿಯ ಅನಂತ ದೇವತೆ ಸರ್ವವ್ಯಾಪಿಯಾದ ನಾನೇ ಆಗಿರುವೆನು. ಭೂಭಾರ ಹರಣಕ್ಕಾಗಿ ನಾರಾಯಣನಾದ ನಾನೇ

ವಸುದೇವನಿಂದ ಕೃಷ್ಣನೆಂದು ಅವತರಿಸಿದೆನು. ನಾನೇ ಅನಂತನೆಂಬದರಲ್ಲಿ ನೀವು ಸಂಶಯತಾಳಬೇಡಿರಿ. ತ್ರಿಮೂರ್ತಿಗಳು, ಚಂದ್ರ ಸೂರ್ಯರು, ಹದಿನಾಲ್ಕು ಲೋಕಗಳು, ದ್ವಾದಶಾದಿತ್ಯರು, ಏಕಾದಶ ರುದ್ರರು, ಸಪ್ತಸಮುದ್ರ ಸಪ್ತರ್ಷಿ, ಸಪ್ತಪರ್ವತ ಭೂಮಿಯ ಮೇಲಿನ ಎಲ್ಲ ವೃಕ್ಷಗಳು, ಆಕಾಶದಲ್ಲಿಯ ನಕ್ಷತ್ರಗಳು, ದಶದಿಕ್ಕುಗಳು, ಸಪ್ತಪಾತಾಳಗಳು, ಭೂರ್ಭುವಾದಿಲೋಕಗಳು, ಅಣುರೇಣು ತೃಣಕಾಷ್ಠಗಳು ಇವುಗಳಲ್ಲೆಲ್ಲ ಅನಂತನಾದ ನಾನೇ ವ್ಯಾಪಿಸಿರುವೆನು. ಏನೊಂದು ಸಂಶಯ ತಾಳದೆ ನನ್ನನ್ನು ಪೂಜಿಸು. ಇದೇ ನಿಮಗೆ ಯೋಗ್ಯವಾದ ವ್ರತವು" ಎಂದು ಹೇಳಲು ಯುಧಿಷ್ಠಿರನು ವ್ರತವಿಧಾನವನ್ನೂ ಈ ವ್ರತವು ಮೊದಲು ಯಾರಿಂದ ಆಚರಿಸಲ್ಪಟ್ಟಿತೆಂಬುದನ್ನೂ ಕೇಳಿದನು. ಅದಕ್ಕೆ ಕೃಷ್ಣನು— ''ರಾಜಾ! ಭಾದ್ರಪದ ಶುಕ್ಲ ಚತುರ್ದಶಿಯ ದಿವಸ ಈ ವ್ರತವನ್ನು ಆಚರಿಸಬೇಕು. ಇನ್ನು ಈ ವ್ರತವನ್ನು ಮೊದಲು ಆಚರಿಸಿದವರ ಕಥೆಯನ್ನು ಹೇಳುವೆನು ಕೇಳು.

"ಕೃತಯುಗದಲ್ಲಿ ಸುಮಂತನೆಂಬ ವಸಿಷ್ಠಗೋತ್ರದ ಬ್ರಾಹ್ಮಣನಿದ್ದನು. ಭೃಗುಋಷಿಯ ಮಗಳಾದ ದೀಕ್ಷೆ ಎಂಬವಳು ಆತನ ಧರ್ಮಪತ್ನಿಯು ಆಕೆಯಿಂದ ಒಂದು ಕನ್ಯೆ ಜನಿಸಿತು. ಅದಕ್ಕೆ ಸುಶೀಲೆ ಎಂದು ಹೆಸರಿಟ್ಟರು. ಮುಂದೆ ಕೆಲವು ವರ್ಷಗಳ ನಂತರ ಸುಮಂತನ ಪತ್ನಿ ದೀಕ್ಷೆಯು ಮೃತಿಹೊಂದಿದಳು. ಸುಮಂತನು ವಿಧುರನಾದುದರಿಂದ ಅವನ ಕರ್ಮಗಳಿಗೆ ವ್ಯತ್ಯಯಬರಹತ್ತಿತು. ಅದರಿಂದ ಅವನು ಕರ್ಕಶೆ ಎಂಬವಳನ್ನು ಲಗ್ನಮಾಡಿಕೊಂಡನು. ಆಕೆ ಹೆಸರಿಗನುಗುಣವಾಗಿ ಕರ್ಕಶೆಯೇ ಆಗಿದ್ದಳು. ಆಕೆ ತನ್ನ ಮಲಮಗಳು ಸುಶೀಲೆಯೊಡನೆ ದಿನದಿನವೂ ಕಲಹಮಾಡುತ್ತಿದ್ದಳು. ಸುಮಂತನಿಗೆ ತನ್ನ ಈ ಹೆಂಡತಿಯ

ಸ್ಥಿತಿಗತಿಯು ಸರಿಬಾರದಾಯಿತು. ಮಗಳು ಮದುವೆಗೆ ತಕ್ಕವಯದವಳಾದ್ದರಿಂದ ಆಕೆಯನ್ನು ಯೋಗ್ಯ ವರನಿಗೆ ಕೊಟ್ಟು ವಿವಾಹಮಾಡಿಕೊಟ್ಟು ಗೃಹಕಲಹ ದೂರ ಮಾಡಬೇಕೆಂದು ವಿಚಾರ ಮಾಡಿದನು. ವರ ಶೋಧನೆ ನಡೆಯಿಸಿದನು. ಕಡೆಗೆ ಕೌಂಡಿಣ್ಯನೆಂಬ ಬ್ರಾಹ್ಮಣನಿಗೆ ಕನ್ಯಾದಾನ ಮಾಡಿಕೊಟ್ಟನು.

ಸುಶೀಲೆಯ ವಿವಾಹವಾಯಿತು. ಆಷಾಢ-ಶ್ರಾವಣ ಮಾಸಗಳು ಪ್ರಾಪ್ತವಾಗುವವೆಂದು ಸುಶೀಲೆಯನ್ನು ಆಕೆಯ ಪತಿ ಕೌಂಡಿಣ್ಯನನ್ನೂ ಮನೆಯಲ್ಲಿಯೇ ಇಟ್ಟುಕೊಂಡನು. ಗೃಹ ಕಲಹವು ನಿತ್ಯವೂ ಇದ್ದಿತು. ಕೌಂಡಿಣ್ಯನು ತನ್ನ ಅತ್ತೆಯ ವರ್ತನಕ್ಕೆ ಬೇಸತ್ತನು. ಆಷಾಢ-ಶ್ರಾವಣಗಳು ಕಳೆದವು. ಇನ್ನು ಹೆಂಡತಿಯೊಡನೆ ಹೊರಡಬೇಕೆಂಬ ವಿಚಾರದಲ್ಲಿಯೇ ಕೌಂಡಿಣ್ಯನು ಸುಮಂತನನ್ನು ಕುರಿತು— 'ಇನ್ನು ನಾವು ಹೋಗುವೆವು. ಒಂದೇ ಮನೆಯಲ್ಲಿ ಇಬ್ಬರು ತಪಸ್ವಿಗಳಿರಬಾರದು. ನಾನು ಸತಿಯೊಡನೆ ಹೋಗಿ ಇಲ್ಲಿಯೇ ಸಮೀಪದಲ್ಲಿ ಆಶ್ರಮ ಕಟ್ಟಿಕೊಂಡು ಇರುವೆವು" ಎಂದು ಹೇಳಲು ಸುಮಂತನು ಭಾದ್ರಪದ ಶುದ್ಧ ತ್ರಯೋದಶಿಯ ನಂತರ ಹೋಗಬೇಕು ಎಂದು ಹೇಳಲು ಕೌಂಡಿಣ್ಯನು ನಿರುಪಾಯನಾಗಿ ಅದುವರೆಗೆ ಮಾವನ ಮನೆಯಲ್ಲಿ ಉಳಿದನು, ತ್ರಯೋದಶಿಯು ಬಂದಿತು, ಕೌಂಡಿಣ್ಯನು ಸತಿ ಸಹಿತ ಹೊರಟು ನಿಂತನು. 'ಮಗಳು ಗಂಡನ ಮನೆಗೆ ಹೋಗುವಳು. ಆಕೆಯ ಉಡಿ ತುಂಬಿ ಸಿಧಾಸಾಮಗ್ರಿಯನ್ನು ಸಿದ್ಧ ಮಾಡಿಕೊಡು' ಎಂದು ಸುಮಂತನು ಹೆಂಡತಿಗೆ ಹೇಳಿದನು. ಆಕೆ ಮನೆಯಲ್ಲಿಯ ಧಾನ್ಯಾದಿಗಳನ್ನೆಲ್ಲ ಒಂದು ಕೋಣೆಗೆ ಒಯ್ದಿಟ್ಟುಕೊಂಡು ತಾನೂ ಒಳಗೇ ಕುಳಿತಳು. ಹಾಗು ಬಾಗಿಲು ತೆಗೆಯಲಿಕ್ಕೆ ಬಾರದಂತೆ ಕಲ್ಲು-ಗುಂಡು ಆನಿಸಿದಳು, ಸುಮಂತನು ಹೆಂಡತಿಯ ಈ ವರ್ತನೆಯನ್ನು ಧಿಕ್ಕರಿಸಿ ಅಡಿಗೆಯ ಮನೆಯಲ್ಲಿ ಅತ್ತಿತ್ತ ನೋಡಿದನು.

ಕಾಳು ಕಡಿಗಳೇನೂ ಇದ್ದಿಲ್ಲ. ಒಂದೆಡೆಗೆ ಗುಂಪಿಯಾಗಿದ್ದ ಗೋದಿಯ ತವುಡನ್ನು ತಂದು ಮಗಳ ಉಡಿಗೆ ಹಾಕಿದನು. ಹಾಗು ಅಳಿಯ–ಮಗಳು ಇವರಿಬ್ಬರನ್ನೂ ಒಂದು ಬಂಡಿಯಲ್ಲಿ ಕುಳ್ಳಿರಿಸಿ ಕಳಿಸಿಕೊಟ್ಟನು.

ಮಧ್ಯಾಹ್ನವಾಯಿತು, ಕೌಂಡಿಣ್ಯನ ಬಂಡಿ ಒಂದು ನದೀ ತೀರಕ್ಕೆ ಬಂದಿತು. ಅಲ್ಲಿ ಬಂಡಿಯನ್ನು ನಿಲ್ಲಿಸಿ ಕೌಂಡಿಣ್ಯನು ಸ್ನಾನ ಅನುಷ್ಠಾನಕ್ಕೆಂದು ನದಿಗೆ ಇಳಿದನು, ಸುಶೀಲೆಯು ಅಲ್ಲಿಯೇ ಅಡ್ಡಾಡುತ್ತ ತೀರದಲ್ಲಿಯ ಒಂದು ರಮ್ಯ ವನ ನೋಡಿದಳು. ಅಲ್ಲಿ ಕೆಲ ಸುವಾಸಿನಿಯರು ಅನಂತನ ವ್ರತ ನಡೆಯಿಸಿದ್ದರು. ಸುಶೀಲೆಯ ಅವರಲ್ಲಿಗೆ ಹೋದಳು, ಅವರು ಮಾಡುತ್ತಿರುವ ವ್ರತ ಪೂಜೆ ನೋಡಿದಳು ಅವಳು— “ಇದಾವವ್ರತ? ಇದರ ಫಲವೇನು? ” ಎಂದು ಆ ಸುವಾಸಿನಿಯರನ್ನು ಕೇಳಿದಳು. ಅವರು ‘ಇದು ಅನಂತನ ವ್ರತವು, ಸಕಲ ಸೌಭಾಗ್ಯ ಸಿರಿಯನ್ನು ಸದ್ಯದಲ್ಲಿಯೆ ಒದಗಿಸಿ ಕೊಡುವದು’ ಎಂದು ಹೇಳಿದರು. ಸುಶೀಲೆಯು ಆ ವ್ರತವನ್ನು ತಾನು ಕೈಕೊಳ್ಳುವ ತನ್ನ ಆಸೆಯನ್ನು ಅವರಿಗೆ ತಿಳಿಸಿದಳು. ಆಗಲೇ ಅವರು ಸಂತೋಷದಿಂದ ಸುಶೀಲೆಯಿಂದ ವಿಧಿಪೂರ್ವಕ ಅನಂತನ ವ್ರತ ಮಾಡಿಸಿದರು, ಸುಶೀಲೆಯು ಹರ್ಷದಿಂದ ವ್ರತವನ್ನು ಮುಗಿಸಿ ಅನಂತನ ದಾರವನ್ನು ಕೊರಳಲ್ಲಿ ಧರಿಸಿಕೊಂಡಳು. ಹಾಗು ಆಗಲೇ ತನ್ನ ಬಂಡಿಯ ಹತ್ತಿರ ಬಂದಳು. ಕೌಂಡಿಣ್ಯನೂ ಅನುಷ್ಠಾನ ಮುಗಿಸಿಕೊಂಡು ಬಂದನು. ನಂತರ ಇಬ್ಬರೂ ಬಂಡಿಯನ್ನು ಹತ್ತಿಕೊಂಡು ಮುಂದೆ ಸಾಗಿದರು.

ತುಸು ದೂರ ಹೋಗುವಷ್ಟರಲ್ಲಿ ಅವರೆದುರಿಗೆ ಒಂದು ಸುಂದರ ನಗರವು ಅಮರಾವತಿಯ ಸಡಗರವನ್ನು ಮೀರಿ ಶೋಭಿಸುತ್ತಿರುವದು ಅವರಿಗೆ ಕಾಣಿಸಿತು, ಇವರ ಬಂಡಿಯು ಮುಂದಮುಂದವಾಗಿ

ಉತ್ತರಕಡೆಗೆ ಸಾಗಿತ್ತು. ನಂತರ ಕೆಲ ನಿಮಿಷಗಳಲ್ಲಿ ಆ ನಗರದಿಂದ ಜನಜಂಗುಳಿಯು ವೈಭವದ ಮೆರವಣಿಗೆ ಸಿದ್ಧಪಡಿಸಿಕೊಂಡು ಕೌಂಡಿಣ್ಯನ ಬಂಡಿಯ ಎದುರಿಗೇ ಬಂದರು, ಅವರಲ್ಲಿಯ ಹಿರಿಯರು ಮುಂದೆ ಬಂದು ಬಂಡಿಯಲ್ಲಿದ್ದ ಕೌಂಡಿಣ್ಯನಿಗೆ ವಂದಿಸಿದರು ಹಾಗು ಅವರು— "ಎಲೈ ತಪಸ್ವಿಗಳೇ! ನೀವು ನಮ್ಮ ರಾಜ್ಯದ ದೊರೆಗಳು. ಅಗೋ! ಎದುರಿನಲ್ಲಿ ಕಾಣುವದು ನಿಮ್ಮ ರಾಜಧಾನಿಯು ಹಾಗು ಉನ್ನತ ಗೋಪುರಗಳುಳ್ಳ ಮಂದಿರವೇ ನಿಮ್ಮ ರಾಜಭವನವು. ಮಹಾನ್ ಪ್ರಭುಗಳು ನಗರ ಪ್ರವೇಶ ಮಾಡಬೇಕು. ಹಾಗು ರಾಜ್ಯ ಸೂತ್ರಗಳನ್ನು ಕೈಕೊಂಡು ಪ್ರಜೆಗಳಾದ ನಮ್ಮನ್ನು ಮಕ್ಕಳೋಪಾದಿ ರಕ್ಷಿಸಬೇಕು" ಎಂದು ಬೇಡಿಕೊಂಡು ಕೌಂಡಿಣ್ಯ ದಂಪತಿಗಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ನಗರ ಪ್ರವೇಶ ಮಾಡಿಸಿದರು, ಮೆರವಣಿಗೆಯಿಂದ ಕರೆದೊಯ್ದು ರಾಜಭವನಕ್ಕೊಳಿಸಿದರು. ಆ ದಿನವೇ ಕೌಂಡಿಣ್ಯನು ರಾಜ್ಯ ಸಿಂಹಾಸನಾರೂಢನಾಗಿ ರಾಜ್ಯ ಕಾರಭಾರ ನಡೆಯಿಸಿದನು. ಮುಂದೆ ಕೆಲ ದಿನಗಳವರೆಗೂ ಕೌಂಡಿಣ್ಯ ರಾಜನ ರಾಜ್ಯದಾಡಳಿತೆಯು ಸರಿಯಾಗಿಯೂ ಸರಾಗವಾಗಿಯೂ ನಡೆಯಿತು, ಸಿರಿಸಂಪತ್ತಿನಿಂದ ಸಮೃದ್ಧಿಯನ್ನು ಹೊಂದಿತು.

ಒಂದು ದಿನ ಕೌಂಡಿಣ್ಯ ರಾಜನು ರಾಜಮಂದಿರದಲ್ಲಿ ಸತಿ ಸುಶೀಲೆಯೊಡನೆ ವಿಲಾಸಮಗ್ನನಾಗಿರುವಾಗ ಆಕೆ ಧರಿಸಿದ ಅನಂತನ ದಾರವನ್ನು ನೋಡಿ ಇದೇನು? ಎಂದು ಕೇಳಿದನು. ಅದಕ್ಕೆ ಸುಶೀಲೆಯು ಆ ದಾರದ ವೃತ್ತಾಂತವನ್ನೆಲ್ಲ ಅವನಿಗೆ ಅರುಹಿದಳು. ಅವನು ಅದನ್ನು ನಂಬದೆ— 'ಇದು ಪತೀ ವಶೀಕರಣಕ್ಕಾಗಿ ನೀನು ಧರಿಸಿದ ದಾರವು'' ಎಂದು ಸಿಟ್ಟಾಗಿ ಆಕೆಯ ಆ ದಾರವನ್ನು

ಹರಿದು ಬೆಂಕಿಯಲ್ಲಿ ಹಾಕಿದನು. ಕೂಡಲೆ ಅವಳು ಸುಡುತ್ತಿರುವ ದಾರವನ್ನು ಹಾಲು ಹೊಯ್ದು ಆರಿಸಿ ತಕ್ಕೊಂಡಳು.

ಕೌಂಡಿಣ್ಯನ ಈ ಕೃತಿಯ ದುಷ್ಪರಿಣಾಮವು ಮರುದಿನವೇ ಒದಗಿತು, ವೈರಿ ರಾಜರು ಬಂದು ಅವನ ರಾಜಧಾನಿ ಮುತ್ತಿ ಸೂರೆ ಮಾಡಿದರು, ರಾಜಸಿಂಹಾಸನದಿಂದ ಕೌಂಡಿಣ್ಯನನ್ನು ದೂಡಿ ಎಲ್ಲ ಸಂಪತ್ತನ್ನು ಅಪಹರಿಸಿದರು. ಕೌಂಡಿಣ್ಯನು ದರಿದ್ರನಾಗಿ ರಾಜಧಾನಿಯಿಂದ ಹೆಂಡತಿ ಸಹಿತ ಹೊರಬಿದ್ದನು. ಅಡವೀ ಸೇರಿದನು. ಸುಶೀಲೆಯು— 'ಅನಂತನ ದಾರವನ್ನು ಸುಟ್ಟುದರ ಪರಿಣಾಮವಿದು' ಎಂದು ಅವನಿಗೆ ಹೇಳಿದಳು. ಆಕೆಯ ಹೇಳಿಕೆಯು ನಿಜವೆಂದು ಗ್ರಹಿಸಿ ಆಗಲೇ ಅವನು ಅನಂತನನ್ನು ಕಂಡೇ ತೀರುವೆನು, ಅವನು ದರ್ಶನ ಕೊಡದಿದ್ದರೆ ಪ್ರಾಣ ಬಿಡುವೆನು' ಎಂದು ನಿರ್ಧರಿಸಿ ಅಲ್ಲಲ್ಲಿ ಸುತ್ತಾಡಹತ್ತಿದನು. ಬೆಟ್ಟಿಯಾದವರನ್ನು 'ಅನಂತನೆಲ್ಲಿ?' ಎಂದು ಕೇಳುತ್ತ ನಡೆದನು.

ಹೀಗೆ ಸಿಕ್ಕಸಿಕ್ಕವರನ್ನು 'ಅನಂತನೆಲ್ಲಿ?' ಎಂದು ಕೇಳುತ್ತಿರುವಾಗ ಒಂದು ಫಲ–ಪುಷ್ಪಭರಿತ ಮಾವಿನ ಮರವನ್ನು ಕೇಳಿದನು, ಒಂದು ಹುಲ್ಲಡವಿಯಲ್ಲಿಯ ಆಕಳವನ್ನು ಕೇಳಿದನು. ಅದರಂತೆ ಎರಡು ತುಂಬಿದ ಸರೋವರ, ಒಂದು ಎತ್ತು, ಒಂದು ಆನೆ, ಒಂದು ಕತ್ತೆ ಇವೆಲ್ಲವನ್ನೂ ಕೇಳಿದನು. ಎಲ್ಲವೂ 'ಅನಂತನನ್ನು ನಾವು ಕಂಡಿಲ್ಲ ಅವನನ್ನು ನೀನೇ ತಂದು ನಮಗೆ ತೋರಿಸು' ಎಂದು ಹೇಳಿದವು. ಕಡೆಗೆ ನಿರಾಶನಾಗಿ ಪ್ರಾಣಬಿಡಲು ಸಿದ್ಧನಾದನು. ಆಗ ಒಬ್ಬ ಬ್ರಾಹ್ಮಣನು ಬಂದು—'ಕೌಂಡಿಣ್ಯನೆ ! ನಿನಗೆ ಅನಂತನನ್ನು ತೋರಿಸುವೆನು ಬಾ' ಎಂದು ಅವನನ್ನು ಕೈಹಿಡಿದು ಕರಕೊಂಡು ಒಂದು ಗವಿಯಲ್ಲಿ ಸೇರಿದನು.

ಅಲ್ಲಿ ಆ ಬ್ರಾಹ್ಮಣನು ತಾನೇ ಅನಂತನ ಪ್ರಕಟಸ್ವರೂಪದಿಂದ ನಿಂತು 'ನಾನೇ ಅನಂತನು' ಎಂದು ಹೇಳಿದನು. ಕೌಂಡಿಣ್ಯನು ಅನಂತನ ಸ್ವರೂಪ ನೋಡಿ ಸ್ತೋತ್ರ ಮಾಡಿದನು. ತನ್ನ ದುಷ್ಕೃತಿಗೆ ಕ್ಷಮೆ ಬೇಡಿಕೊಂಡನು. ಆಗ ಅನಂತನು ಅವನಿಗೆ ಮೆಚ್ಚಿ— ಧರ್ಮಬುದ್ಧಿ, ದಾರಿದ್ರ್ಯನಾಶ ಹಾಗು ಶಾಶ್ವತ ವೈಕುಂಠವಾಸ ಈ ಮೂರು ವರಗಳನ್ನು ಕೊಟ್ಟನು" ಎಂದು ಕೃಷ್ಣನು ಧರ್ಮರಾಜನಿಗೆ ಹೇಳಿದನು. ಕೃಷ್ಣನ ಹೇಳಿಕೆಯಂತೆ ಧರ್ಮರಾಜನು ಅನಂತನ ವ್ರತಮಾಡಿ ರಾಜ್ಯವನ್ನು ಪಡೆದನು" ಎಂದು ಶ್ರೀ ಗುರುಗಳು ಸಾಯಂದೇವನಿಗೆ ಹೇಳಿ ನೀನೂ ಈ ವ್ರತ ಆಚರಿಸು" ಎಂದು ಹೇಳಿದರು. ಗುರುಗಳ ಆಜ್ಞೆಯಿಂದ ಸಾಯಂದೇವನು ಅಂದು ವ್ರತ ಮುಗಿಸಿದನು. ಮರುದಿನ ತನ್ನ ಮಂದಿ ಊರಿಗೆ ಕಳಿಸಿ ತಾನು ಗುರು ಸೇವೆ ಮಾಡುತ್ತ ಗಾಣಗಾಪುರದಲ್ಲಿಯೇ ಇರಹತ್ತಿದನು.''

ಈ ಪ್ರಕಾರ ಸಿದ್ಧಮುನಿಯು ಹೇಳಿದನು.

—o—

## ಳಳನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನಿಗೆ ಶ್ರೀ ಗುರುಚರಿತ್ರೆಯ ಅಘಟಿತ ಮಹಿಮೆಯನ್ನು ಬೋಧಿಸುವ ಹಲವು ಘಟನೆಗಳಲ್ಲಿ ಒಂದಾದ ನೇಕಾರನ ಶ್ರೀಶೈಲ ಯಾತ್ರೆಯ ವರ್ಣನೆಯನ್ನು ಹೇಳಹತ್ತಿದನು.

"ನಾಮಧಾರಕ ! ಶ್ರೀ ಗುರುಗಳ ಮಠದಲ್ಲಿ ಬಹು ಜನ ಭಕ್ತರು ಗುರು ಸೇವೆ ಮಾಡಿಕೊಂಡು ಇದ್ದರು. ಅವರಲ್ಲಿ ಗಾಣಗಾಪುರದ ನೇಕಾರನೊಬ್ಬನಿದ್ದನು. ಆವನು ನಿತ್ಯವೂ ಮೂರು ಪ್ರಹರ ಕಾಲ ತನ್ನ ಮನೆಯ ಕೆಲಸ-ಬೊಗಸೆಗಳನ್ನು ಮುಗಿಯಿಸಿ ಗುರುಮಠಕ್ಕೆ ಬರುವನು. ಅಲ್ಲಿ ಮಠದ ಅಂಗಳವನ್ನು ಸ್ವಚ್ಛಗೊಳಿಸುವನು. ಬಳಿಕ ದೂರಿಂದಲೇ ಗುರುಗಳಿಗೆ ನಮಸ್ಕರಿಸಿ ಮನೆಗೆ ಹೋಗುವನು, ಇದರಂತೆಯೇ ಅವನು ಎಷ್ಟೋ ದಿವಸಗಳ ವರೆಗೆ ವರ್ತಿಸಿದನು.

ಹೀಗಿರಲು ಒಂದು ಸಾರೆ ಶಿವರಾತ್ರಿಯ ವ್ರತ ದಿನವು ಪ್ರಾಪ್ತವಾಯಿತು. ಊರಿನ ಭಾವಿಕರ ನೇಕರು ಶ್ರೀಶೈಲಯಾತ್ರೆಗೆ ಹೊರಟರು. ನೇಕಾರನ ತಾಯಿ-ತಂದೆ ಮೊದಲಾದವರೂ ಆ ಯಾತ್ರೆಗೆ ಹೋಗು ವವಕ್ಕೆ ಸಿದ್ಧರಾದರು. ಅವರು 'ನಮ್ಮೊಡನೆ ಯಾತ್ರೆಗೆ ಬರಬೇಕೆಂದು ನೇಕಾರನಿಗೆ ಆಗ್ರಹದಿಂದ ಹೇಳಿದರು. ಆವನು ಅವರ ಕರೆಯನ್ನು ನಿರಾಕರಿಸಿದನು. ಇಷ್ಟೇ ಅಲ್ಲ, "ನೀವು ತಿಳಿಗೇಡಿಗಳು, ಯಾತ್ರೆಗಾಗಿ ಊರೂರು ತಿರುಗುವ ಹುಚ್ಚು ನಿಮಗೆ ಹಿಡಿದಿರುವದು. ನನ್ನ ಶ್ರೀಶೈಲವು ಇಲ್ಲಿಯೇ ಇರುವದು. ಶ್ರೀ ಗುರುವು ನನ್ನ ಮಲ್ಲಿಕಾರ್ಜುನನು, ಗುರುಮಠವೇ ನನ್ನ ಶ್ರೀಶೈಲಗಿರಿಯು. ಇಂತು ಇಲ್ಲಿರುವ ಶ್ರೀಶೈಲವನ್ನು ಬಿಟ್ಟು ಆ ದೂರಿನ ಶ್ರೀಶೈಲಕ್ಕೆ ಬರಲಾರೆನು, ನೀವೇ ಹೋಗಿರಿ'' ಎಂದು ಹೇಳಿದನು. ಎಲ್ಲರೂ ಅವನನ್ನು ಧಿಕ್ಕರಿಸಿ ತಾವು ಶ್ರೀಶೈಲಕ್ಕೆ ಹೋದರು. ಊರಲ್ಲಿ ನೇಕಾರನೊಬ್ಬನೇ ತನ್ನ ಮನೆಯಲ್ಲಿ ಉಳಿದನು. ಎಲ್ಲರೂ ಹೋದ ಮೇಲೆ ಗುರು ಮಠಕ್ಕೆ ಬಂದು ಅಲ್ಲಿಯೇ ಗುರುಭಜನೆಯಲ್ಲಿ ಹೆಚ್ಚು ಕಾಲ ಕಳೆದನು. ಶ್ರೀ ಗುರುಗಳು— "ಎಲೋ ! ಊರಿನ ಬಹು ಜನರೂ ನಿನ್ನ ಮನೆಯವರೂ ಶ್ರೀಶೈಲ ಯಾತ್ರೆಗೆ ಹೋದರೆಂದಮೇಲೆ ನೀನೇಕೆ ಹೋಗಲಿಲ್ಲ?"

ಎಂದು ಕೇಳಲು ನೇಕಾರನು— "ಸ್ವಾಮಿ! ನನ್ನ ಶ್ರೀಶೈಲ ಯಾತ್ರೆಯು ನಿಮ್ಮ ಚರಣದಲ್ಲಿಯೇ ಇರುವದು. ಅಲ್ಲಿ ಕಲ್ಲಿನ ದೇವರಿಗೆ ಹೋಗುವವರು ಮೂರ್ಖರು ಎಂದು ನುಡಿದನು.

ಬಳಿಕ ಶಿವರಾತ್ರಿಯ ದಿನ ಗುರುಗಳು ಮಧ್ಯಾಹ್ನದಲ್ಲಿ ಸಂಗಮಕ್ಕೆ ಸ್ನಾನಕ್ಕೆ ಹೊರಟರು. ನೇಕಾರನೂ ಅವರೊಂದಿಗೆ ಹೋದನು. ಗುರುಗಳು ಸ್ನಾನ ಮಾಡಿ ಅಶ್ವತ್ಥ ಸನ್ನಿಧಿಯಲ್ಲಿ ಕುಳಿತಿರುವಾಗ ನೇಕಾರನೂ ಸ್ನಾನ ಮಾಡಿ ಬಂದು ಅವರೆದುರಿನಲ್ಲಿ ಕೈಮುಗಿದುಕೊಂಡು ನಿಂತನು. ಗುರುಗಳು ಅವನಿಗೆ— "ನೀನು ಎಂದಾದರೂ ಶ್ರೀಶೈಲ ನೋಡಿರುವಿಯಾ?" ಎನ್ನಲು ಅವನು ನೋಡಿಲ್ಲ' ಎಂದು ಹೇಳಿದನು. ಗುರುಗಳು— ಹಾಗಾದರೆ ಇಲ್ಲಿ ಬಾ, ನಿನಗೆ ಶ್ರೀಶೈಲ ಗಿರಿಯ ದರ್ಶನ ಮಾಡಿಸುವೆನು, ನೀನು ಕಣ್ಣುಗಳನ್ನು ಮುಚ್ಚಿಕೊಂಡು ಈ ಪಾದುಕೆಗಳನ್ನು ಗಟ್ಟಿಯಾಗಿ ಹಿಡಿದು ಕುಳಿತು ಬಿಡು" ಎಂದು ಹೇಳಲು ವಿಶ್ವಾಸ ಭಾವನೆಯಿಂದ ಅವನು ಹಾಗೇ ಮಾಡಿದನು. ಕ್ಷಣಮಾತ್ರದಲ್ಲಿ ಅವರೊಡನೆ ನೇಕಾರನು ನಿಜವಾಗಿ ಶ್ರೀಶೈಲಗಿರಿಗೇ ಬಂದನು. ಅಲ್ಲಿಯ ಪಾತಳಗಂಗೆಯ ತೀರದಲ್ಲಿ ಕುಳಿತನು. ಇದುವರೆಗೆ ಅವನಿಗೆ ಇದಾವದೂ ಗೊತ್ತಾಗಲಿಲ್ಲ. ಬಳಿಕ ಗುರುಗಳು— 'ಕಣ್ಣು ತೆರೆ ಪಾದುಕೆಗಳನ್ನು ಬಿಡು' ಎಂದು ಹೇಳಿದ ಕೂಡಲೆ ಅವನು ಕಂದೆರೆದು ನೋಡುತ್ತಾನೆ! ಶ್ರೀಶೈಲಗಿರಿಯ ಯಾತ್ರೆ, ಜನದಟ್ಟಣೆ, ಶಿಖರ ದರ್ಶನ, ಇವೆಲ್ಲವನ್ನು ನೋಡಿ ತನ್ನಲ್ಲಿ— 'ನಾನೇನು ಸ್ವಪ್ನದಲ್ಲಿರುವೆನೋ! ನಿಜವಾಗಿ ಶ್ರೀಶೈಲದಲ್ಲಿರುವೆನೋ!' ಎಂದು ಭ್ರಾಂತಿಗೊಂಡು ಕುಳಿತನು. ಆಗ ಗುರುಗಳು ಅವನ ಅಂತಸ್ಥವನ್ನರಿತು —"ಎಲೋ! ಇದೇನು? ಭ್ರಾಂತಿಷ್ಟನಂತೆ ಸುಮ್ಮನೆ ಕುಳಿತಿ? ಬೇಗನೇ ತೀರ್ಥವಿಧಿ-ಸ್ನಾನ ತೀರಿಸಿಕೊಂಡು ದೇವದರ್ಶನ

ಪಡೆದು ಬಾ! '' ಎಂದನು. ಶ್ರೀ ಗುರುಗಳ ನಿರೋಪದಂತೆ ಅವನು ಸ್ನಾನಕ್ಕಾಗಿ ಹೋದನು. ಅಲ್ಲಿಯೇ ಅವನಿಗೆ ಅವನ ತಾಯಿ-ತಂದೆ ಮೊದಲಾದವರೂ ಊರಿನವರೂ ಬೆಟ್ಟಿಯಾದರು. ಅವರು ಈ ನೇಕಾರ ನನ್ನು ನೋಡಿ— "ಎಲೋ ನೀನು ಆದಾವ ಮಾರ್ಗದಿಂದ ಬಂದಿ? ನಮ್ಮೊಡನೆ ಬಾರದೆ ನೀನೊಬ್ಬನೇ ಬರುವದು ಇದು ನಿನ್ನ ಧರ್ಮವೇ? " ಎಂದು ಕೇಳಲು ಅವನು ತಾಯಿ-ತಂದೆಗಳಿಗೆ— "ನಾವು ಇಂದಿನ ಮಧ್ಯಾಹ್ನಕ್ಕೆ ಗಾಣಗಾಪುರದಿಂದ ಹೊರಟೆವು, ಗುರುಸಮಾಗಮದಿಂದ ಇಲ್ಲಿಗೆ ಬಂದು ಒಂದೇ ಗಳಿಗೆ ಹೊತ್ತಾಯಿತು" ಎಂದನು. ಎಲ್ಲರೂ ಅವನ ಮಾತಿಗೆ ನಕ್ಕು— 'ಎಂದಿದ್ದರೂ ಇವನು ಇಂಥ ಸುಳ್ಳು ಹೇಳುವವನೇ! ನಮ್ಮ ಹಿಂದಿಂದೆ ನಮಗೆ ಕಾಣದಂತೆ ಬಂದು ಈಗ ಹೀಗೆ ಅಸತ್ಯ ನುಡಿಯುವನು. ಒಡಿವಾರದಿಂದ ಆ ಸಂಬದ್ಧ ನುಡಿಗಳನ್ನಾಡುವನು' ಎಂದು ತಮ್ಮತಮ್ಮೊಳಗೆ ಮಾತಾಡಹತ್ತಿದರು. ನೇಕಾರನು ಅವರ ಮಾತಿಗೆ ಲಕ್ಷ್ಯಕೊಡದೆ ಸ್ನಾನಮಾಡಿದನು, ಬಿಲ್ವದಳಗಳನ್ನೂ ಹೂವು ಅಕ್ಷತೆಗಳನ್ನೂ ತೆಗೆದುಕೊಂಡು ಮಲ್ಲಿಕಾರ್ಜುನನ ಪೂಜೆಗೆಂದು ದೇವಾಲಯಕ್ಕೆ ಹೋದನು. ಜನದಟ್ಟಣೆಯಲ್ಲಿಂದ ಹಾದು ಗರ್ಭ ಗುಡಿ ಸೇರಿದನು. ಶ್ರೀ ಮಲ್ಲಿಕಾರ್ಜುನನ ಲಿಂಗ ನೋಡಹತ್ತಿದನು. ಆ ಲಿಂಗಸ್ಥಾನದಲ್ಲಿ ಅವನಿಗೆ ಗುರುಮೂರ್ತಿಯೇ ಕಾಣಿಸಹತ್ತಿತು. ವಿಸ್ಮಯಪಟ್ಟು ಮನೋಭಾವದಿಂದ ಪೂಜಿಸಿದನು. ಅವನು 'ಶ್ರೀ ಗುರುಮೂರ್ತಿಯೇ ಮಲ್ಲಿಕಾರ್ಜುನನು' ಎಂಬ ನಿರ್ಧಾರದಿಂದ ದೇವನದ ಪ್ರಸಾದ ಸ್ವೀಕರಿಸಿ ಗುರುಗಳ ಪಲ್ಲಿಗೆ ಬಂದನು. ಗುರುಗಳು— 'ಎಲೋ! ಇಲ್ಲಿಯೇ ಇರುವಿಯೋ! ಎಂದು ಕೇಳಿದರು. ಅವನು— "ಸ್ವಾಮಿ! ನನಗೆ ಪ್ರತ್ಯೇಕ ಲಿಂಗವೇ ಕಾಣಲಿಲ್ಲ. ನೀವೇ ಆ ಲಿಂಗದ ಮೇಲೆ ನನಗೆ ಕಂಡಿರಿ,

ಶ್ರೀ ಗುರುಗಳು ಸನ್ನಿಧಿಯಲ್ಲಿದ್ದರೂ ಈ ನಮ್ಮ ಜನರು ಕಷ್ಟಪಟ್ಟು ಇಲ್ಲಿ ಬರುವರೆಂದಮೇಲೆ ಅದೆಂಥ ಮೂರ್ಖರು? ಗುರುದೇವಾ! ಪರಮೇಶ್ವರನಾದ ನಿನ್ನ ಮಹಿಮೆ ಅದಾರಿಗೂ ತಿಳಿಯದು. ಈ ಮೂಢರೆಲ್ಲ ನಿನ್ನನ್ನು ಬಿಟ್ಟು ಇಲ್ಲಿಗೇಕೆ ಬರುವರೋ ಇದರ ಕಾರಣ ನನಗೆ ತಿಳಿಯದು'' ಎಂದೆನ್ನಲು ಗುರುಗಳು—''ಎಲೋ ಈಶ್ವರನು ಎಲ್ಲೆಡೆಯಲ್ಲಿ ಪರಿಪೂರ್ಣನಿದ್ದರೂ ಈ ಸ್ಥಾನ ಮಹಿಮೆಯು ಪೂಜ್ಯವಿರುವದು'' ಎಂದೆನ್ನಲು ನೇಕಾರನು–– ''ಸ್ವಾಮಿ! ನೀವು ಪೂರ್ಣ ಬ್ರಹ್ಮರಿದ್ದು ಈ ಸ್ಥಾನ ಮಹಿಮೆ ಪೂಜ್ಯವೆಂದು ಹೇಳುವಿರಿ ಇದು ಹೇಗೆ?'' ಎಂದು ಕೇಳಿದನು. ಶ್ರೀ ಗುರುಗಳು ಅವನಿಗೆ ಶ್ರೀಶೈಲ ಸ್ಥಾನ ಮಹಿಮೆ ಬೋಧಿಸುವ ಸ್ಕಂದ ಪುರಾಣದ ಕಥೆಯೊಂದನ್ನು ಹೇಳಿದರು. ಆ ಕಥೆಯಾವುದೆಂದರೆ––

ಪೂರ್ವಕಾಲದಲ್ಲಿ ವಿಮರ್ಷಣನೆಂಬ ಕಿರಾತ ರಾಜನಿದ್ದನು. ಅವನು ಶೂರನು. ಮೃಗಯಾ ವ್ಯಸನಿಯು, ಸ್ತ್ರೀರತನು, ಮಾಂಸಭಕ್ಷಕನು. ಇವೆಲ್ಲ ದುರ್ಗುಣಯುಕ್ತನಾಗಿದ್ದರೂ ಅವನು ಈಶ್ವರ ಪೂಜಾಸಕ್ತನಾಗಿದ್ದನು. ಕುಮುದ್ವತಿ ಎಂಬವಳು ಆ ರಾಜನ ಪತ್ನಿಯು. ಆಕೆ ಸುಶೀಲೆಯಾಗಿದ್ದಳು. ತನ್ನ ಪತಿಯ ಹೀನ ಗುಣಗಳನ್ನು ಹಾಗು ಈಶ್ವರ ಭಕ್ತಿಯನ್ನು ಚೆನ್ನಾಗಿ ಅರಿತಿದ್ದಳು. ಒಂದು ದಿನ ಆಕೆಯು ಪತಿಗೆ–– 'ನೀನು ದುರ್ಗುಣಿಯಾಗಿದ್ದರೂ ಶಿವಭಕ್ತನಾಗಿರುವಿ ಇದರ ಕಾರಣವೇನು? ಎಂದು ಕೇಳಿದಳು. ಕೂಡಲೆ ಅವನಲ್ಲಿ ಜ್ಞಾನೋದಯವಾಯಿತು. ತನ್ನ ಹಿಂದಿನ ಏಳು ಜನ್ಮಗಳ ವೃತ್ತವನ್ನು ಆಕೆಗೆ ಹೇಳಿ ಕೊನೆಯಲ್ಲಿ ನಾನು ಶ್ವಾನ ಜನ್ಮ ತಾಳಿದ್ದೆನು ಅದರ ಸ್ವಭಾವವೇ ಈ ನನ್ನಲ್ಲಿ ಶೇಷವಾಗಿ ಉಳಿದಿದೆ' ಎಂದು ಹೇಳಿದನು ಪತಿಯು ದಿವ್ಯಜ್ಞಾನ ನೋಡಿ ಆಕೆ ತನ್ನ ಜನ್ಮಾಂತರ ವೃತ್ತಾಂತ ಕೇಳಿದಳು.

ಅದಕ್ಕೆ ಅವನು— 'ನೀನು ಪೂರ್ವಜನ್ಮದಲ್ಲಿ ಪಾರಿವಾಳವಾಗಿದ್ದಿ, ಬಾಯಲ್ಲಿ ಮಾಂಸ ಹಿಡಿದುಕೊಂಡು ಹೋಗುವಾಗ ನಿನ್ನನ್ನು ಒಂದು ಹದ್ದು ಬೆನ್ನಟ್ಟಿತು. ಆಗ ನೀನು ಹದ್ದಿಗೆ ಬೆದರಿ ಹಾರುತ್ತ ಮುಂದೆ ಹೋದಿ. ಕಡೆಗೆ ಶ್ರೀಶೈಲ ಶಿಖರವನ್ನು ಸುತ್ತರಿದು ಸುತ್ತರಿದು ಬೇಸತ್ತು ಬಿದ್ದು ಹದ್ದಿನ ಹೊಡತಕ್ಕೆ ಸಿಕ್ಕು ಮೃತಳಾದಿ, ನೀನು ಆ ಗಿರಿಯ ಶಿಖರದ ಪ್ರದಕ್ಷಿಣೆ ಹಾಕಿದ ಫಲವೇ ಈಗ ನಿನ್ನನ್ನು ರಾಜನ ಪತ್ನಿಯನ್ನಾಗಿಸಿದೆ" ಎಂದು ಹೇಳಿದನು. ಅದನ್ನು ಕೇಳಿ ಕುಮುದ್ವತಿಯು ತನ್ನ ಹಾಗು ಆತನ ಮುಂಬರುವ ಜನ್ಮಗಳ ವೃತ್ತಾಂತ ಕೇಳಿದಳು. ವಿಮರ್ಷಣನು ಆಕೆಗೆ ಮುಂದಿನ ಆರು ಜನ್ಮಗಳ ತಮ್ಮಿಬ್ಬರ ಜನ್ಮ ಸಂಗತಿಯನ್ನು ಹೇಳಿ ಏಳನೆಯ ಜನ್ಮದ ವಿಷಯಕ್ಕೂ ಹೇಳಿದನು. ಅವನು— "ಕುಮುದ್ವತಿ ! ನಮ್ಮ ಏಳನೆಯ ಜನ್ಮಗಳಲ್ಲಿ ನಾನು ಪಾಂಡ್ಯದೇಶದ ರಾಜನಾಗಿ ಜನ್ಮಿಸುವೆನು. ಚೆಲುವನಾದ ನಾನು 'ಪದ್ಮವರ್ಣ' ಎಂಬ ಹೆಸರಿನಿಂದ ಮೆರೆಯುವೆನು, ನೀನು ವೈದರ್ಭರಾಜನ ಮಗಳಾಗಿ ಜನಿಸಿ ಸುಮತಿ ಎಂಬ ಹೆಸರಿನಿಂದ ಶೋಭಿಸುವಿ, ಆಗ ನೀನು ಸ್ವಯಂವರದಿಂದ ನನ್ನನ್ನು ವರಿಸುವಿ, ನಾನು ಬಹು ದಿನ ರಾಜ್ಯವಾಳುವೆನು, ಮಾಸಮಾಸಕ್ಕೆ ಯಜ್ಞಮಾಡುವೆನು, ಸಕಲ ದೇಶ ಗೆಲ್ಲುವೆನು, ವೇದ ಮಂತ್ರಗಳನ್ನೂ ಶಾಸ್ತ್ರಗಳನ್ನೂ ಕಲಿಯುವೆನು. ದೇವ–ದ್ವಿಜರನ್ನು ಅರ್ಚಿಸುವೆನು, ಅಗ್ರಹಾರಗಳನ್ನಿಡಿಸುವೆನು. ವಾರ್ಧಕ್ಯಹೊಂದಿ ದಾನ-ಧರ್ಮಾದಿ ನೀಡಿ ಮಗನಿಗೆ ಪಟ್ಟಗಟ್ಟುವೆನು. ನಂತರ ಆಶ್ರಮ ಸ್ವೀಕರಿಸಿ ಅಗಸ್ತ್ಯ ಋಷಿಗಳ ಕಡೆಯಿಂದ ಬ್ರಹ್ಮಜ್ಞಾನೋಪದೇಶ ಪಡೆದು ಮೋಕ್ಷಪ್ರಾಪ್ತಿಗೀಡಾಗುವೆನು. ಕುಮುದ್ವತಿ ! 'ಸುಮತಿ' ಎಂಬ ಹೆಸರಿನ ನಿನ್ನನ್ನು ಆಗ ನನ್ನ ದೇಹಾವಸಾನದ ಸಮಯದಲ್ಲಿ ದಿವ್ಯವಿಮಾನದಲ್ಲಿ ಕುಳ್ಳಿರಿಸಿಕೊಂಡು ಸ್ವರ್ಗಕ್ಕೆ

ಹೋಗುವೆನು. ಈಶ್ವರ ಪೂಜೆ, ಶಿವರಾತ್ರಿವ್ರತ, ಶ್ರೀಶೈಲಗಿರಿ ಇವುಗಳ ಮಹಿಮೆಗಳು ಅವರ್ಣನೀಯ ವಾಗಿರುವವು" ಎಂದು ವಿಮರ್ಷಣನು ಕುಮದ್ವತಿಗೆ ಹೇಳಿದನು. ಮತ್ತು ಆಕೆಯಿಂದ ಸಹಿತವಾಗಿ ಶಿವರಾತ್ರಿ ಯಾತ್ರೆಗೆಂದು ಶ್ರೀಶೈಲಕ್ಕೆ ಬಂದನು" ಈ ಪ್ರಕಾರ ಗುರುಗಳು ನೇಕಾರನಿಗೆ ಹೇಳಿ ನೀನೂ ಈಶ್ವರ ಪೂಜೆ ಮಾಡು'' ಎಂದರು. ನೇಕಾರನು— "ಗುರುದೇವ ! ನಿನ್ನ ಪೂಜೆಯೇ ನನಗೆ ಎಲ್ಲ ದೇವತೆಗಳ ಪೂಜೆಯಿಂದ ಮಿಗಿಲು' ಎಂದು ಹೇಳಿದನು. ಗುರುಗಳು ನಗುತ್ತ ಅವನನ್ನು ಮೊದಲಿನಂತೆಯೇ ಜೊತೆಗೆ ಕರಕೊಂಡು ನಿಮಿಷಾರ್ಧದಲ್ಲಿ ಸಂಗಮಕ್ಕೆ ಬಂದರು.

ಗುರುಗಳು ಶ್ರೀಶೈಲಕ್ಕೆ ಹೋದನಂತರ ಶಿಷ್ಯರು ಅವರನ್ನು ಸಂಗಮದಲ್ಲಿ ಶೋಧಿಸಿದರು. ಅವರು ಎಲ್ಲಿಯೂ ಕಾಣಲಿಲ್ಲ. ಎಲ್ಲರೂ ವಿಚಾರಕ್ಕೊಳಗಾಗಿದ್ದರು. ಅಷ್ಟರಲ್ಲಿ ನೇಕಾರನು ಸಂಗಮದಿಂದ ಮಠಕ್ಕೆ ಬಂದು–ಶಿಷ್ಯರನ್ನು ಗುರುಗಳ ಬಳಿಗೆ ಕಳಿಸಿದನು.

ಕ್ಷೇತ್ರವಿಧಿಯನ್ನು ಮಾಡಿಸಿಕೊಂಡು ಬಂದ ನೇಕಾರನನ್ನು ಊರ ಜನರು ನೋಡಿ 'ನೀನಾವ ಕ್ಷೇತ್ರಕ್ಕೆ ಹೋಗಿದ್ದಿ? ' ಎಂದು ನಗುತ್ತ ಕೇಳಲು ನೇಕಾರನು 'ಶ್ರೀಶೈಲಕ್ಕೆ' ಎಂದು ಅವರಿಗೆ ಉತ್ತರ ಕೊಟ್ಟನು. ಮತ್ತು ಅವರಿಗೆ ವಿಭೂತಿ ಪ್ರಸಾದ ಕೊಟ್ಟನು. ಜನರು ವಿಸ್ಮಿತರಾದರು. 'ಮಧ್ಯಾಹ್ನದಲಿ ಊರಲ್ಲಿಯೇ ಇದ್ದವನು ಶ್ರೀಶೈಲಕ್ಕೆ ಹೋಗುವನೆಂತು? ಬರುವನೆಂತು? ಇವನ ಹೇಳಿಕೆ ನಿರರ್ಥಕವೂ ಅಸತ್ಯಾಸ್ಪಿತವೂ ಆಗಿರುವದು" ಎಂದು ತಮ್ಮತಮ್ಮಲ್ಲಿ ಮಾತಾಡಿದರು.

ಮುಂದೆ ಹದಿನೈದು ದಿನಕ್ಕೆ ಶ್ರೀಶೈಲಕ್ಕೆ ಹೋದವರೆಲ್ಲರು ಊರಿಗೆ ಬಂದರು, ನೇಕಾರನು

ಶ್ರೀಶೈಲಕ್ಕೆ ಬಂದುದು ನಿಜವೆಂದು ಅವರು ಹೇಳಿದರು, ಎಲ್ಲರಿಗೂ ವಿಸ್ಮಯ! ಆನಂದ!!"

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

# ೪೫ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ಸಿದ್ಧಮುನಿಯು ನಾಮಧಾರಕನಿಗೆ— 'ನಾಮಧಾರಕ ! ಶ್ರೀಗುರುಗಳ ಅಗಾಧ ಘಟನೆಯನ್ನು ವ್ಯಕ್ತಪಡಿಸುವ ಇನ್ನೊಂದು ಸಂಗತಿಯನ್ನು ಹೇಳುವೆನು ಕೇಳು ಎಂದು ಹೇಳಹತ್ತಿದನು.

"ಒಂದು ದಿನ 'ನಂದಿ' ಎಂಬ ಹೆಸರಿನ ಬ್ರಾಹ್ಮಣನು ಶ್ರೀಗುರುಗಳ ಸನ್ನಿಧಿಗೆ ಬಂದನು. ಅವನ ಮೈತುಂಬಾ ಶ್ವೇತ ಕುಷ್ಠರೋಗವು ವ್ಯಾಪಿಸಿದ್ದಿತು, ಗುರುಗಳ ಕಡೆಗೆ ಬರುವ ಮೊದಲು ಅವನು ತನ್ನ ರೋಗ ನಿವಾರಣೆಗಾಗಿ ತುಳಜಾಪುರಕ್ಕೆ ಹೋಗಿದ್ದನು. ಅಲ್ಲಿ ಅವನು ಒಂದೇ ಸವನೆ ಮೂರು ವರ್ಷಗಳವರೆಗೆ ಅಂಬಾ ಭವಾನಿಯನ್ನು ಆರಾಧಿಸಿದನು. ಆದರಿಂದ ಅವನಿಗೆ ಏನೂ ಫಲವಾಗಲಿಲ್ಲ. ಕಟ್ಟಕಡೆಗೆ ದೇವಿಯು ಅವನ ಹಟವನ್ನು ನೋಡಿ— "ಬ್ರಾಹ್ಮಣಾ ! ನೀನು ಇಲ್ಲಿ ವ್ಯರ್ಥ ಕಷ್ಟಪಡಬೇಡ' 'ಚಂದಲಾ ಪರಮೇಶ್ವರಿ'ಯ ಸ್ಥಾನಕ್ಕೆ ಹೋಗಿ ಅಲ್ಲಿ ನೀನು ರೋಗನಿವಾರಣೆಗೆ ಪ್ರಯತ್ನಿಸು" ಎಂದು ಸ್ವಪ್ನದೃಷ್ಟಾಂತದಿಂದ ಸೂಚಿಸಿದಳು. ಕೂಡಲೆ ಅವನು ಆ ಜಗದಂಬೆಯ ಸ್ಥಾನದಿಂದ ಹೊರಟು 'ಚಂದಲಾಪರಮೇಶ್ವರಿ' ಸ್ಥಾನಕ್ಕೆ ಬಂದನು. ಎಳು'

ತಿಂಗಳುಗಳ ವರೆಗೆ ಉಪವಾಸವಿದ್ದು ಪುರಶ್ಚರಣೆ ಮಾಡಿದನು. ಆ ದೇವಿಯೂ ಕೂಡ ಆ ಬ್ರಾಹ್ಮಣನ ಕಷ್ಟವನ್ನು ನೋಡದೆ— 'ನೀನು ತೀವ್ರವೇ ಗಾಣಗಾಪುರಕ್ಕೆ ಹೋಗು, ಅಲ್ಲಿ ದತ್ತಾವತಾರಿಯಾದ 'ನೃಸಿಂಹ ಸರಸ್ವತಿ'ಯರು ವಾಸವಾಗಿರುವರು, ಎಂದು ಸ್ವಪ್ನದಿಂದ ತಿಳಿಸಿದಳು. ಆಗ ಅವನು ಆ ದೇವಿಯ ಸಮ್ಮುಖದಲ್ಲಿ ನಿಂತು— "ಮಹಾ ಮಹಿಮಳೆ ! ನಾನು ಆರೇಳು ತಿಂಗಳು ನಿನ್ನ ಪ್ರಸನ್ನತೆಯ ಕುರಿತು ಉಪವಾಸದಿಂದ ಶ್ರಮವಹಿಸಿದೆನು. ತುಳಜಾಪುರದ ಅಂಬಾದೇವಿಯಂತೆ ನೀನೂ ನನ್ನನ್ನು ಕಡೆಗಣಿಸಿ ಈಗ ಗಾಣಗಾಪುರಕ್ಕೆ ದೂಡುವಿ, ನನ್ನ ರೋಗ ದೂರಮಾಡುವ ಸಾಮರ್ಥ್ಯವು ದೇವತೆಗಳಾದ ನಿಮ್ಮಿಬ್ಬರಲ್ಲಿಯೂ ಇಲ್ಲದಂತಾಯಿತಲ್ಲವೇ ? ದೇವತೆಗಳಾದ ನಿಮ್ಮಿಂದ ಸಾಧ್ಯವಾಗದ ಸಂಗತಿಯು ಆ ಗಾಣಗಾಪುರದ ಸಾಧುವಿನಿಂದ ಅದೆಂತು ಸಾಧ್ಯವು ? ಅವನು ನಿಮ್ಮಂತೆ ದೇವವರ್ಗದವನಲ್ಲ. ಮಾನವನು. ಇದನ್ನು ನೀವೇಕೆ ತಿಳಿಯಲಿಲ್ಲ. ನಿಮ್ಮ ದರ್ಶನದ ಆರಂಭದಲ್ಲಿ ಇಷ್ಟೊಂದು ನನಗೆ ಸೂಚಿಸಿದ್ದರೆ ನಾನೇಕೆ ನಿಮ್ಮ ಬಳಿಯಲ್ಲಿ ಕಷ್ಟಪಡುತ್ತಿದ್ದೆನು ! ದೇವಿ !' ನಾನು ನಿನ್ನ ಸ್ವಪ್ನ ಸೂಚನೆಯನ್ನು ಮನ್ನಿಸುವದಿಲ್ಲ. ಪುನಃ ಪುರಶ್ಚರಣೆ ಮಾಡುವೆನು. ನೀನು ನನ್ನ ರೋಗನಿವಾರಣೆ ಮಾಡದಿದ್ದರೆ ಇಲ್ಲಿಯೇ ಉಪವಾಸಬಿದ್ದು ಪ್ರಾಣಬಿಡುವೆನು. "ಎಂದು ಆ ಚಂದಲಾದೇವಿಯ ಮುಂದೆ ತಳವೂರಿ ಕುಳಿತುಬಿಟ್ಟನು. ಬ್ರಾಹ್ಮಣನ ಈ ನಿರ್ಧರಣೆ ತಿಳಿದು ದೇವಿಯು ತನ್ನ ಅರ್ಚಕರಿಗೆ- 'ಈ ಬ್ರಾಹ್ಮಣನನ್ನು ಈ ಸ್ಥಾನದಿಂದ ಹೊರಗಟ್ಟಿರೆಂ'ದೂ, ಆ ಬ್ರಾಹ್ಮಣನಿಗೆ- 'ನನ್ನಲ್ಲಿಂದ' ನೀನು ಗಾಣಗಾಪುರಕ್ಕೆ ಹೋಗಲಿಕ್ಕೆ ಬೇಕೆಂದೂ ಸ್ವಪ್ನ ಮುಖಾಂತರ ಸೂಚಿಸಿದಳು. ದೇವಿಯು ಸೂಚಿಸಿದ ಸ್ವಪ್ನದಂತೆ ಅರ್ಚಕರು ಇವನನ್ನು ಹೊರಹಾಕಲು ಬರುವಷ್ಟರಲ್ಲಿಯೇ ಸಂದಿಯು ತನ್ನ ಗಂಟು-ಗದಡಿಕಟ್ಟಿಕೊಂಡು ಮಹಾದ್ವಾರದಾಟಿದ್ದನು.

ಹಾಗೆಯೇ ಅವನು ಮುಂದೆ ಸಾಗಿ ಗಾಣಗಾಪುರಕ್ಕೆ ಹೋದನು ಸ್ವಾಮಿದರ್ಶನಕ್ಕೆಂದು ಗುರುಮಠದ ಅಂಗಳ ಸೇರಿದನು, ಗುರುಗಳು ಸಂಗಮಕ್ಕೆ ಹೋಗಿರುವರೆಂದು ಮಠದ ಶಿಷ್ಯರು ಹೇಳಿದರು. ನಂದಿಯು ಅವರು ಬರುವ ಮಾರ್ಗನೋಡುತ್ತ ಆ ಅಂಗಳದಲ್ಲಿಯೇ ನಿಂತುಕೊಂಡನು.

ಸ್ವಲ್ಪಹೊತ್ತಿನಲ್ಲಿ ಗುರುಗಳು ಸಂಗಮದಿಂದ ಬಂದರು ಶಿಷ್ಯರು ದರ್ಶನಕ್ಕೆಂದು ಕುಷ್ಠರೋಗಿ ಬ್ರಾಹ್ಮಣನೊಬ್ಬನು ಬಂದು ಅಂಗಳದಲ್ಲಿ ನಿಂತಿರುವನೆಂದು ಶ್ರುತಪಡಿಸಿದರು. ಗುರುಗಳು ಅವನನ್ನು ಕರೆಯಿಸಿ— "ಎಲೈ ಬ್ರಾಹ್ಮಣ ! ನಿನ್ನ ವೃತ್ತಾಂತವೇನು? ಸಂದೇಹಗ್ರಸ್ತನಾಗಿ ನೀನು ಇಲ್ಲಿಗೇಕೆ ಬಂದಿ?" ಎಂದು ಕೇಳಲು ನಂದಿಯು ತನ್ನ ವೃತ್ತಾಂತ ತಿಳಿಸಿ ತನ್ನ ರೋಗ ನಿವಾರಣೆಗೆ ದೇವಿಯರಿಬ್ಬರ ಆರಾಧನೆಮಾಡಿ ನಿಷ್ಫಲತೆ ಹೊಂದಿದೆನೆಂದು ಹೇಳಿದನು. ಮತ್ತು ಚಂದಲಾಪರಮೇಶ್ವರಿಯ ಎದುರು ಅಜ್ಞಾನದಿಂದ ನಾನು ಸಂಶಯ ತಾಳಿದುದು ನಿಜ, ಕ್ಷಮಿಸಬೇಕು." ಎಂದು ಕೈಮುಗಿದು ಪ್ರಾರ್ಥಿಸಿದನು. ಭಕ್ತವತ್ಸಲ ಶ್ರೀ ಗುರುಗಳು ಆಗಲೇ ಸೋಮನಾಥ ಬ್ರಾಹ್ಮಣನನ್ನು ಕರೆದು— "ಸೋಮನಾಥ ! ನೀನು ಈಗಲೆ ಈ ನಂದಿ ಬ್ರಾಹ್ಮಣನನ್ನು ಸಂಗಮಕ್ಕೆ ಕರೆದುಕೊಂಡು ಹೋಗು ಅಲ್ಲಿ ಇವನಿಂದ ಸಂಕಲ್ಪಮಾಡಿಸಿ ಪುಷ್ಕರ ತೀರ್ಥದಲ್ಲಿ ಸ್ನಾನ ಮಾಡಿಸು, ಅಶ್ವತ್ಥ ಪ್ರದಕ್ಷಿಣೆ ಹಾಕಿಸು. ನಂತರ ಇವನು ಧರಿಸಿದ ಎಲ್ಲ ಅರಿವೆ ಅಂಚಡಿಗಳನ್ನು ದೂರ ಚೆಲ್ಲಿಸಿ ಹೊಸ ವಸ್ತ್ರಗಳನ್ನು ಧರಿಸುವದಕ್ಕೆ ಕೊಡು. ಪಾರಣೆಗಾಗಿ ಶೀಘ್ರ ಇವನನ್ನು ಇಲ್ಲಿಗೆ ಕರಕೊಂಡು ಬಾ" ಎಂದು ಅಪ್ಪಣೆ ಕೊಡಲು ಸೋಮನಾಥನು ಆ ನಂದಿಯನ್ನು ಸಂಗಮಕ್ಕೆ ಕರಕೊಂಡು ಹೋದನು, ಪುಷ್ಕರ ಜಲದಲ್ಲಿ ಸಂಕಲ್ಪ ಪೂರ್ವಕ ಸ್ನಾನಮಾಡಿ

ಸಿದನು. ನಂದಿಯು ಸ್ನಾನಮಾಡಿ ಹೊರಗೆ ಬಂದಕೂಡಲೆ ಅವನ ಮೈಬಣ್ಣವು ಒಮ್ಮೆಲೇ ಬದಲಾಯಿತು. ಬಂಗಾರ ವರ್ಣದ ಶರೀರದಿಂದ ಯುಕ್ತನಾದ ಆ ನಂದಿಯು ಆನಂದದಿಂದ ಅಶ್ವತ್ಥ ಪ್ರದಕ್ಷಿಣೆ ಮಾಡಿದನು. ಹೊಸವಸ್ತ್ರ ಧರಿಸಿ ಹಳೆಯುರಿವೆಗಳನ್ನು ದೂರ ಚಲ್ಲಿಕೊಟ್ಟು ಸೋಮನಾಥನೊಡನೆ ಮಠಕ್ಕೆ ಬಂದನು. ಅವನ ಜೀರ್ಣ ವಸ್ತ್ರಗಳು ಬಿದ್ದ ನೆಲವು ಆಗಲೇ ಸೌಳೇರಿ ನಿರುಪಯುಕ್ತವಾಯಿತು.

ನಂದಿಯು ಮಠಕ್ಕೆ ಬಂದು ಶ್ರೀ ಗುರುಗಳಿಗೆ ಒಳ್ಳೆ ಹರ್ಷದಿಂದ ನಮಸ್ಕರಿಸಿ ನಿಂತನು, ಗುರುಸ್ತೋತ್ರ ಮಾಡಿದನು. ಗುರುಗಳು–– 'ಬ್ರಾಹ್ಮಣ! ನಿನ್ನ ಶರೀರವನ್ನೆಲ್ಲ ನಿರೀಕ್ಷಿಸಿಕೊಳ್ಳು' ಎಂದು ಹೇಳಲು ನಂದಿಯು ನೋಡಿಕೊಂಡು–– "ಇನ್ನೂ ಕಿಂಚಿತ್ ಶ್ವೇತಚಿಹ್ನ ಉಳಿದಿದೆ ಎಂದು ಉದಾಸೀನತೆಯಿಂದ ಹೇಳಿದನು. ಗುರುಗಳು–– 'ನಂದೀ! ನೀನು ಸಂದೇಹ ಗ್ರಸ್ತನಾದುದಕ್ಕೆ ಆ ಕಲೆಯುಳಿದಿದೆ ಇದರ ನಿವಾರಣೆಗಾಗಿ ನೀನು ನಮ್ಮ ಸಂಬಂಧವಾಗಿ ಅನೇಕ ಪದ-ಪದ್ಯ ರಚಿಸುತ್ತ, ಹಾಡುತ್ತ ಕಾಲ ಕಳೆದರೆ ಅಲ್ಪಾವಧಿಯಲ್ಲಿ ಅದು ನಿಶ್ಶೇಷವಾಗುವದು" ಎನ್ನಲು ನಂದಿಯು ತನ್ನಲ್ಲಿ ಕಾವ್ಯರಚನೆಯ ಸಾಮರ್ಥ್ಯವಿಲ್ಲೆಂದು ನಿರಭಿಮಾನದಿಂದ ಹೇಳಿದನು. ಗುರುಗಳು– ಅದನ್ನರಿತು ಅವನ ಮುಖದಲ್ಲಿ ವಿಭೂತಿಯನ್ನು ಪ್ರೋಕ್ಷಿಸಿದರು. ಕೂಡಲೆ ನಂದಿಯಲ್ಲಿ ಕಾವ್ಯಪ್ರತಿಭೆಯುತ್ಪನ್ನವಾಗಿ ಗುರುಸ್ತವನೆ ನಡೆಯಿಸಿದನು, ಅವನಿಗೆ ಆಗಲೇ ಪರಮಾರ್ಥ ಜ್ಞಾನೋದಯವಾಯಿತು. ಶ್ರೀ ಗುರು ಮಹಿಮೆ ಬೀರುವ ಅನೇಕಾನೇಕ ಕವಿತೆಗಳನ್ನು ಬರೆದು ಗುರುಗಳ ಸಂತುಷ್ಟತೆಗೆ ಪಾತ್ರನಾದನು. ಗುರುಗಳು ತಮ್ಮ ಭಕ್ತರಿಂದ ನಂದಿಬ್ರಾಹ್ಮಣನನ್ನು 'ಕವೀಶ್ವರ' ಎಂಬ ಗೌರವ ಪದವಿಯಿಂದ ಮರ್ಯಾದೆ ಮಾಡಿಸಿದರು. ಹೀಗೆ ನಂದಿಯು

ಕವೀಶ್ವರ ನೆಂಬ ನಾಮಧೇಯ ಹೊಂದಿ ಶ್ರೀ ಗುರುಗಳ ಸೇವೆ ಮಾಡುತ್ತ ಗಾಣಗಾಪುರದ ಗುರು ಮಠದಲ್ಲಿಯೇ ಉಳಿದನು."

ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

---o---

# ೪೬ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು— 'ನಾಮಧಾರಕನೆ! ಈ ಮೊದಲು ನಿನಗೆ 'ಕವೀಶ್ವರ ನಂದಿ' ಯು ಶ್ರೀ ಗುರುಗಳ ಕೃಪೆಯಿಂದ ಮಹಾರೋಗ ಮುಕ್ತನಾದುದನ್ನು ಹೇಳಿದೆನು. ಅವನ ತರುವಾಯ ಇನ್ನೊಬ್ಬ ಕವಿಯು ಗುರುಪ್ರಸನ್ನತೆ ಪಡೆದುದನ್ನು ಹೇಳುವೆನು ಕೇಳು.

'ಶ್ರೀ ಗುರುಗಳ ಮಹಿಮೆಯು ಉತ್ತರೋತ್ತರ ಪಸರಿಸಹತ್ತಿತು. ಬಹು ಜನ ಭಾವಿಕ ಭಕ್ತರು ಶುಭ-ಕಲ್ಯಾಣೋತ್ಸುಕರಾಗಿ ಶ್ರೀ ಗುರುಗಳನ್ನು ತಮ್ಮ ತಮ್ಮಲ್ಲಿಗೆ ಗೌರವಪೂರ್ವಕ ಮರ್ಯಾದೆ ಯಿಂದಲೂ ವೈಭವದಿಂದಲೂ ಬರಮಾಡಿಕೊಳ್ಳುವ ಪ್ರಥೆಯು ನಡೆಯಹತ್ತಿತು. ಗುರುಗಳ ಶುಭಾಗಮನ ವೆಂದು ಅವರು ಷೋಡಶ ಪೂಜೆಯ ಸತ್ಕಾರಗಳಿಂದ ದೊಡ್ಡ ದೊಡ್ಡ ಸಮಾರಂಭಗಳನ್ನು ಏರ್ಪಡಿಸು ತ್ತಿದ್ದರು. ಇಂಥವರಲ್ಲಿ ಹಿಪ್ಪರಿಗೆ ಗ್ರಾಮನಿವಾಸಿಗಳು ಪ್ರಾಮುಖ್ಯರಾಗಿದ್ದರು. ಒಂದು ಬಾರಿ ಆ ಗ್ರಾಮದವರೆಲ್ಲರು ಗಾಣಗಾಪುರದಿಂದ ಶ್ರೀ ಗುರುಗಳನ್ನು ತಮ್ಮ ಊರಿಗೆ ಕರೆದೊಯ್ದರು.

ಆ ಗ್ರಾಮದಲ್ಲಿ 'ಕಲ್ಲೇಶ್ವರ' ಶಿವಾಲಯವು ಇದ್ದಿತು. ಕಲ್ಲೇಶ್ವರನು ಪ್ರಭಾವೀ ದೇವನೆಂದು ಅಲ್ಲಿಯವರ ಗ್ರಹಿಕೆ. ಆ ಊರಿನ ನರಹರಿ ಎಂಬ ಬ್ರಾಹ್ಮಣನು ಕಲ್ಲೇಶ್ವರನನ್ನು ನಿತ್ಯವೂ ತ್ರಿಕಾಲದಲ್ಲಿ ಪೂಜಿಸುತ್ತಿದ್ದನು. ಅವನು ಆ ದೇವನ ನಿಸ್ಸೀಮ ಭಕ್ತನೆಂದು ಎಲ್ಲರು ಅವನನ್ನು ಮರ್ಯಾದಿಸುತ್ತಿದ್ದರು. ಮೇಲಾಗಿ ಆ ನರಹರಿಯಲ್ಲಿ ಕಾವ್ಯಪ್ರತಿಭೆಯು ಸ್ವಾಭಾವಿಕವಿದ್ದುದರಿಂದ ಅವನ ಮರ್ಯಾದೆಗೆ ಅದೂ ಒಂದು ಕಾರಣವಾಗಿತ್ತು. ಅವನು ಕಲ್ಲೇಶ್ವರನ ಪೂಜೆಯಲ್ಲಿ ದಿನಾಲು ಒಂದೊಂದು ನೂತನ ಕವಿತೆ ರಚಿಸಿ ಕಲ್ಲೇಶ್ವರನನ್ನು ಸ್ತುತಿಸುತ್ತಿದ್ದನು. ಕಲ್ಲೇಶ್ವರನ ಹೊರತು ಉಳಿದ ಸುರ ನರರುಗಳನ್ನು ಸ್ತುತಿಸಲಾರೆನೆಂಬ ಪ್ರತಿಜ್ಞೆಯು ಅವನದಾಗಿದ್ದಿತು.

ಶ್ರೀ ಗುರುಗಳು ಅಲ್ಲಿಗೆ ಹೋಗಿ ಇಳಿದುಕೊಂಡ ನಂತರ ಗ್ರಾಮದ ಮುಖ್ಯರೆಲ್ಲ ಬಂದು ಗುರು ಪಾದ ದರ್ಶನ ಪಡೆದರು. ಆದರೆ ನರಹರಿಯು ಬರಲಿಲ್ಲ. ಕೆಲವರು ನರಹರಿಯ ಬಳಿಗೆ ಹೋಗಿ— "ಕವಿವರ್ಯರೆ! ಗಾಣಗಾಪುರದಿಂದ ಶ್ರೀ ಗುರು ಸ್ವಾಮಿಗಳು ಇಲ್ಲಿಗೆ ಆಗಮಿಸಿರುವರು. ಅವರು ಪದ-ಪದ್ಯ, ಗೀತೆ-ಗಾಯನಗಳ ಮೇಲೆ ಬಲು ಪ್ರೀತಿಯವರಿರುವರು. ನೀವು ನಮ್ಮ ನಾಡಿನ ಪ್ರಖ್ಯಾತ ಕವಿಗಳು, ಶ್ರೀ ನೃಸಿಂಹ-ಸರಸ್ವತಿ ಸ್ವಾಮಿಗಳ ಮಹಿಮೆ ಪ್ರಭಾವಗಳನ್ನೊಳಗೊಂಡ ಕೆಲವು ಕವಿತೆಗಳನ್ನು ರಚಿಸಿ ಅವರೆದುರು ಹಾಡಬೇಕು" ಎಂದು ಹೇಳಿದರು. ಅದಕ್ಕೆ ನರಹರಿಯು— ನಾನು ಕಲ್ಲೇಶನ ಹೊರತು ಅನ್ಯರನ್ನು ಸ್ತುತಿಸುವ ಪದ-ಪದ್ಯ ರಚಿಸುವದಿಲ್ಲೆಂಬ ಪಣತೊಟ್ಟಿರುವೆನು. ಅಲ್ಲದೆ ಕಲ್ಲೇಶನ ದರ್ಶನದ ಹೊರತು ಇನ್ನೊಬ್ಬರ ದರ್ಶನ ತೆಗೆದುಕೊಳ್ಳುವದು ನನಗೆ ಅಗತ್ಯವಿಲ್ಲ" ಎಂದು ಸ್ಪಷ್ಟೋಕ್ತಿಗಳನ್ನಾಡಿ

ದನು. ಅವನನ್ನು ಕೇಳಬಂದವರು ನಿರುಪಾಯರಾಗಿ ಹಿಂದಿರುಗಿದರು.

ನರಹರಿಯು ಅಂದಿನ ದಿನ ಕಲ್ಲೇಶ್ವರನ ಪೂಜೆಗೆ ಹೋಗಿ ಪೂಜೆಗೆ ಆರಂಭಿಸುವಷ್ಟರಲ್ಲಿಯೇ ಅವನಿಗೆ ಅಸಹ್ಯ ನಿದ್ರೆಯು ಬಂದಿತು, ಅವನ ಇಚ್ಛೆಯಿಲ್ಲದೆ ಅವನ ಕಣ್ಣುಗಳು ರೆಪ್ಪೆಗೂಡಿದವು. ಅವನ ಇಂದ್ರಿಯಗಳ ಬಾಹ್ಯ ವ್ಯಾಪಾರ ನಿಂತಿತು. ಕೂಡಲೆ ಅವನ ಜೀವಾತ್ಮನು ಸ್ವಪ್ನ ಸೃಷ್ಟಿಯಲ್ಲಿ ಸಂಚರಿಸ ಹತ್ತಿದನು. ಅಂದು ಅವನು ಕಂಡ ಕನಸಿನಲ್ಲಿ ಅವನ ಇಷ್ಟಲಿಂಗವಾದ ಕಲ್ಲೇಶನ ಮೇಲೆ 'ಗಾಣಗಾಪುರದ ನೃಸಿಂಹ ಸರಸ್ವತಿ' ಗಳು ಕುಳಿತಿರುವದನ್ನು ಕಂಡನು. ಮತ್ತು ತಾನು ಆ ಗುರುಗಳನ್ನು ಒಳ್ಳೆ ಭಕ್ತಿಯಿಂದ ಪೂಜಿಸುತ್ತಿರುವಂತೆಯೂ ಕನಸನ್ನು ನೋಡಿದನು. ಆ ಕನಸಿನಲ್ಲಿಯೇ ಗುರುಗಳು ಅವನನ್ನು ಕುರಿತು— "ನರಹರಿ ಕವಿಯೆ ! ಮಾನವರ ಮೇಲೆ ಭಕ್ತಿಯನ್ನಿಡದ ಹಟವುಳ್ಳ ನೀನು ನಮ್ಮನ್ನೇಕೆ ಪೂಜಿಸುವಿ?" ಎಂದು ಕೇಳಿದರೂ ಅವನು ಕನಸಿನಲ್ಲಿಯೇ ಗುರುಗಳನ್ನು ಷೋಡಶೋಪಚಾರಗಳಿಂದ ಪೂಜಿಸಿ ಗುರುಪರ ವಾದ ಪದ್ಯಗಳನ್ನು ಹಾಡಿ ನಲಿಯುತ್ತಿರುವಷ್ಟರಲ್ಲಿಯೇ ಫಕ್ಕನೆ ಎಚ್ಚರಗೊಂಡನು. ನಿದ್ರೆ ತಿಳಿದು ಕಣ್ಣೊರೆಸಿಕೊಳ್ಳುತ್ತ ಕಲ್ಲೇಶ ಲಿಂಗವನ್ನು ನೋಡಿದನು. ಸ್ವಪ್ನ ಕಂಡಂತೆ ಶ್ರೀ ಗುರುಗಳು ಲಿಂಗದ ಮೇಲೆ ಇದ್ದಿರಲಿಲ್ಲ. ಕೌತುಕಗೊಂಡನು. "ನಾನು ನಿಂದಿಸಿದ ಅವತಾರಿಕ ಮಹಾಪುರುಷನು ನಿಜವಾಗಿಯೂ ಜಗದ್ಗುರುವು. ಅವನೇ ತ್ರಿಮೂರ್ತಿಯ ಅವತಾರಿಕನು. ಇನ್ನು ನಾನು ಆ ಗುರುಗಳ ದರ್ಶನ ತೆಗೆದುಕೊಂಡೇ ಉದ್ಧೃತನಾಗಬೇಕು" ಎಂದು ಮನದಲ್ಲಿ ನಿರ್ಧರಿಸಿ ಆ ಶಿವಾಲಯದಿಂದ ಶ್ರೀ ಗುರುಗಳ ವಾಸ್ತವ್ಯವಿರುವಲ್ಲಿಗೆ ಬಂದನು. 'ಗುರುದೇವ' ದಯಮಾಡು' ಎಂದು ವಿನಯದಿಂದ ಪ್ರಾರ್ಥಿಸಿದನು.

ಶ್ರೀ ಗುರುವಿನ ಮಹಿಮೆಯನ್ನು ತನ್ನ ಕಾವ್ಯವಾಣಿಯಿಂದ ಮನವಾರೆ ದೊಗಳಿ ಹಾಡಿದನು. 'ಶ್ರೀ ಗುರುವರನೆ ! ನೀನೇ ನನ್ನ ಕಲ್ಲೇಶನು, ನಿನ್ನ ದರ್ಶನದಿಂದ ನನಗೆ ನಿಕ್ಷೇಪ ದೊರೆತ ಆನಂದದ ಪೂರ್ಮತಿ ಆನಂದವಾಗಿದೆ. ಕೃಪೆಮಾಡು' ಎಂದು ನಮಸ್ಕರಿಸಿದನು. ಶ್ರೀ ಗುರುಗಳು— "ಕವಿ ನರಹರಿಯೆ ! ನಮ್ಮ ನಿಂದೆಯನ್ನು ಮಾಡುತ್ತಿದ್ದ ನಿನ್ನಲ್ಲಿ ಒಮ್ಮಿಂದೊಮ್ಮೆ ಭಕ್ತಿಯು ಅದೆಂತು ಹುಟ್ಟಿತು?" ಎನ್ನಲು ಆತನು— "ಸ್ವಾಮಿ ! ಜ್ಯೋತಿರ್ಮಯ ಆನಂದ ಮೂರ್ತಿಯೆ ! ನಾನು ಇದುವರೆಗೆ ಕಲ್ಲೇಶ್ವರನ ಪೂಜೆಮಾಡಿ ಸಂಗ್ರಹಿಸಿದ ಪುಣ್ಯಬಲದಿಂದ ನಿಮ್ಮ ದರ್ಶನ ನನಗೆ ಒದಗಿತು. ನಾನು ಇಂದಿನ ಪೂಜೆಯಲ್ಲಿ ಲಿಂಗದ ಮೇಲೆ ನಿಮ್ಮನ್ನು ಕಂಡೆನು. ಅದು ಸ್ವಪ್ನದ ಮಾತಾಯಿತು. ಈಗ ಪ್ರತ್ಯಕ್ಷ ನಿಮ್ಮ ದರ್ಶನವಾಯಿತು. ನನ್ನ ಅಂತಃಕರಣವು ದೃಢವಾಯಿತು. ನನ್ನನ್ನು ಶಿಷ್ಯವರ್ಗದಲ್ಲಿ ಸೇರಿಸಿಕೊಳ್ಳಬೇಕು" ಎಂದು ಪ್ರಾರ್ಥಿಸಿ ಸ್ತೋತ್ರ ಮಾಡಿದನು. ಗುರುಗಳು— 'ಕವಿಯೆ ! ಕಲ್ಲೇಶ್ವರನು ನಮಗೆ ಶ್ರೇಷ್ಠನು. ನೀನು ದಿನಾಲು ಅವನನ್ನು ಪೂಜಿಸು, ನಾವು ಸತತವೂ ಅವನಲ್ಲಿಯೇ ಇರುವೆವು'' ಎಂದು ಹೇಳಿದರೂ ಆತನು ಒಡಂಬಡದೆ ಸ್ವಾಮಿಗಳೊಡನೆ ಗಾಣಗಾಪುರಕ್ಕೆ ಬಂದನು. ಕಾವ್ಯರಚನೆಯಿಂದ ಗುರುಸೇವೆ ಮಾಡುತ್ತ ಗುರುಮಠದಲ್ಲಿಯೇ ಉಳಿದನು. ನಾಮಧಾರಕ ! ನಂದಿ ಹಾಗು ನರಹರಿ ಈ ಇಬ್ಬರು ಕವಿಗಳು ಗುರುಗಳ ಕೃಪೆ ಪಡೆದರು.''

ಎಂದು ಸಿದ್ಧಮುನಿಯು ಹೇಳಿದನು.

—೦—

# ೪೭ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು— 'ನಾಮಧಾರಕನೆ! ಗುರು ಚರಿತ್ರೆಯಲ್ಲಿ ವರ್ಣಿಸಿದ ಒಂದು ಕೌತುಕದ ಸಂಗತಿಯನ್ನು ಹೇಳುವೆ. ಕೇಳು.

ಒಂದು ಬಾರಿ ದೀವಳಿಗೆಯ ಹಬ್ಬವು ಗಾಣಗಾಪುರ ಹಾಗು ಸುತ್ತಲಿನ ಕೆಲವು ಗ್ರಾಮಗಳಲ್ಲಿ ಒಳ್ಳೆ ಸಡಗರದಿಂದ ಆಚರಿಸಲ್ಪಟ್ಟಿತು. ಶ್ರೀ ಗುರುಗಳು ಎಂಟು ಗ್ರಾಮಗಳಲ್ಲಿ ಪ್ರತಿಯೊಂದು ಊರಿನಲ್ಲಿ ಭಾಗ ವಹಿಸಿದುದರಿಂದಲೇ ಆ ವರುಷ ಆಯಾ ಊರುಗಳಲ್ಲಿ ಆ ಹಬ್ಬಕ್ಕೆ ಬಲು ಕಳೆಯುಂಟಾಯಿತು. ಹೇಗೆಂದರೆ—

ಗಾಣಗಾಪುರದ ಸುತ್ತಲಿನ ಏಳು ಹಳ್ಳಿಯವರು ಏಕಕಾಲಕ್ಕೆ ಗುರುಗಳ ಸನ್ನಿಧಿಗೆ ಬಂದರು. ಗುರುಗಳನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಹಬ್ಬವನ್ನು ಉತ್ಸಾಹದಿಂದ ಆಚರಿಸಬೇಕೆಂದು ಆ ಪ್ರತಿಯೊಂದು ಹಳ್ಳಿಯ ಪ್ರಮುಖರ ವಿಚಾರವಿದ್ದಿತು. ಎಲ್ಲರೂ ಸ್ವಯಂಪ್ರೇರಿತವಾಗಿ ಬಂದಿದ್ದರು. ಒಬ್ಬರ ವಿಚಾರವು ಇನ್ನೊಬ್ಬರಿಗೆ ಗೊತ್ತಿರಲಿಲ್ಲ. ಅಕಸ್ಮಾತ್ ಏಕಸಮಯಾವಚ್ಛೇದವಾಗಿ ಅವರು ಬಂದರು, ಗುರುಗಳನ್ನು ಕಂಡರು. ಮೊದಲು ಒಂದು ಹಳ್ಳಿಯವರು ಗುರುಗಳ ಮುಂದೆ ಒಂದು ಫಲವನ್ನಿಟ್ಟು— "ಸ್ವಾಮಿಗಳು ದೀವಳಿಗೆಯ ಹಬ್ಬಕ್ಕೆ ನಮ್ಮ ಊರಿಗೆ ದಯಮಾಡಬೇಕು" ಎಂದು ಹೇಳಿ ನಮಸ್ಕರಿಸಿದನು. ಗುರುಗಳು ಅವರ ಆಮಂತ್ರಣ ಸ್ವೀಕರಿಸುವ ವಿಚಾರದಲ್ಲಿರುವಾಗ ಇನ್ನೊಂದು ಗ್ರಾಮದ ಪ್ರಮುಖರು ಮೊದಲಿನವರಂತೆ

ಪ್ರಾರ್ಥಿಸಿದರು. ಗುರುಗಳು ಇಷ್ಟಿಷ್ಟು ವಿಚಾರಕ್ಕೆಳಿದರು. ಇವರಂತೆ ಉಳಿದ ಗ್ರಾಮಗಳ ಹಿರಿಯರು ಪ್ರತಿ ಪ್ರತ್ಯೇಕವಾಗಿ ಬಂದು ಕಾಯಿ ಇಟ್ಟು ಗುರುಗಳನ್ನು ದೀವಳಿಗೆಗೆ ನಮ್ಮಲ್ಲಿ ಬರಬೇಕೆಂದು ಆಮಂತ್ರಿಸಿದರು. ಪ್ರತಿಯೊಬ್ಬರ ಆಮಂತ್ರಣವು ಅಗತ್ಯ. ಹಾಗು ಅಂತಃಕರಣಯುಕ್ತವಾಗಿಯೇ ಇದ್ದಿತು. ಹೀಗೆ ಏಳು ಊರಿನವರಿಂದ ಒಂದೇ ಕಾಲಕ್ಕೆ, ಒಂದೇ ಹಬ್ಬಕ್ಕೆ ಒಬ್ಬರೇ ಗುರುಗಳಿಗೆ ಆಮಂತ್ರಣಗಳು ಬಂದುದು ಶ್ರೀ ಗುರುಗಳ ಲೀಲಾದ್ಯೋತಕವೆಂದೇ ಹೇಳಬಹುದು.

ಪ್ರತಿಯೊಂದು ಊರಿನವರು ಗುರುವಿನ ಮುಖದಿಂದ ತಮಗೆ 'ತಥಾಸ್ತು' ಎಂಬ ಪ್ರಸಾದ ವಾಕ್ಯವು ಸಿಕ್ಕೀಸಿಗುವದೆಂಬ ಭರವಸೆಯಿಂದ ಕುಳಿತಿದ್ದರು. ಗುರುಗಳು ಆ ಏಳೂ ಊರಿನ ಪ್ರಮುಖರನ್ನು ನೋಡಿ ನಕ್ಕು— "ನಾನು ಇರುವವನು ಒಬ್ಬನು, ಏಕಕಾಲಕ್ಕೆ ನಿಮ್ಮೆಲ್ಲರಲ್ಲಿಗೆ ನಾನು ಬರುವದು ಸಾಧ್ಯವಿದೆಯೋ? " ಎಂದು ಕೇಳಿದರು. 'ಅದೇನೇ ಇರಲಿ ಸ್ವಾಮಿಗಳು ನಮ್ಮಲ್ಲಿಗೆ ಬರಲಿಕ್ಕೇಬೇಕು' ಎಂದು ಹೇಳಿ ಪ್ರತಿಯೊಬ್ಬರು ಆಗ್ರಹತೊಟ್ಟು ಕುಳಿತರು, ಇದರಿಂದ ಅವರವರೊಳಗೆ ವಾಗ್ಯುದ್ಧವೇ ಉದ್ಭವಿಸುವಂತಾಯಿತು. ಅಷ್ಟರಲ್ಲಿ ಗಾಣಗಾಪುರದ ಸ್ಥಳಿಕ ಪ್ರಮುಖರು ಬಂದು ಗುರುಗಳ ಮುಂದೆ ಕಾಯಿ ಇಟ್ಟು ದೀವಳಿಗೆಯ ದಿನಗಳಲ್ಲಿ ಗುರುಗಳು ಗೌರವತೆಯಲ್ಲಿ ನೆರವೇರಿಸುವ ಕಾರ್ಯಕ್ರಮದ ಪತ್ರಿಕೆಯನ್ನು ಗುರುಗಳ ಮುಂದಿಟ್ಟರು, ಅವರು ಅದನ್ನು ನೋಡಿ— 'ಇದು ಎಂಟನೆಯ ಆಮಂತ್ರಣವು' ಎಂದು ಎಲ್ಲರಿಗೂ ತಿಳಿಸಿದರು. ಹಾಗು 'ನೀವೆಲ್ಲರು ಕೂಡಿ ಊಹಾಪೋಹಮಾಡಿರಿ. ನಾವು ಯಾವ ಗ್ರಾಮಕ್ಕೆ ಹೋಗಬೇಕೆಂಬದನ್ನು ನಿರ್ಣಯಿಸಿ ನನಗೆ ತಿಳಿಸಿರಿ'' ಎಂದು ಹೇಳಿ ಮಠದ ಒಂದು ಏಕಾಂತ ಸ್ಥಳಕ್ಕೆ ಹೋಗಿ ಕುಳಿತರು.

ಎಲ್ಲರ ಉಪ್ಪೇಕ್ಷ–ಹಟಗಳು ಒಂದೇ ಇದ್ದುದರಿಂದ ಅವರು ಯಾವ ನಿರ್ಣಯವನ್ನೂ ನಿಶ್ಚಿತ ಪಡಿಸಲಿಲ್ಲ. ಅವರಂತೆ ಒಬ್ಬಿಬರು ಒಳಕ್ಕೆ ಹೋಗಿ ಗುರುಗಳಿಗೆ ತಿಳಿಸಿ ಬಂದರು. ಬಳಿಕ ಶ್ರೀ ಗುರುಗಳು ಆ ಏಳೂ ಗ್ರಾಮದವರಲ್ಲಿ ಒಂದೊಂದೇ ಗ್ರಾಮದ ಪ್ರಮುಖರನ್ನು ತಾವು ಕುಳಿತಲ್ಲಿಗೆ ಕರೆಯಿಸಿ— "ನಾವು ಒಂದೇ ವೇಳೆಗೆ ಎಲ್ಲ ಕಡೆಗೆ ಹೋಗಲು ಶಕ್ಯವಿದೆಯೋ? ಒಬ್ಬರನ್ನು ಬಿಟ್ಟು ಇನ್ನೊಬ್ಬರಲ್ಲಿಗೆ ಪ್ರಕಟವಾಗಿ ಹೋದರೆ ಅದೊಂದು ಪಂಕ್ತಿಪ್ರಪಂಚವಾಗುವದು. ಆದ್ದರಿಂದ ನಾವು ಎಲ್ಲಿಗೂ ಹೋಗಬಾರದೆಂದು ನಿರ್ಧರಿಸಿ ರುವೆವು. ಆದರೂ ಇದೊಂದು ದೊಡ್ಡ ಹಬ್ಬ. ಇದನ್ನು ಆಚರಿಸಲು ಬೇಕಲ್ಲವೇ? ನಿಮ್ಮಲ್ಲಿ ನಮಗೆ ಅನುಕೂಲತೆ ಮಾಡಿದರೆ ನಾವು ಧನತ್ರಯೋದಶಿಯ ದಿನವೇ ಅಲ್ಲಿಗೆ ಬರುವೆವು. ಹಬ್ಬ ಮುಗಿದ ನಂತರ ಎಲ್ಲಿಯೂ ಹೋಗದೆ ಹಿಂದಿರುಗಿ ಈ ನಮ್ಮ ಸ್ಥಾನಕ್ಕೆ ಬರುವೆವು. ಇದನ್ನು ನೀವು ಪ್ರಕಟಿಸದೆ ಹೋಗಿ ಬಿಡಿರಿ" ಎಂದು ಹೇಳಲು ಅವರು ತಮ್ಮಲ್ಲಿ ಗುರುಗಳ ಆಗಮನವಾಗುವದೆಂದು ಹಿಗ್ಗುತ್ತ ತಮ್ಮ ಊರಿಗೆ ಹೋದರು. ಗುರುಗಳು ಇದರಂತೆ ಆ ಏಳೂ ಗ್ರಾಮದವರನ್ನು ಕಳಿಸಿಕೊಟ್ಟರು. ಸ್ಥಳಿಕ ಮುಖಂಡರು ಇನ್ನೂ ಕುಳಿತಿದ್ದರು. ಗುರುಗಳು ಬಂದು ಅವರನ್ನು ಕುರಿತು— 'ಆ ಏಳೂ ಹಳ್ಳಿಯವರು ಹೋದರೇ? ಇಲ್ಲಿಯೇ ನಮಗೆ ಹಬ್ಬದ ಸಂಭ್ರಮವೊದಗಿರಲು ಇನ್ನೊಂದು ಹಳ್ಳಿಗೆ ಹೋಗಿ ಶ್ರಮಪಡುವದು ಯೋಗ್ಯವಲ್ಲ. ಆದ್ದರಿಂದ ನಾವು ಯಾವ ಗ್ರಾಮಕ್ಕೂ ಹೋಗುವದಿಲ್ಲ. ನೀವು ನಿಷ್ಪಪಡಿಸಿದ ಈ ಕಾರ್ಯಕ್ರಮವು ಸರಿಯಾಗಿ ಸಾಗಲಿ" ಎಂದರು. ಆಗ ಗಾಣಗಾಪುರದವರಿಗೆ ಬಲು ಆನಂದವು! ಹಬ್ಬದ ಎಲ್ಲ ಸಿದ್ಧತೆ ಮಾಡಿದರು,

ನಾಮಧಾರಕ ! ಗುರುಗಳ ಯುಕ್ತಿಯು ಯಾರಿಗೂ ತಿಳಿಯಲಿಲ್ಲ. ತ್ರಯೋದಶಿಯ ದಿನ ಪ್ರತಿಯೊಂದು ಹಳ್ಳಿಯವರು ಶ್ರೀ ಗುರುಗಳನ್ನು ಸ್ವಾಗತಿಸಿಕೊಂಡು ಹಬ್ಬಕ್ಕೆ ಶುರು ಮಾಡಿದರು. ಅದೇ ದಿನ ಗಾಣಗಾಪುರದಲ್ಲಿಯೂ ಗುರುಗಳ ಮರ್ಯಾದೆಗೆ ಸಡಗರದಿಂದಾರಂಭವಾಯಿತು.

ಹಬ್ಬವು ಕಡೆಪಂಚಮಿಗೆ ಮುಕ್ತಾಯವಾಯಿತು. ಗುರುಗಳು ಗುರುಮಠದಲ್ಲಿ ಹಾಗು ಪ್ರತಿಯೊಂದು ಊರಿನವರು ಗುರುಗಳನ್ನು ಬೀಳ್ಕೊಟ್ಟ ಸಂಭ್ರಮದ ಆನಂದದಲ್ಲಿ !

ಮುಂದೆ ಹುಣ್ಣಿಮೆಗೆ ಗುರುಮಠದಲ್ಲಿ ಕಾರ್ತಿಕ್ಯಾರಾಧನೆಗೆ ಆರಂಭವಾಯಿತು. ಗುರುಗುಳು ಹಬ್ಬಕ್ಕೆ ಹೋದಾಗ ಹುಣ್ಣಿಮೆಗೆ ಬರಬೇಕು' ಎಂದು ಅಪ್ಪಣೆ ಕೊಟ್ಟಿದ್ದರು. ಅದರಂತೆ ಏಳೂಹಳ್ಳಿಯವರು ಬಂದರು. ಅವರು ಒಂದೆಡೆಯಲ್ಲಿ ಕುಳಿತು ಹರಟೆ ಹೊಡೆಯುತ್ತಿರುವಾಗ ಒಂದು ಗ್ರಾಮದವರು— 'ಈ ಸಾರೆ ಹಬ್ಬಕ್ಕೆ ಗುರುಗಳು ನಮ್ಮಲ್ಲಿ ದಯಮಾಡಿಸಿದ್ದರು' ,ಎಂದನು. 'ಇದು ತೀರಾ ಸುಳ್ಳು. ಗುರುಗಳು ನಮ್ಮಲ್ಲಿಗೆ ಬಂದಿದ್ದರು" ಎಂದು ಇನ್ನೊಂದು ಊರಿನವರು ಎಂದರು. ಇದರಂತೆ ಏಳೂ ಊರಿನವರು ತಮ್ಮ ತಮ್ಮ ಹೇಳಿಕೆ ಸಮರ್ಥಿಸಿ ಮಾತಾಡಿದರು. ಕಡೆಗೆ ಇದರ ಸತ್ಯಾಸತ್ಯತೆ ಗುರುಗಳಿಂದಲೇ ವ್ಯಕ್ತವಾಗಲಿ ಎಂದು ಅವರೆಲ್ಲರು ಗುರುಗಳ ಬಳಿಗೆ ಹೋಗಲು ಎದ್ದರು. ಅಷ್ಟರಲ್ಲಿ ಗಾಣಗಾಪುರದ ಮುಖಂಡರು ಅಲ್ಲಿಗೆ ಬಂದರು. ಆ ಏಳೂ ಹಳ್ಳಿಯವರನ್ನು ಕುರಿತು— "ವ್ಯರ್ಥ ನುಡಿದು ಸತ್ಯಕ್ಕೆ ಕಳಂಕ ಹಚ್ಚಬೇಡಿರಿ, ಹಬ್ಬದಲ್ಲಿ ಶ್ರೀ ಗುರುಗಳು ಈ ಗ್ರಾಮದಲ್ಲಿಯೇ ಇದ್ದು ನಮ್ಮನ್ನು ಆನಂದಗೊಳಿಸಿದರು" ಎಂದು ಹೇಳಲು ಎಲ್ಲರೂ ದಿಗಿಲುಗೊಂಡರು, 'ಗುರು ಮಹಿಮೆಯು ಅಗಮ್ಯ' ಎಂದು ಎಲ್ಲರೂ

ಉದ್ಗರಿಸಿದರು. ಹಾಗು ಎಲ್ಲರೂ ಗುರುಗಳ ಹತ್ತಿರ ಹೋಗಿ ನಮಸ್ಕರಿಸಿದರು! ಗುರುಗಳು ತಮ್ಮ ಆನಂದ ಮುದ್ರೆಯಲ್ಲಿ ಒಡಮೂಡಿದ ಮಂದಹಾಸ್ಯದಿಂದ ನಿರೀಕ್ಷಿಸಿ ಎಲ್ಲರನ್ನು ಸಂತೋಷಗೊಳಿಸಿದರು."

ಈ ಪ್ರಕಾರ ಗುರುಗಳು ತಮ್ಮ ಎಂಟು ದೇಹಸ್ವರೂಪದಿಂದ ಕೌತುಕ ಬೀರಿದರು" ಎಂದು ಸಿದ್ಧಮುನಿಯು ಹೇಳಿದನು.

—೦—

## ೪೮ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ|| ಸಿದ್ಧಮುನಿಯು— 'ನಾಮಧಾರಕನೆ! ಗಾಣಗಾಪುರದಲ್ಲಿ ಒಬ್ಬ ಶೂದ್ರ ಒಕ್ಕಲಿಗನಿದ್ದನು. ಅವನು ಶ್ರೀ ಗುರುಗಳ ವಾಕ್ಯಗಳನ್ನು ಹೊರತುಪಡಿಸಿ ಇನ್ನೊಂದನ್ನು ಭಾವಿಸುತ್ತಿರಲಿಲ್ಲ.

ಗಾಣಗಾಪುರ ಗ್ರಾಮದಿಂದ ಸಂಗಮಕ್ಕೆ ಹೋಗುವ ಮಾರ್ಗಕ್ಕೆ ಹೊಂದಿಯೇ ಆ ಒಕ್ಕಲಿಗನ ಹೊಲವಿತ್ತು. ಅವನು ಆ ಹೊಲದಲ್ಲಿ ಹಂಗಾಮಿಗೆ ಸರಿಯಾಗಿ ಜೋಳವನ್ನು ಬಿತ್ತಿದ್ದನು. ಆ ವರ್ಷ ಹದವರ್ತಿಯಾದ ಮಳೆಯು ಅನುಕೂಲತೆಯಾದುದರಿಂದ ತಿಂಗಳೊಪ್ಪತ್ತಿನಲ್ಲಿಯೇ ಆ ಹೊಲದ ಜೋಳವು ಒಳಿತಾಗಿ ಬೆಳೆಯಿತು.

ಶ್ರೀ ಗುರುಗಳು ನಿತ್ಯವೂ ಸಂಗಮಕ್ಕೆ ಹೋಗುವಾಗಲೂ ಸಂಗಮದಿಂದ ತಿರುಗಿ ಬರುವಾಗಲೂ

ಹೊಲ ಕಾಯುತ್ತ ಬದುವಿನ ಮೇಲೆ ಅವನು ನಿಂತಿರುತ್ತಿದ್ದನು. ಗುರುಗಳು ಹೊಲದ ಸನಿಹಕ್ಕೆ ಬಂದ ಕೂಡಲೆ ಆ ಒಕ್ಕಲಿಗನು ಮುಂದರಿದು ಹೋಗಿ ನಮಸ್ಕರಿಸಿ ಮತ್ತೆ ತಾನು ನಿಲ್ಲುವ ಸ್ಥಾನಕ್ಕೆ ಹೋಗುತ್ತಿದ್ದನು. ಅವನ ಈ ಕ್ರಮವು ಜೋಳ ಬಿತ್ತಿದಂದಿನಿಂದಲೇ ನಡೆದಿತ್ತು. ಗುರುಗಳು ಅವನ ಭಕ್ತಿಯನ್ನು ಮನದಲ್ಲಿಯೇ ಪ್ರಶಂಸಿಸುತ್ತಿದ್ದರು.

ಒಂದು ದಿನ ಮಧ್ಯಾಹ್ನ ಸಮಯದಲ್ಲಿ ಗುರುಗಳು ಮಠದಿಂದ ಸಂಗಮ ಸ್ನಾನಕ್ಕೆಂದು ಹೋಗುತ್ತಿದ್ದರು. ಆ ಒಕ್ಕಲಿಗನ ಹೊಲದ ಸನಿಹಕ್ಕೆ ಬಂದ ಕೂಡಲೆ ಶೂದ್ರನು ಅವರಿಗೆ ನಮಸ್ಕರಿಸಿ— "ಸ್ವಾಮಿ! ಈ ಸಾರೆ ನನ್ನ ಹೊಲದ ಜೋಳದ ಬೆಳೆಯು ಈ ಊರಿನ ಬೆಳೆಗಳಿಗೇ ಮಿಗಿಲಾದದ್ದಿರುವದು. ನೋಡಿರಿ" ಎಂದು ಗುರುಗಳನ್ನು ಹೊಲದಲ್ಲಿ ಕರೆದೊಯ್ದು ತೋರಿಸಿದನು. ಗುರುಗಳು ಸಂತುಷ್ಟರಾಗಿ— 'ಒಕ್ಕಲಿಗನೆ! ಬೆಳೆ ಚನ್ನಾಗಿದೆ ಮತ್ತೇನು?'' ಎಂದು ಕೇಳಲು— "ಸ್ವಾಮಿ! ಇನ್ನೂ ಹೆಚ್ಚು ಬೆಳೆದಿದ್ದರೆ ಒಳಿತಾಗುತ್ತಿತ್ತು" ಎಂದು ತನ್ನ ಆಶೆಯನ್ನು ವ್ಯಕ್ತಪಡಿಸಿದನು. ಗುರುಗಳು ಅವನ ಭಕ್ತಿಯನ್ನು ಒರೆಗ್ಗಚ್ಚುವದಕ್ಕೆಂದು "ಶೂದ್ರನೆ! ನಾವು ಸಂಗಮಕ್ಕೆ ಹೋಗುವೆವು. ನಾವು ಹಿಂದಿರುಗಿ ಬರುವದರೊಳಗೇ ಈ ನಿನ್ನ ಹೊಲವನ್ನೆಲ್ಲ ಕೊಯ್ದು ಹಾಕು. ಅಂದರೆ ನಿನ್ನ ಇಚ್ಛೆ ಕೈಗೂಡುವದು'' ಎಂದು ಹೇಳಿ ಮುಂದೆ ಸಾಗಿದರು.

ಆ ಒಕ್ಕಲಿಗನಿಗೆ ಗುರುವಾಕ್ಯದ ಮೇಲೆ ಪೂರ್ಣ ನಂಬಿಗೆ. ಗುರುಗಳು ಸಂಗಮಕ್ಕೆ ಹೋದ ಕೂಡಲೆ ತಾನು ಊರೊಳಗೆ ಬಂದನು. ನಾಲ್ಕಾರು ಆಳುಗಳನ್ನು ಕರಕೊಂಡು ಬಂದನು. ಒತ್ತಟ್ಟನಿಂದ

ಹೊಲದ ಜೋಳದ ಬೆಳೆಯನ್ನೆಲ್ಲ ಕೊಯ್ಯಿಸಿ ಬಿಟ್ಟನು. ಬೆಳೆ ಕೊಯ್ಯಿಸುವ ಮೊದಲೇ ಅವನು ಹೊಲದ ಒಡೆಯನಲ್ಲಿಗೆ ಹೋಗಿ— 'ನಾನು ಹೋದ ವರ್ಷ ನಿಮಗೆ ಕೊಟ್ಟ ಲಾವಣಿಯ ಇಮ್ಮಡಿ ಲಾವಣಿಯನ್ನು ಈ ಸಾರೆ ಸಲ್ಲಿಸುವೆನು' ಎಂದು ಒಪ್ಪಿಗೆಯ ಲೇಖ ಬರೆದು ಕೊಟ್ಟಿದ್ದನು.

ಆ ಶೂದ್ರನು ಹೊಲದ ಬೆಳೆ ಕೊಯ್ಯಿಸುವ ಸುದ್ದಿಯು ಅವನ ಹೆಂಡತಿ ಹಾಗು ಮಗನಿಗೆ ತಿಳಿದು ಅವರಿಬ್ಬರೂ ಬಂದು ತಡೆದರು. ಆದರೂ ಆತನು ಕೇಳಲಿಲ್ಲ. ಅವರನ್ನು ಹೊಡೆದು ಬಡಿದು ಹೊಲದಿಂದ ಓಡಿಸಿ ಹೊಲವನ್ನೆಲ್ಲ ಕೊಯ್ಯಿಸಿದನು. ಅವರು ಗ್ರಾಮಾಧಿಕಾರಿ ಹಾಗು ಹೊಲದೊಡೆಯ ಇವರಿಗೆ ದೂರು ಹೇಳಿದರು, ಅವರು ಲಕ್ಷಿಸಲಿಲ್ಲ. ಗ್ರಾಮಾಧಿಕಾರಿಯು— 'ಹೊಲದ ಬೆಳೆ ಹಾಳಾದರೇನು? ಮನೆಯಲ್ಲಿ ದನ-ಕರುಗಳನ್ನು ಮಾರಿಸಿ ತೀರ್ಪೆ ತಕ್ಕೊಳ್ಳುವೆನು' ಎಂದನು. ಹೊಲದೊಡೆಯ ನಂತೂ ಕಳೆದ ಸಾಲಿನ ಲಾವಣಿಯ ಇಮ್ಮಡಿ ಲಾವಣಿ ರಕಮು ಅವನ ಮನೆಯನ್ನು ಮಾರಿಸಿ ತಕ್ಕೊಳ್ಳುವೆನೆಂದು ನುಡಿದನು. ಹೀಗೆ ಅವರು ಶೂದ್ರನ ಸತಿ-ಸುತರ ಹೇಳಿಕೆಯನ್ನು ಲಕ್ಷಿಸಲಿಲ್ಲ. ಕಡೆಗೆ ಆ ತಾಯಿ-ಮಗ ಇವರು ನಿರುಪಾಯರಾಗಿ ಕುಳಿತರು.

ಹೊಲದ ಕೊಯ್ಲು ಮುಗಿಯಿತು. ಗುರುಗಳೂ ಸಂಗಮದಿಂದ ಹಿಂದಿರುಗಿದರು. ಶೂದ್ರನು ಗುರುವಿನ ಬರುವಿಕೆ ನಿರೀಕ್ಷಿಸಿ ಮುಂದ್ವರಿದು ಹೋಗಿ— "ಸ್ವಾಮಿ ! ತಮ್ಮ ಹೇಳಿಕೆಯಂತೆ ಹೊಲವನ್ನೆಲ್ಲ ಕೊಯ್ಯಿಸಿದೆನು" ಎಂದು ಉಲ್ಲಾಸದಿಂದ ಹೇಳಿ ನಮಸ್ಕರಿಸಿದನು. ಆಗ ಗುರುಗಳು— "ಎಲೋ! ಶೂದ್ರನೆ! ನೀನೆಂಥ ತಿಳಿಗೇಡಿಯೋ? ನಾವು ವಿನೋದಕ್ಕಾಗಿ ಹೇಳಿದುದನ್ನೇ ನೀನು ನಿಜವೆಂದು ಭಾವಿಸಿ

ಅಯೋಗ್ಯ ಕೃತಿ ಮಾಡಿದಿ!" ಎನ್ನಲು ಶೂದ್ರನು-- "ಸ್ವಾಮಿ! ನಿಮ್ಮ ವಾಕ್ಯವು ನನಗೆ ಯಾವಾಗಲೂ ಮಾನ್ಯವು" ಎಂದನು. ಗುರುಗಳು-- "ನೀನೊಬ್ಬ ಭಕ್ತನು ಮಾತ್ರ ನಮಗೆ ಯೋಗ್ಯದೊರೆತಿ! ಅಡ್ಡಿಯಿಲ್ಲ. ನಿನ್ನ ವಿಶ್ವಾಸವು ಮಾತ್ರ ದೃಢವಿರಲಿ" ಎಂದು ನುಡಿದು ಮಠಕ್ಕೆ ಹೋದರು.

ಊರಲ್ಲಿ ಎಲ್ಲರೂ ಶೂದ್ರನನ್ನು ಧಿಕ್ಕರಿಸಿ ಮಾತಾಡಹತ್ತಿದರು. ಅವನ ಸತಿ-ಸುತರಂತೂ ಅವನ ಹುಚ್ಚುತನವನ್ನು ಜನರಲ್ಲಿ ಬೀರುತ್ತ ದಿನಾಲು ಕಣ್ಣೀರು ಸುರಿಸುತ್ತಿದ್ದರು. ಕೆಲವು ಮಂದಮತಿಗಳು-- "ಬೆಳೆ ಕೊಯ್ಯಿಸುವದಕ್ಕೆ ಗುರುಗಳು ಹೇಳಿದರೆಂದಮೇಲೆ ಶೂದ್ರನ ಅಪರಾಧವೇನು?" ಎಂದು ತಮ್ಮತಮ್ಮೊಳಗೆ ಮಾತಾಡಹತ್ತಿದರು. ಕೆಲವು ವಿಚಾರವಂತರು-- 'ಗುರುವಿನಲ್ಲಿ ಪೂರ್ಣ ನಂಬಿಗೆಯಿಟ್ಟ ಆ ಶೂದ್ರನಿಗೆ ಎಂದೂ ಹಾನಿ ತಟ್ಟುವದು ಶಕ್ಯವಿಲ್ಲ' ಎಂದರು. ಹೀಗೆ ಆ ಪ್ರಸಂಗವನ್ನು ಕುರಿತು ಸಿಕ್ಕಸಿಕ್ಕವರು ತಮ್ಮ ಮನಬಂದಂತೆ ಮಾತಾಡಹತ್ತಿದರು. ಆದರೂ ಆ ಶೂದ್ರ ಭಕ್ತನು ಗುರುಗಳ ಮೇಲಿಟ್ಟ ತನ್ನ ನಿಷ್ಠೆಯಿಂದ ಚ್ಯುತನಾಗದೆ ದಿನಾಲು ಗುರುಗಳನ್ನು ವಂದಿಸುತ್ತಲೇ ಇರಹತ್ತಿದನು.

ಈ ಸಂಗತಿ ವರ್ತಿಸಿ ಎಂಟ್ಟೆತ್ತು ದಿನಗಳು ಗತಿಸಿದವು. ಹವೆಯಲ್ಲಿ ಶೈತ್ಯತೆ ಹೆಚ್ಚಾಯಿತು. ಆ ಚಳಿಯ ಪ್ರತಾಪದಿಂದ ಆ ಗ್ರಾಮದ ಹಾಗು ಸುತ್ತಲಿನ ಊರುಗಳ ಪೈರುಗಳು ಗಳಗಳನೆ ಒಣಗಿ ನಾಶವಾಗಹತ್ತಿದವು. ಅಷ್ಟರಲ್ಲಿ ರವಿಯು ಮೂಲಾನಕ್ಷತ್ರಗತನಾಗಿ ದೊಡ್ಡ ದೊಡ್ಡ ಮಳೆಯ ಸೆಳಕುಗಳು ಸುರಿದವು, ಭೂಮಿಯಲ್ಲೆಲ್ಲ ನೀರಾಡಹತ್ತಿತು. ಗಾಣಗಾಪುರದ ಭೂಮಿಗಳೆಲ್ಲ ಒಣಗಿಹೋದವು. ಮಳೆಯ ಮೂಲಕ ಶೂದ್ರನ ಕೊಯ್ದ ಹೊಲದಲ್ಲಿಯ ಪ್ರತಿಯೊಂದು ಕೋಲಿಗೆ ಹದಿನೆಂಟು-ಇಪ್ಪತ್ತರಂತೆ ಕುಳೆಯು

ಮೊಳಕೆಗಳು ಒಡೆದವು, ಅವು ದಿನದಿನಕ್ಕೆ ಬೆಳೆದು ಕುಳಿಯ ಜೋಳದ ಪೈರು ದಟ್ಟವಾಗಿ ಬೆಳೆದು ನಿಂತಿತು. ಪ್ರತಿಯೊಂದು ದಂಟು ಕಪ್ಪೆಹೊಡೆ-ಕದಿರುಹೊಡೆಯಿಂದ. ಶೋಭಿಸಹತ್ತಿತು. ಹೊಲದ ಈ ಬೆಳೆಯ ಸಿರಿಯನ್ನು ನೋಡಿ ಒಕ್ಕಲಿಗನೂ ಅವನ ಸತಿ-ಸುತರೂ ಒಳ್ಳೆ ಆನಂದ ತಾಳಿದರು. ಎಲ್ಲಿಯೂ ಇಲ್ಲದ ಬೆಳೆಯು ತಮ್ಮ ಹೊಲದಲ್ಲಿ ಬಂದುದಕ್ಕೆ ಅವರ ಉತ್ಸಾಹಕ್ಕೆ ಸೀಮೆಯೇ ಉಳಿಯಲಿಲ್ಲ. ಹಗಲು-ರಾತ್ರಿಯೆನ್ನದೆ ಆ ಮೂವರೂ ಹೊಲ ಕಾಯುತ್ತ ಹೊಲದಲ್ಲಿಯೇ ಇರಹತ್ತಿದರು. ಹೊಲದಲ್ಲಿಯ ತೆನೆಗಳಿಗೆಲ್ಲ ಕಾಳು ಮೂಡಿದವು. ರಸಮುಂಬಿ ಬೆಳಸಿಯಾದವು. ಬೆಳಸಿ ಮಾಗಿ ಜೋಳದಿಂದ ಇಡಿಗಿದ ತೆನೆಗಳು ದೊಡ್ಡದೊಡ್ಡವಾಗಿ ಮುತ್ತಿನ ತೆನೆಗಳಂತೆ ತೂಗಾಡಹತ್ತಿದವು, ಶೂದ್ರನು ತನ್ನ ಹೆಂಡತಿ-ಮಗನಿಂದ ಕೂಡಿಕೊಂಡು ಜೋಳ ಕೊಯ್ದನು. ಕಣ ಮಾಡಿ ತೆನೆ ಕೊಯ್ಯಿಸಿ ಹಂತಿ ಕಟ್ಟಿ ರಾಸಿ ಮಾಡಿದನು. ಶೂದ್ರಾಣಿಯು ಒಳ್ಳೆ ಸಂಭ್ರಮದಿಂದ ರಾಸಿ ಪೂಜೆ ಮಾಡಿದಳು, ಮಗನು ಕಣಹಬ್ಬವೆಂದು ಊರೊಳಗಿನ ಕಾಣಬರುವ ಜನರನ್ನು ಕರೆಕೊಂಡು ಬಂದು ಭೋಜನ ಮಾಡಿಸಿದನು, ಆ ದೊಡ್ಡ ರಾಸಿಯನ್ನು ನೋಡಿ ಎಲ್ಲರೂ ಚಕಿತರಾದರು. ಇಪ್ಪತ್ತು ಹೇರು ಆಗುವ ತಲೆರಾಸಿಯು ಹಾಳಾಗಿ ಹೋದರೂ ಈ ಶೂದ್ರನ ಕುಳೇದ ರಾಸಿಯು ಅದರ ಇಪ್ಪತ್ತು ಪಟ್ಟು ದೊಡ್ಡದಾದ ರಾಸಿಯಾಗಿದೆ' ಎಂದು ಎಲ್ಲರೂ ನುಡಿದರು.

ಶೂದ್ರನು ಸತಿಯೊಂದಿಗೆ ಗುರುಮಠಕ್ಕೆ ಹೋದನು, ಇಬ್ಬರೂ ಗುರುಗಳಿಗೆ ನಮಸ್ಕರಿಸಿದರು. ಗುರುಗಳಿಗೆ ತಾನು ಪಡೆದ ಧಾನ್ಯ ಸಿರಿಯನ್ನು ಆ ಶೂದ್ರನು ಬಣ್ಣಿಸಿ ಹೇಳಿ— "ಸ್ವಾಮಿ! ತಮ್ಮ ವಾಕ್ಯವನ್ನು ಪ್ರಮಾಣವೆಂದು ಭಾವಿಸಿದ ನಾನು ಉದ್ಧಾರಹೊಂದಿದೆನು" ಎಂದು ಹೇಳಿ ವಂದಿಸಿದನು.

ಬಳಿಕ ಶೂದ್ರ-ಶೂದ್ರಾಣಿಯರು ಗುರಗಳ ಆಶೀರ್ವಾದದಿಂದ ಮನೆಗೆ ಹಿಂದಿರುಗಿದರು.

ಆ ಮೇಲೆ ಶೂದ್ರನು ಗ್ರಾಮಾಧಿಕಾರಿಯ ಬಳಿಗೆ ತೀರ್ವೆಯ ಬಗೆಗೆ ಸಲ್ಲಿಸತಕ್ಕ ಧಾನ್ಯವನ್ನೊಯ್ದು ಹಾಕಿದನು. ಮತ್ತು ಹೊಲದೊಡೆಯನು ಬರೆಯಿಸಿಕೊಂಡ ಒಪ್ಪಿಗೆಯ ಪತ್ರದ ಪ್ರಕಾರ ಕಾಳು ಹೇರಿಕೊಂಡು ಅವನ ಮನೆಗೆ ಹೋದನು. ಆ ಹೊಲದೊಡೆಯನು— ''ಶೂದ್ರನೆ ! ಶ್ರೀ ಗುರುಗಳ ಭಕ್ತನು ನೀನಾಗಿರುವಿ. ಆ ಗುರುವು ನಿನಗೆ ಪ್ರಸನ್ನನಾಗಿದ್ದುದರಿಂದ ನೀನು ಹೆಚ್ಚು ಬೆಳೆ ಪಡೆದಿ, ಅದರಲ್ಲಿ ನಾವು ನಮಗೆ ಯೋಗ್ಯವಾಗಿ ಬರತಕ್ಕಷ್ಟನ್ನೇ ಸ್ವೀಕರಿಸಬೇಕಲ್ಲವೇ? ಕಳೆದ ವರುಷದಲ್ಲಿ ಕೊಟ್ಟಷ್ಟೇ ಕಾಳು ಹಾಕಿ ಉಳಿದ ಧಾನ್ಯ ತೆಗೆದುಕೊಂಡು ಹೋಗು'' ಎಂದು ಹೇಳಿದನು. ಆದರೂ ಶೂದ್ರನು ಆತ್ಮ ಸಂತೋಷದಿಂದ ನಾಲ್ಕಾರು ಚೀಲ ಧಾನ್ಯವನ್ನು ಆ ಒಡೆಯನಿಗೆ ಕೊಟ್ಟು ಬಂದನು.

ನಂತರ ಶೂದ್ರನು ಬ್ರಾಹ್ಮಣರಿಗೂ ಯಾಚಕರಿಗೂ ಧಾನ್ಯ ದಾನ ನೀಡಿದನು, ಸಂಭ್ರಮದಿಂದ ರಾಸಿಯನ್ನು ಹೇರಿಕೊಂಡು ತನ್ನ ಮನೆಗೆ ಒಯ್ದನು."

ಸಿದ್ಧಮುನಿಯು— ನಾಮಧಾರಕನೆ ! ಗುರುಗಳಲ್ಲಿ ದೃಢಭಕ್ತಿಯುಳ್ಳವನಿಗೆ ದೈನ್ಯವು ಒದಗುವವೇ? ಅವನ ಅಭೀಷ್ಟೆಗಳು ಪೂರೈಸಲ್ಪಡುವವು. ಅವನಲ್ಲಿ ಲಕ್ಷ್ಮಿಯು ನಿರಂತರ ವಾಸಿಸುವಳು. ಇವೆಲ್ಲಕ್ಕೂ ಗುರುಸೇವೆಯೇ ನಿಶ್ಚಿತವು'' ಎಂದು ಹೇಳಿದನು.

—೮—

# ೪೯ ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ ॥ ನಾಮಧಾರಕನು ಸಿದ್ಧಮುನಿಯನ್ನು ಕುರಿತು— "ಸ್ವಾಮೀ! ಭೂಮಿಯಮೇಲೆ ಹಲವು ಪ್ರಸಿದ್ಧ ಹಾಗು ಪುಣ್ಯ ತೀರ್ಥ-ಸ್ಥಾನಗಳಿದ್ದರೂ ಶ್ರೀ ಗುರುಗಳು ಅವೆಲ್ಲವನ್ನು ಬಿಟ್ಟು ಗಾಣಗಾಪುರ ವಾಸ್ತವ್ಯವನ್ನು ಅದೇಕೆ ಮೆಚ್ಚಿದರು? ಎಂದು ಕೇಳಿದನು. ಅದಕ್ಕೆ ಸಿದ್ಧಮುನಿಯು—

"ನಾಮಧಾರಕ! ಗಾಣಗಾಪುರ ಸ್ಥಾನ ಮಹಿಮೆಯು ಅಷ್ಟಿಷ್ಟಲ್ಲ. ಅದನ್ನು ನಿನಗೆ ವಿಸ್ತರಿಸಿ ಹೇಳುವೆನು ಕೇಳು.

ಒಂದುಸಾರಿ ಗುರುಗಳ ದೀಪಾವಳಿಯ ಮೊದಲು ತಮ್ಮ ಶಿಷ್ಯ ಭಕ್ತರನ್ನು ಕುರಿತು— "ನಾಳಿನ ಆಶ್ವಿನ ವದ್ಯ ಚತುರ್ದಶಿಯು ದೀಪಾವಳಿಯ ಪರ್ವಣಿಯ ದಿನವು. ಆ ದಿವಸ ಕಾಶಿ-ಪ್ರಯಾಗ-ಗಯೆ ಈ ತ್ರಿಸ್ಥಳಿ ಯಾತ್ರೆಯನ್ನು ಆಚರಿಸೋಣ" ಎನ್ನಲು ಶಿಷ್ಯರು— "ಗುರುಗಳೇ! ಇದು ಅಸಾಧ್ಯವು" ಎಂದರು. ಗುರುಗಳು ಅವರ ಹೇಳಿಕೆಗೆ ನಕ್ಕು— 'ನಾವು ತ್ರಿಸ್ಥಳಿ ಸ್ನಾನಕ್ಕಾಗಿ ಅಷ್ಟೊಂದು ದೂರ ಪ್ರಯಾಣಕೈಕೊಳ್ಳುವವಶ್ಯವಿಲ್ಲ. ಈ ಗ್ರಾಮದ ಸನಿಹದಲ್ಲಿಯೇ ಅಷ್ಟತೀರ್ಥಗಳಿರುವವು. ಅಲ್ಲಿಗೆ ಹೋಗೋಣ ನಡೆಯಿರಿ' ಎಂದು ಆ ಭಕ್ತರನ್ನು ಕರೆದುಕೊಂಡು ಸಂಗಮಕ್ಕೆ ಹೋದರು. ಎಲ್ಲರೂ ಸ್ನಾನಮಾಡಿದರು, ಬಳಿಕ ಗುರುಗಳು ಅವರನ್ನೆಲ್ಲ ಕುರಿತು— "ಶಿಷ್ಯರೇ! ಈ ಸಂಗಮವು ಆರು ತೀರ್ಥಗಳಿಂದ ಯುಕ್ತವಾಗಿ

ಪ್ರಯಾಗಕ್ಕೆ ಸಮನಾದ ಪುಣ್ಯಕರವಾಗಿದೆ. ಇಲ್ಲಿಯು ಅಮರಜಾ ಹಾಗು ಭೀಮರಥಿ ನದಿಗಳು ಪ್ರಯಾಗದ ಗಂಗೆ-ಯಮುನೆಗಳಂತಿರುವವು. ಇಲ್ಲಿಯು ಪ್ರವಾಹವು ಉತ್ತರವಾಹಿನಿ ಯಿರುವದರಿಂದ ಕಾಶೀಕ್ಷೇತ್ರದ ನೂರ್ಮಡಿ ಪುಣ್ಯವನ್ನು ಇಲ್ಲಿ ಪಡೆಯಬಹುದು. ಇನ್ನು ಇಲ್ಲಿರುವ ಅಷ್ಟತೀರ್ಥಗಳನ್ನು ನಿಮಗೆ ಹೇಳುವ ಮೊದಲು 'ಅಮರಜಾ' ನದಿಯು ಉತ್ಪತ್ತಿಯು ಬಗೆಗೆ ಹೇಳುವೆನು ಕೇಳಿರಿ, ಎಂತೆಂದರೆ—

"ಹಿಂದಕ್ಕೆ ಜಾಲಂದರನೆಂಬ ಪ್ರಬಲ ರಾಕ್ಷಸನಿದ್ದನು. ಅವನು ಇಂದ್ರನನ್ನು ಗೆದ್ದು ದೇವತೆಗಳೆಲ್ಲರನ್ನು ಸುರಲೋಕದಿಂದ ಓಡಿಸಿದನು. ರಾಕ್ಷಸನಿಂದ ಸಂತ್ರಸ್ತನಾದ ಇಂದ್ರನು ಶಿವನನ್ನು ಮೊರೆ ಹೊಕ್ಕು ರಾಕ್ಷಸನಿಂದ ತಮಗಾದ ತೊಂದರೆಯನ್ನು ಶ್ರುತಪಡಿಸಿದನು. ಹಾಗು ದೈತ್ಯರು ಪುನಃ ಪುನಃ ಜೀವಿಸಿ ಕಾದುವರೆಂದೂ ದೇವ ಸೈನ್ಯವು ಹತವಾಗುತ್ತಿರುವದೆಂದೂ ಹೇಳಿ ದೇವಾ! ದೈತ್ಯರ ವಧೆಯು ಮತ್ತು ದೇವತೆಗಳು ಜೀವಿಸುವ ಉಪಾಯ ಕೈಕೊಳ್ಳುವದು ಎಂದು ಪ್ರಾರ್ಥಿಸಲು ಶಿವನು ದೇವತೆಗಳಿಗಾಗಿ ಆಗಲೇ ಒಂದು ಅಮೃತ ಮಂತ್ರದಿಂದ ಒಂದು ಘಟವನ್ನು ಸಿದ್ಧಪಡಿಸಿ ಇಂದ್ರನಕೈಗೆ ಕೊಟ್ಟನು. ಇಂದ್ರನು ಆ ಘಟದಲ್ಲಿಯ ಅಮೃತ ಜಲವನ್ನು ಒಯ್ದು ಗತಪ್ರಾಣರಾಗಿ ಬಿದ್ದಿದ್ದ ದೇವತೆಗಳಿಗೆ ಸಿಂಪಡಿಸಿದನು. ಆಗ ದೇವತೆಗಳೆಲ್ಲ ಅಮರರಾಗಿ ದೈತ್ಯರನ್ನೆಲ್ಲ ಕೊಂದರು.

ಇಂದ್ರನು ಅಮೃತ ಜಲವನ್ನು ಸುರರಿಗೆ ಪ್ರೋಕ್ಷಿಸಿದರೂ ಇನ್ನೂ ಆ ಅಮೃತದ ಕೆಲ ಭಾಗವು ಆ ಘಟದಲ್ಲಿ ಉಳಿಯಿತು. ಅದನ್ನು ಅವನು ತನ್ನ ಅಮರಾವತಿಗೆ ಎತ್ತಿಕೊಂಡು ಹೋಗುವಾಗ ಕೈಜಾರಿ ಅದು ಭೂಲೋಕಕ್ಕೆ ಬಿದ್ದಿತು. ಆ ಘಟವು ಇದೇ ಸ್ಥಳದಲ್ಲಿ ಬಿದ್ದು ಅದರೊಳಗಿನ ಅಮೃತವು ಪ್ರವಾಹ

ವಾಗಿ ಸಾಗಿತು. ಈ ಕಾರಣದಿಂದಲೇ ಈ ಅಮೃತ ಪ್ರವಾಹಕ್ಕೆ 'ಅಮರಜಾನದಿ' ಎಂಬ ಹೆಸರು ಪ್ರಾಪ್ತ ವಾಯಿತು.

ಶಿಷ್ಯರೇ ! ಈ ಅಮರಜಾ ನದಿಯ ಮಹಿಮೆಯು ಪ್ರಸಿದ್ಧವಿದೆ ಇದರಲ್ಲಿ ಭಕ್ತಿಯಿಂದ ಸ್ನಾನ ಮಾಡಲು ಕಾಲ ಮೃತ್ಯು-ಅಪಮೃತ್ಯಗಳು ಒದಗಲಾರವು.

ಈ ಅಮರಜಾ ನದಿ ಹಾಗು ಭೀಮಾನದಿ ಇವುಗಳ ಸಂಗಮವಾದ ಈ ಸ್ಥಾನದಲ್ಲಿಯೇ ಪ್ರಯಾಗಕ್ಕೆ ಸಮನಾದ ತೀರ್ಥವು ಇಲ್ಲಿ ಇರುವದು. ಇಲ್ಲಿ ಕಾರ್ತಿಕ ಸ್ನಾನ, ಮಾಘ ಸ್ನಾನಗಳಿಗೆ ಮಹತ್ವವಿರುವದು, ಸೋಮವಾರ, ಸೂರ್ಯಗ್ರಹಣ, ಸಂಕ್ರಮಣ, ಅಮಾವಾಸ್ಯೆ, ಪುಣ್ಯತಿಥಿ, ಹಾಗು ಏಕಾದಶಿಗಳಲ್ಲಿ ಇಲ್ಲಿ ಸ್ನಾನ ಮಾಡಲು ಬಹು ಪುಣ್ಯ ಲಭಿಸುವದು ಈ ಸಂಗಮತೀರ್ಥವಲ್ಲದೆ ಅಶ್ವತ್ಥದ ಎದುರಿನಲ್ಲಿ ಒಂದು ಮನೋಹರ ತೀರ್ಥವಿರುವದು. ಈ ಅಶ್ವತ್ಥವು ಕಲ್ಪವೃಕ್ಷವೆಂದು ತಿಳಿದು ಸೇವೆ ಮಾಡಿರಿ, ನಾವು ಈ ಅಶ್ವತ್ಥ ಸನ್ನಿಧಿಯಲ್ಲೇ ಇರುವೆವು ಅಶ್ವತ್ಥನನ್ನು ಪೂಜಿಸಿ ಸಂಗಮೇಶ್ವರ ಶಿವಾಲಯಕ್ಕೆ ಹೋಗಿ ಶಿವನನ್ನು ಪೂಜಿಸಿರಿ. ಪರ್ವತ ಮಲ್ಲಿಕಾರ್ಜುನನಂತೆಯೇ ರುದ್ರನು ಇಲ್ಲಿ ಇರುವನು. ಇಲ್ಲಿಯ ನಂದಿಕೇಶ್ವರನಿಗೆ ವಂದಿಸಿ ಚಂಡಿಸ್ಥಾನಕ್ಕೆ ಹೋಗಿರಿ, ಪುನಃ ನಂದಿಕೇಶ್ವರನನ್ನು ವಂದಿಸಿ ಸೋಮಸೂತ್ರಕ್ಕೆ ಹೋಗಿರಿ, ಕೂಡಲೆ ಅಲ್ಲಿಂದ ತಿರುಗಿ ವೃಷಭನಿಗೆ ನಮಿಸಿ ಚಂಡಿಗೆ ಹೋಗಿರಿ ಅಲ್ಲಿಂದ ಮತ್ತೆ ಸೋಮಸೂತ್ರಕ್ಕೆ ಬಂದು ಮೂರುಸಾರೆ ಪ್ರದಕ್ಷಿಣೆ ಹಾಕಿರಿ. ನಂತರ ನಂದಿಯನ್ನು ಹಿಡಿದು ಶಿವನಿಗೆ ವಂದಿಸಿರಿ. ಸಂಗಮೇಶ್ವರನನ್ನು ಪೂಜಿಸಿ ವಾರಾಣಸಿ ತೀರ್ಥಕ್ಕೆ ಹೋಗಿರಿ. ಇಲ್ಲಿಂದ ಅರ್ಧ ಹರದಾರಿಗೆ ನಾಗೇಸಿ ಗ್ರಾಮವಿದೆ,

ಶಿಷ್ಯರೆ! ಈ ಗ್ರಾಮದಲ್ಲಿ ಉದ್ಧವನೆಂಬ ಭಾರದ್ವಾಜ ಗೋತ್ರದ ಬ್ರಾಹ್ಮಣನಿದ್ದನು. ಅವನು ವಿರಕ್ತನೂ ಶಿವಭಕ್ತನೂ ಆಗಿದ್ದನು. ಶಿವ ಪ್ರಸನ್ನತೆ ಪಡೆದಿದ್ದನು. ಅವನ ಈ ಸ್ಥಿತಿಯನ್ನರಿಯದೆ ಜನರು ಅವನನ್ನು ಹುಚ್ಚನೆಂದು ನಿಂದಿಸುತ್ತಿದ್ದರು. ಆ ಉದ್ಧವನಿಗೆ ಈಶ್ವರ ಹಾಗು ಪರಮೇಶ್ವರ ಎಂಬ ಹೆಸರಿನ ಇಬ್ಬರು ಬಂಧುಗಳಿದ್ದರು. ಅವರಲ್ಲೊಬ್ಬನು ಕಾಶೀಯಾತ್ರೆಗೆ ಹೊರಟನು. ಉದ್ಧವನನ್ನೂ ಯಾತ್ರೆಗೆ ಕರೆದೊಯ್ಯುವ ವಿಚಾರ ಮಾಡಿ ಅದರಂತೆ ಅವನನ್ನು ಕೇಳಿದನು. ಅದಕ್ಕೆ ಉದ್ಧವನು— ''ವಿಶ್ವೇಶ್ವರನು ಇಲ್ಲಿಯೇ ಇರುವನು, ಹಾಗು ಇಡೀ ಕಾಶಿಯ ಕ್ಷೇತ್ರವೂ ಇಲ್ಲಿಯೇ ಇದೆ. ನಿಮಗೂ ದರ್ಶನ ಮಾಡಿಸುವೆನು'' ಎಂದು ಹೇಳಲು ಅವನ ಬಂಧುಗಳಿಗೆ ಆಶ್ಚರ್ಯವೆನ್ನಿಸಿ ಅವನ ಹೇಳಿಕೆಗೆ ಒಪ್ಪಿಕೊಂಡರು.

ಕೂಡಲೆ ಉದ್ಧವನು ನದೀ ಸ್ನಾನ ಮಾಡಿ ಧ್ಯಾನಸ್ಥನಾಗಿ ಕುಳಿತನು ಈಶ್ವರನು ಸಾಕ್ಷಾತ್ತಾಗಿ ಅವನ ಹತ್ತಿರ ನಿಂತನು. ಉದ್ಧವನು— ''ದೇವಾ! ನಮಗೆ ವಿಶ್ವೇಶ್ವರನ ಹಾಗು ಕಾಶೀಕ್ಷೇತ್ರದ ದರ್ಶನವು ನಿತ್ಯವೂ ಆಗುವಂತೆ ಮಾಡು" ಎಂದು ವಂದಿಸಿದನು. ಈಶ್ವರನು ಅವನ ಬೇಡಿಕೆಯನ್ನು ಮನ್ನಿಸಿ ಅವನಿಗೆ ಇಡೀ ಕಾಶೀಕ್ಷೇತ್ರದ ದೃಶ್ಯವನ್ನು ಅಲ್ಲಿಯೇ ತೋರಿಸಿದನು.

ಇದನ್ನೆಲ್ಲ ಪ್ರತ್ಯಕ್ಷ ನೋಡಿ ಅವನ ಬಂಧುಗಳು ಚಕಿತರಾದರು, ತಮ್ಮ ಅಣ್ಣನನ್ನು ಹುಚ್ಚನೆಂದು ಬಗೆದಿದ್ದ ಅವರು ಅವನನ್ನು ಜ್ಞಾನಿಯೆಂದು ನಿಶ್ಚಿತವಾಗಿ ತಿಳಿದರು. ಉದ್ಧವನು ತನ್ನ ಆ ಬಂಧುಗಳನ್ನು ಕುರಿತು— ''ಈ ನಮ್ಮ ಸ್ಥಾನವೇ ಕಾಶಿ ಯೆಂಬುವದನ್ನು ನೀವು ಪ್ರತ್ಯಕ್ಷ ಕಂಡಿರಿ, ಇನ್ನು ಮುಂದೆ ನಮ್ಮ ವಂಶದವರಾರೂ ಕಾಶೀ ಯಾತ್ರೆಗೆ ಹೋಗಬೇಕಾಗಿಲ್ಲ. ನಾವು ಇನ್ನು 'ಗೋಸಾವಿ'

ಎಂದು ತಿಳಿದುಕೊಳ್ಳಬೇಕು. ನೀವು ಇಲ್ಲಿಂದ ಪಂಢರ ಪುರಕ್ಕೆ ಹೋಗಿರಿ. ಅಲ್ಲಿ ಪಾಂಡುರಂಗನನ್ನು ಪೂಜಿಸುತ್ತ ಇದ್ದುಕೊಂಡು 'ಆರಾಧ್ಯ' ರೆಂದು ಪ್ರಸಿದ್ಧರಾಗಿರಿ. ಪ್ರತಿ ವರ್ಷ ಕಾರ್ತಿಕ ಯಾತ್ರೆಗೆ ಇಲ್ಲಿಗೆ ಬಂದು ಹೋಗಿರಿ. ಇಲ್ಲಿರುವ ಕಾಶೀ ತೀರ್ಥ ಸ್ನಾನ ಮಾಡಿರಿ" ಎಂದು ಉದ್ಧವನು ತನ್ನ ಬಂಧುಗಳಿಗೆ ಹೇಳಿದನು."

ಗುರುಗಳು ಶಿಷ್ಯರನ್ನು ಕುರಿತು— "ಆ ಉದ್ಧವನಿಂದಲೇ ಕಾಶೀ ತೀರ್ಥವು ಇಲ್ಲಿ ಪ್ರಕಟವಾಗಿದೆ" ಎನ್ನಲು ಅವರು ಅಲ್ಲಿ ಸ್ನಾನವನ್ನು ಮಾಡಿದರು. ಅಲ್ಲಿಂದ ಗುರುಗಳು ಶಿಷ್ಯರಿಂದ ಕೂಡಿಕೊಂಡು ಪಾಪವಿನಾಶನಿ ತೀರ್ಥಕ್ಕೆ ಹೋದರು, ಅಲ್ಲಿ ಸ್ನಾನ ಮಾಡಿದರು.

ಅಷ್ಟರಲ್ಲಿ ಗುರುಗಳ ಪೂರ್ವಾಶ್ರಮದ ಸಹೋದರಿ ರತ್ನಾಯಿಯು ಅಲ್ಲಿಗೆ ಬಂದಳು. ಆಕೆಯನ್ನು ಕುರಿತು ಗುರುಗಳು 'ನೀನಂತೂ ನಮ್ಮ ದರ್ಶನಕ್ಕೆ ಬಂದಿರುವಿ, ನಿನ್ನ ಜನ್ಮಾಂತರಗಳ ಪಾಪವು ನಿನ್ನನ್ನು ಅಂಟಿಕೊಂಡಿರುವದು. ಒಂದು ಕಾಲದಲ್ಲಿ ನೀನು ಐದು ಬೆಕ್ಕಿನ ಮರಿಗಳನ್ನು ಕೊಂದಿರುವಿ, ಆ ಪಾಪವು ನಿನಗೆ ವಿಶೇಷವಾಗಿ ಅಂಟಿಸಿ, ನಿನಗೆ ಮೈತುಂಬಾ ಬಿಳುಪಿನ ರೋಗ ಹಬ್ಬಿಸುವದು'' ಎಂದ ಕೂಡಲೆ ಅವಳು ಭಯಚಕಿತಳಾದಳು. ಗುರುಗಳು— 'ರತ್ನಾಯಿ ! ನಿನ್ನ ಪಾಪದ ಫಲವನ್ನು ಈ ಜನ್ಮದಲ್ಲಿ ಅನುಭೋಗಿಸದೆ ಮುಂದಿನ ಜನ್ಮದಲ್ಲಿ ಭೋಗಿಸುವಂತಿದ್ದರೆ, ಈಗಲೇ ನಿನ್ನ ಕಷ್ಟ ದೂರಾಗುವದು ಒಂದು ವೇಳೆ ಇದೇ ಜನ್ಮದಲ್ಲಿ ಅನುಭೋಗಿಸಿದರೆ ನಿನ್ನ ಜನ್ಮವೇ ಉದ್ಧಾರವಾಗುವದು'' ಎಂದರು. ಅದಕ್ಕೆ ಅವಳು— "ಸ್ವಾಮಿ ! ನಾನು ಏನೊಂದರಿಯದ ಮೂಢಳು. ಜಗದಾತ್ಮನಾದ ನೀನೇ ಎಲ್ಲವನ್ನೂ ತಿಳಿಯುವಿ'' ಎಂದೆನ್ನಲು ಗುರುಗಳು— ರತ್ನಾಯಿ! ನಿನಗೆ ಈಗಲೆ ಕುಷ್ಠರೋಗವು

ಪ್ರಾದುರ್ಭವಿಸುವದು" ಎಂದು ಹೇಳಿದಾಗಲೆ ಆಕೆಯ ಮೈಬಣ್ಣವು ಆಗಲೇ ಬಿಳಿದಾಯಿತು. ಅದನ್ನು ನೋಡಿ ಆಕೆ ಅಂಜಿದಳು. ಗುರುಗಳಿಗೆ ನಮಸ್ಕರಿಸಿ— "ಸ್ವಾಮಿ ! ಕೃಪೆ ಮಾಡು" ಎನ್ನಲು ಅವರು— "ರತ್ನಾಯಿ ! ನೀನು ಈಗಲೆ ಪಾಪವಿನಾಶಿನಿ ತೀರ್ಥಕ್ಕೆ ಹೋಗು. ಅಲ್ಲಿ ಸ್ನಾನ ಮಾಡು. ನಿತ್ಯ ಸ್ನಾನದಿಂದ ಸಪ್ತ ಜನ್ಮಗಳ ಪಾಪಗತಿಸುವದು" ಎಂದು ಹೇಳಲು ರತ್ನಾಯಿಯು ಆ ತೀರ್ಥ ಸ್ನಾನ ಕೈಕೊಂಡಳು. ಆಕೆ ಮೂರೇ ದಿನ ಸ್ನಾನ ಮಾಡಲು ಅವಳ ರೋಗ ದೂರಾಯಿತು. ಮುಂದೆ ರತ್ನಾಯಿಯು ಗುರುಮಠದಲ್ಲಿಯೇ ಇರಹತ್ತಿದಳು. ಶಿಷ್ಯರೆ ! ಪಾಪವಿನಾಶಿನಿ ತೀರ್ಥ ಮಹಿಮೆ ಹೀಗಿರುವದು. ಇದನ್ನು ನೀವು ಆಚರಿಸಿದ ನಂತರ 'ಕೋಟಿತೀರ್ಥ' ಸ್ನಾನ ಮಾಡಿರಿ. ಈ ತೀರ್ಥದ ಮಹಿಮೆಯು ವಿಶೇಷವಿದೆ. ಇಡೀ ಜಂಬೂದ್ವೀಪದಲ್ಲಿ ಇರುವ ತೀರ್ಥ ಸಂಖ್ಯೆಯಷ್ಟು ತೀರ್ಥಗಳ ಮಹಿಮೆಯು ಈ ತೀರ್ಥದಲ್ಲಿರುವದು. ಈ ತೀರ್ಥದ ತರುವಾಯ 'ರುದ್ರಪದ' ತೀರ್ಥ ಸ್ನಾನ ಮಾಡಿರಿ. ಆ ಮೇಲೆ ಗಯಾತೀರ್ಥ, ಚಕ್ರತೀರ್ಥ, ಗಳಲ್ಲಿ ಸ್ನಾನ ಮಾಡಿರಿ.

ಶಿಷ್ಯರೆ ! ಇಷ್ಟಾದಮೇಲೆ ಈ ಗ್ರಾಮದ ಪೂರ್ವಕ್ಕೆ ಕಲ್ಲೇಶ್ವರ ದೇವಸ್ಥಾನವಿರುವದು. ಈ ಕ್ಷೇತ್ರವು ಗೋಕರ್ಣ ಮಹಾಬಲೇಶ್ವರ ಕ್ಷೇತ್ರಕ್ಕೆ ಸಮನಾದ ಪುಣ್ಯಕರವಾಗಿರುವದು. ಅಲ್ಲಿರುವ 'ಮನ್ಮಥ ತೀರ್ಥದಲ್ಲಿ ಸ್ನಾನ ಮಾಡಿ ಕಲ್ಲೇಶ್ವರನನ್ನು ಭಕ್ತಿಯಿಂದ ಪೂಜಿಸಲು ಅಷ್ಟೈಶ್ವರ್ಯ ಪಡೆಯುವಿರಿ. ಆ ದೇವನಿಗೆ ಶ್ರಾವಣಮಾಸದಲ್ಲಿ ಸಂತತಧಾರೆಯ ಅಭಿಷೇಕವನ್ನೂ ಕಾರ್ತಿಕಮಾಸದಲ್ಲಿ ದೀಪಾರಾಧನೆಯನ್ನೂ ಮಾಡಲು ಅನಂತ ಪುಣ್ಯ ಲಭಿಸುವದು.

"ಶಿಷ್ಯರೆ ! ಈ ಪ್ರಕಾರ ಸಂಗಮದಲ್ಲಿರುವ ಅಷ್ಟತೀರ್ಥಗಳ ಮಹಿಮೆಯನ್ನು ನಿಮಗೆ ಹೇಳಿದೆವು. ಇಷ್ಟೆಲ್ಲ ತೀರ್ಥಗಳ ಅನುಕೂಲತೆಯು ಇಲ್ಲಿ ಇರುವದು. ಅಂದಮೇಲೆ ಅಷ್ಟೊಂದು ದೂರದಲ್ಲಿರುವ ಕಾಶಿಯ ಯಾತ್ರೆಯ ಕಷ್ಟವನ್ನು ಅದೇಕೆ ಕೈಕೊಳ್ಳಬೇಕು? '' ಎಂದು ಗುರುಗಳು ಶಿಷ್ಯರಿಗೆ ಅಷ್ಟತೀರ್ಥ ಮಹಿಮೆ ಹೇಳಿದರು.

ನಂತರ ಗುರು–ಶಿಷ್ಯರೆಲ್ಲರು ಗುರುಮಠಕ್ಕೆ ಬಂದರು. ಈ ಪ್ರಕಾರ ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೫೦ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನನ್ನು ಕುರಿತು— "ನಾಮಧಾರಕನೆ ಈ ಮೊದಲು ನಿನಗೆ ರಜಕನೊಬ್ಬನು ರಾಜ್ಯಪದಹೊಂದಿದ ಕಥೆಯನ್ನು ನಿನಗೆ ಹೇಳುವೆನು. ಆ ರಜಕನು ಬೀದರ ಪಟ್ಟಣದ ಮ್ಲೇಂಛ ರಾಜವಂಶದಲ್ಲಿ ಜನ್ಮಿಸಿ ಸಕಲ ಸಂಪದುಗಳಿಂದ ಯುಕ್ತನಾಗಿ ಅಲ್ಲಿ ರಾಜ್ಯವಾಳುತ್ತಿದ್ದನು. ಈಗ ಅವನು ಯವನ ಜಾತಿಯವನಾಗಿದ್ದರೂ ದಾನ–ಧರ್ಮಾದಿ ಪುಣ್ಯಕರ್ಮಗಳನ್ನು ಮಾಡುತ್ತಿದ್ದನು. ಎಲ್ಲ ಜಾತಿಯವರನ್ನು ಅವನು ಸಮಭಾವದಿಂದ ತಿಳಿಯುತ್ತಿದ್ದನು. ಪೂರ್ವ ಸಂಸ್ಕಾರದಿಂದ ಅವನು ಬ್ರಾಹ್ಮಣರನ್ನು ಅತಿ ಪೂಜ್ಯರೆಂದು ಮರ್ಯಾದಿಸುತ್ತಿದ್ದನು. ಅವನ ಜಾತಿಯ

ಪುರೋಹಿತರಾದ ಕಾಜಿಗಳು ಅವನ ಈ ವೃತ್ತಿಯನ್ನು ದೂರ ಮಾಡುವದಕ್ಕಾಗಿ ಯವನ ಧರ್ಮದ ಜಾತಿ-ನೀತಿಗಳನ್ನು ಅವನಿಗೆ ಬೋಧಿಸಹತ್ತಿದರು. ಹಾಗು ಅವನಿಗೆ— 'ಸ್ವಜಾತಿಯ ಧರ್ಮವನ್ನನುಸರಿಸಿ ವರ್ತಿಸುವದೇ ಶ್ರೇಯಸ್ಕರವು ಎಂದು ನಿತ್ಯವೂ ಹೇಳುತ್ತಿದ್ದರು. ಮತ್ತು ಬ್ರಾಹ್ಮಣ ಜಾತಿಯನ್ನು ಹೀಯಾಳಿಸಿ— "ರಾಜಾ! ಬ್ರಾಹ್ಮಣರು ಮೂರ್ತಿಪೂಜೆ ಮಾಡುವರು, ಎಲ್ಲ ಭೂತಮಾತ್ರಗಳಲ್ಲಿ ದೇವತ್ವವನ್ನು ತಿಳಿಯುವರು. ಕಲ್ಲು-ಕಟ್ಟಿಗೆ, ಗಿಡ-ಮರಗಳನ್ನೂ ಆಕಳುಗಳನ್ನೂ ದೇವ ಭಾವನೆಯಿಂದ ಪೂಜಿಸುವರು. ನಿರಾಕಾರನನ್ನು ಸಾಕಾರವನ್ನಾಗಿ ಎಣಿಸುವರು. ಇಂಥ ಬ್ರಾಹ್ಮಣರನ್ನು ಸೇವಿಸುವದು ಮ್ಲೇಂಛರಿಗೆ ಯೋಗ್ಯವಲ್ಲ. ಆದರಿಂದ ನರಕವು ತಪ್ಪಲಾರದು" ಎಂದು ಸ್ಪಷ್ಟವಾಗಿಯೇ ಆ ರಾಜನಿಗೆ ಉಪದೇಶ ಮಾಡುತ್ತಿದ್ದರು.

ರಾಜನು ಕಾಜಿಗಳ ಈ ಬೋಧನೆಗೆ ಕಿವಿಗೊಡುತ್ತಿರಲಿಲ್ಲ. ಅವನು ಅವರಿಗೆ ಪ್ರತ್ಯುತ್ತರವಾಗಿ— "ಎಲೈ ನೀವೆಲ್ಲರು ಮಂದಮತಿಗಳು, ಸರ್ವೇಶ್ವರನು ಅಣು-ರೇಣು-ತೃಣ-ಕಾಷ್ಠಗಳಲ್ಲೆಲ್ಲ ಪರಿಪೂರ್ಣನಾಗಿರುವನು. ಅವನಿಂದಲೇ ಸೃಷ್ಟಿ ಸ್ಥಿತಿ-ಲಯ ಕಾರಣಗಳೊದಗುವವು. ಅವನು ಸರ್ವವ್ಯಾಪಿಯು. ತರ್ಕಭೇದದಿಂದ ಅವನನ್ನು ಮಂದಮತಿಗಳು ಅನೇಕ ಭೇದಗಳಿಂದ ಹೇಳುವರು. ಎಲ್ಲ ಜಾತಿಗಳೂ ಪಂಚಭೂತಗಳು. ಎಲ್ಲರಿಗೂ ಪೃಥ್ವಿಯು ಒಂದೇ ಹಾಗು ಆಕಾಶವು ಒಂದೇ ಅಲ್ಲವೇ? ಎಲ್ಲರ ದೇಹಗಳು ಭಿನ್ನಭಿನ್ನವಾಗಿದ್ದರೂ ಪರಮಾತ್ಮನು ಒಬ್ಬನೇ ಪೂರ್ಣನಿರುವನು. ಭಿನ್ನತೆಯನ್ನೆಣಿಸಕೂಡದು. ಜಗತ್ತೆಲ್ಲ ಪರಮಾತ್ಮನ ಸೂತ್ರದಿಂದ ಚಲಿಸುತ್ತಿರುವದು. ಪಾಷಾಣಪೂಜೆ-ಪ್ರತಿಮಾಪೂಜೆಗಳೆಂದರೇನು? ಅವೆಲ್ಲವು

ಗಳಲ್ಲಿ ವಿಶ್ವಾತ್ಮನು ಪೂರ್ಣನಿರುವನು. ಆ ಪ್ರತಿಮೆಗಳಿಗೆ ಅವರು ದೇವರ ಹೆಸರನ್ನಿಟ್ಟುಕೊಂಡೇ ಪೂಜಿಸುವರು. ಮನಸ್ಥಿರತೆಗಾಗಿ ಅವರು ಪ್ರತಿಮಾ ಪೂಜೆಮಾಡುವರು. ಇಂಥ ಬ್ರಾಹ್ಮಣರನ್ನು ನೀವು ನಿಂದಿಸುವದು ಯೋಗ್ಯವಲ್ಲ." ಈ ಪ್ರಕಾರ ರಾಜನು ಅವರಿಗೆ ಹೇಳುತ್ತಿದ್ದನು.

ಈ ಪ್ರಕಾರ ಇರುತ್ತಿರಲು ಮುಂದೆ ಕೆಲವುದಿನಗಳ ನಂತರ ರಾಜನ ತೊಡೆಗೆ ಒಂದು ಅಸಾಧ್ಯವಾದ ವ್ರಣವು ಹುಟ್ಟಿತು. ಆ ಹುಣ್ಣಿನ ಬಾಧೆಯು ಅವನಿಗೆ ತಡೆಯದಂತಾಯಿತು ಔಷಧೋಪಚಾರಗಳು ನಡೆಯದಂತಾದವು.

ಇತ್ತ ಗಾಣಗಾಪುರದಲ್ಲಿ— ಶ್ರೀ ಗುರುಗಳು ತಮ್ಮ ವಿಚಾರದಿಂದ,— "ಇನ್ನು ಇಲ್ಲಿಗೆ ಮ್ಲೇಂಛರು ಬರುವರು, ಅವರಿಂದ ಬ್ರಾಹ್ಮಣರಿಗೆ ಪೀಡೆಯೊದಗುವದು. ಇನ್ನು ನಾವು ಇಲ್ಲಿ ಇರಕೂಡದು. ನಮ್ಮ ಮಹಿಮೆ ಪ್ರಖ್ಯಾತವಾಯಿತು, ಲೌಕಿಕಾರ್ಥವಾಗಿ ನಾವು ಗುಪ್ತವಿರುವದು ಒಳಿತು. ಈಗ ಈಶ್ವರ ಸಂವತ್ಸರವು ನಡೆದಿದೆ. ಗುರುವು ಸಿಂಹಕಾಶಿಗೆ ಬಂದಿರುವನು. ಈ ನಿಮಿತ್ತವನ್ನು ಮುಂದಿಟ್ಟುಕೊಂಡು ನಾವು ಗೌತುಮಿ ಯಾತ್ರೆ ಕೈಕೊಳ್ಳಬೇಕು" ಎಂದು ಎಲ್ಲ ಶಿಷ್ಯರಿಗೆ ಹೇಳಿದರು. ಅವರು— "ನೀವೆಲ್ಲರು ಗೌತುಮಿಗೆ ನಡೆಯಿರಿ ಇಲ್ಲಿಯೇ ಇದ್ದರೆ ಯವನ ರಾಜನು ನಮ್ಮನ್ನು ಕರೆಯಿಸುವನು' ಎಂದು ಶಿಷ್ಯರಿಗೆ ಹೇಳಿದರು. ಶಿಷ್ಯರೆಲ್ಲ ಬೆದರಿದರು.

ಅತ್ತ ಬೀದರದಲ್ಲಿ— ರಾಜನಿಗೆ ಹುಟ್ಟಿದ ಹುಣ್ಣು ಯಾವ ಉಪಚಾರದಿಂದಲೂ ಗುಣವಾಗಲೊಲ್ಲದು. ವೈದ್ಯರು ತಮ್ಮ ಅಸಮರ್ಥತೆ ತೋರಿಸಿದರು. ಆಗ ರಾಜನು ಬ್ರಾಹ್ಮಣರನ್ನು ಕರೆಯಿಸಿ ತನ್ನ

ರೋಗ ಶಮನದ ಉಪಾಯವನ್ನು ಕೇಳಿದನು. ಅದಕ್ಕೆ ಬ್ರಾಹ್ಮಣರು-- "ರಾಜಾ ! ಪ್ರಾಕ್ತನ ಕರ್ಮಗಳು ಈ ಜನ್ಮದಲ್ಲಿ ರೋಗ ರೂಪದಿಂದ ಪ್ರಾದುರ್ಭವಿಸುವವು. ಈ ಪ್ರಕಾರದ ವ್ಯಾಧಿಗಳು ದಾನ ಧರ್ಮಾದಿಗಳಿಂದ ದೂರಾಗುವವು. ಅಥವಾ ಸತ್ಪುರುಷ ಸಾಧು-ಯತಿಗಳ ಕೃಪಾದೃಷ್ಟಿಯಿಂದ ನಿರ್ನಾಮವಾಗುವವು" ಎಂದು ಹೇಳಿದರು. ಬ್ರಾಹ್ಮಣರ ಈ ಹೇಳಿಕೆಯು ರಾಜನ ಹೃದಯಕ್ಕೆ ಒಪ್ಪಿಗೆಯಾಯಿತು. ಕೂಡಲೆ ಅವನು— "ವಿಪ್ರೋತ್ತಮರೆ ! ಅಂಥ ಮಹಾಮಹಿಮೆಯುಳ್ಳ ಸ್ವಾಮಿಗಳು ಎಲ್ಲಿ ಇರುವರು ? " ಎಂದು ಕೇಳಲು ಬ್ರಾಹ್ಮಣರು-- "ರಾಜನ್ ! ಅಮರಜಾ-ಭೀಮಾ ಸಂಗಮದ ಬಳಿಯಲ್ಲಿ ಪಾಪವಿನಾಶಿನಿ ಎಂಬ ತೀರ್ಥವಿರುವದು. ಅದು ಏಕಾಂತ ಹಾಗು ಮಹತ್ವದ ಸ್ಥಾನವಾಗಿರುವದು. ನೀವು ಆ ತೀರ್ಥಕ್ಕೆ ಜಲಕ್ರೀಡೆಯ ವಿನೋದವೆಂದು ಹೋಗಿರಿ ಸ್ನಾನ ಮಾಡಿರಿ, ಅಲ್ಲಿ ಒಬ್ಬರು ಮಹಾನುಭಾವ ಯತಿಗಳು ವಾಸವಾಗಿರುವರು. ಅವರ ಕೃಪಾದೃಷ್ಟಿಯಿಂದ ನಿಮ್ಮ ರೋಗ ದೂರಾಗುವದು" ಎಂದು ಹೇಳಿದರು.

ಬ್ರಾಹ್ಮಣರ ಹೇಳಿಕೆಯನ್ನು ಒಪ್ಪಿ ರಾಜನು ಮರುದಿನವೇ ಪಾಪವಿನಾಶಿನಿ ತೀರ್ಥಸ್ನಾನಕ್ಕೆಂದು ಪರಿವಾರ ಸಹಿತ ಹೊರಟನು. ಆ ತೀರ್ಥಕ್ಕೆ ಹೋದನು. ಎಲ್ಲರನ್ನು ಹಿಂದಿರಿಸಿ ತಾನೊಬ್ಬನೇ ಆ ತೀರ್ಥದ ಸನಿಹಕ್ಕೆ ಹೋದನು. ಅಷ್ಟರಲ್ಲಿ ಒಬ್ಬ ಯತಿಯು ಅಲ್ಲಿಗೆ ಬಂದನು. ರಾಜನು ಆ ಯತಿಗೆ ನಮಸ್ಕರಿಸಿದನು. ಹಾಗು ತನ್ನ ವ್ರಣವನ್ನು ಆ ಯತಿಗೆ ತೋರಿಸಿ ಅದರ ಉಪಶಮನದ ಉಪಾಯ ಕೇಳಿದನು. ಆಗ ಯತಿಯು-- ರಾಜಾ ! ಇಂಥ ವ್ಯಾಧಿಗಳು ಮಹಾನುಭಾವರ ದರ್ಶನದಿಂದ ನಿಶ್ಶೇಷವಾಗಿಯೂ

ಮಹಾಭಾಗನವ್ರ" ಎಂದು ಹೇಳಿ ಅವನಿಗೆ ಮಹಾನುಭಾವರ ದರ್ಶನ ಫಲವನ್ನು ಸ್ಪಷ್ಟೀಕರಿಸುವ ಕಥೆ ಯೊಂದನ್ನು ಹೇಳಿದನು. ಆ ಕಥೆ ಯಾವುದೆಂದರೆ —

"ರಾಜಾ ! ಅವಂತಿಯಲ್ಲಿ ದುರಾಚಾರಿ ಬ್ರಾಹ್ಮಣನಿದ್ದನು. ಅವನು ಜಾತಿಭ್ರಷ್ಟನಾಗಿ ಪಿಂಗಳೆ ಎಂಬ ವೇಶ್ಯೆಯ ಮನೆ ಸೇರಿದನು. ಅವನ ಆಹಾರ-ವಿಹಾರಗಳೆಲ್ಲ ಅಲ್ಲಿಯೇ ನಡೆದವು. ಹೀಗಿರಲು ಒಂದು ದಿನ ಋಷಭನೆಂಬ ಯೋಗಿಯು ಆ ವೇಶ್ಯೆಯ ಮನೆಗೆ ಭಿಕ್ಷೆಗೆ ಬಂದನು. ಬ್ರಾಹ್ಮಣನೂ ವೇಶ್ಯೆಯೂ ಆ ಯೋಗಿಯನ್ನು ಸತ್ಕರಿಸಿದರು. ಮುಂದೆ ಕೆಲ ದಿನಗಳ ಮೇಲೆ ಆ ಇಬ್ಬರೂ ಜಾರ-ಜಾರಿಯರು ಮೃತಪಟ್ಟರು. ಪೂರ್ವ ಕರ್ಮಾನು-ಬಂಧದಿಂದ ಅವರಿಬ್ಬರು ರಾಜವಂಶದಲ್ಲಿ ಜನ್ಮಿಸಿದರು. ಪಿಂಗಲೆಯು ದಶಾರ್ಣದ ರಾಜನಾದ ವಜ್ರ ಬಾಹುವಿನ ಪತ್ನಿ ಸುಮತಿಯಾದಳು. ಆ ಬ್ರಾಹ್ಮಣನು ರಾಜನ ಹಿರಿಯ ಹೆಂಡತಿಯ ಉದರದಿಂದ ಜನಿಸಿದನು. ರಾಜನಿಗೆ ಪುತ್ರ ಜನ್ಮಿಸಿದ್ದರಿಂದ ಎಲ್ಲರಿಗೂ ಆನಂದ ! ಆದರೆ ಸುಮತಿಗೆ ಮಾತ್ರ ಹೊಟ್ಟೆಕಿಚ್ಚು ! ಆಗ ಅವಳು ಸವತಿಮತ್ಸರದಿಂದ ಯಾರಿಗೂ ಅರಿಯದಂತೆ ತನ್ನ ಸವತಿಗೂ ಆಕೆಯ ಮಗನಿಗೂ ಹಾವಿನ ವಿಷವನ್ನು ಪ್ರಯೋಗಿಸಿದಳು. ಅದರಿಂದ ಆ ತಾಯಿ-ಮಗ ಇವರಿಬ್ಬರ ಮೈಯಲ್ಲಿ ವಿಷವ್ಯಾಪಿಸಿ ಇಬ್ಬರಿಗೂ ಮೈತುಂಬಾ ಹುಣ್ಣುಗಳಾದವು. ಆ ಹುಣ್ಣುಗಳ ದುರ್ವಾಸನೆಯು ಎಲ್ಲರಿಗೂ ಅಸಹ್ಯವಾಯಿತು, ಸ್ವತಃ ರಾಜನೂ ಅದರಿಂದ ಬೇಜಾರುಪಟ್ಟನು. ಕಡೆಗೆ ಅವನು ತನ್ನ ಆ ಹೆಂಡತಿಯನ್ನೂ ಮಗನನ್ನೂ ಒಂದು ಘೋರಾರಣ್ಯದಲ್ಲಿ ತ್ಯಾಗಮಾಡಿಸಿದನು.

ಹೀಗೆ ತ್ಯಾಗಮಾಡಲ್ಪಟ್ಟ ಆ ರಾಜ ಪತ್ನಿಯು ಮಗನೊಂದಿಗೆ ಒಂದು ಪಟ್ಟಣ ಸೇರಿದಳು. ವ್ಯಾಧಿಯ ಯಾತನೆಯು ಅವರಿಬ್ಬರಿಗೂ ಅಸಹ್ಯವಾಯಿತು. ಅಲ್ಲಿಯ ಧರ್ಮಾತ್ಮ ವೈಶ್ಯನೊಬ್ಬನು ಆ ತಾಯಿ–ಮಗ ಇವರನ್ನು ಸಂರಕ್ಷಿಸಹತ್ತಿದನು. ಆ ರಾಜಪುತ್ರನ ವ್ರಣಬಾಧೆ ಹೆಚ್ಚಾಗಿ ಒಂದುದಿನ ಸತ್ತನು. ತಾಯಿಯು ಶೋಕಪಡಹತ್ತಿದಳು, ಆಗ ಒಬ್ಬ ಯೋಗಿಯು ಅಲ್ಲಿಗೆ ಬಂದು ಆಕೆಗೆ ಬೋಧಿಸಿದನು. ಹಾಗೂ ಸಿದ್ಧಭಸ್ಮವನ್ನು ಪ್ರೋಕ್ಷಿಸಿ ಮೃತಬಾಲಕನನ್ನು ಸಜೀವಗೊಳಿಸಿದನು ಹಾಗು ಆ ಭಸ್ಮದಿಂದ ಅವಳ ವ್ಯಾಧಿಯನ್ನೂ ಗುಣಪಡಿಸಿದನು. ಆ ಯೋಗಿಯೇ ಪೂರ್ವಜನ್ಮದಲ್ಲಿ ಅವರಿಂದ ಸತ್ಕಾರ ಹೊಂದಿದ ಋಷಭನು.''

ಯವನರಾಜನಿಗೆ ಯತಿಯು ಈ ಕಥೆ ಹೇಳಿ— "ರಾಜಾ ! ಹೋಗು, ಗಾಣಗಾಪುರಕ್ಕೆ ಹೋಗು. ಅಲ್ಲಿ ಒಬ್ಬ ಸತ್ಪುರುಷರಿರುವರು. ಅವರ ದರ್ಶನ ಪಡೆ, ನಿನ್ನ ರೋಗವು ಗುಣವಾಗುವದು' ಎಂದು ಹೇಳಿ ಅಲ್ಲಿಂದ ಹೋದನು.

ರಾಜನು ಯತಿಯ ಹೇಳಿಕೆಯ ಮೇಲೆ ವಿಶ್ವಾಸವಿಟ್ಟು ಗಾಣಗಾಪುರ ಗ್ರಾಮದಲ್ಲಿ ಬಂದನು. ಯವನರಾಜನು ಬಂದ ವಾರ್ತೆ ಊರಲ್ಲೆಲ್ಲ ಹಬ್ಬಿತು. ಬ್ರಾಹ್ಮಣರು ಗಾಬರಿಯಾದರು. ಗುರುಗಳು ಸಂಗಮಕ್ಕೆ ಹೋಗುವದನ್ನು ಕೇಳಿ ರಾಜನು ತಾನೊಬ್ಬನೇ ಅಲ್ಲಿಗೆ ಹೋದನು. ದೂರಿನಿಂದಲೇ ಗುರುಗಳನ್ನು ಕಂಡು ವಂದಿಸಿದನು. ಅವನು ಗುರುಗಳ ಸನಿಹಕ್ಕೆ ಹೋದ ಕೂಡಲೆ ಗುರುಗಳು ಆ ರಾಜನನ್ನು

ಕುರಿತು—"ಎಲೋ ರಜಕನೆ ! ಎಲ್ಲಿ ಇರುವಿ? ನನ್ನ ಶಿಷ್ಯನಾದ ನಿನ್ನ ಭೆಟ್ಟಿಯು ಬಹು ದಿವಸಕ್ಕೆ ಆಯಿತು"ಎಂದು ನುಡಿಯುವಷ್ಟರಲ್ಲಿಯೇ ಅವನಿಗೆ ಪೂರ್ವ ಜನ್ಮದ ಸ್ಮೃತಿಯಾಗಿ ಅವನು ಗುರುಗಳಿಗೆ ವಂದಿಸಿದನು. ಹಾಗು ಅವರನ್ನು ಸ್ತುತಿಸಿದನು. ತನಗಾದ ಹುಣ್ಣಿನ ವ್ಯಥೆಯನ್ನು ಹೇಳಿದನು. ಆಗ ಗುರುಗಳು ನಗುತ್ತ— "ರಾಜಾ! ನಿನಗಾದ ಹುಣ್ಣು ನಮಗೆ ತೋರಿಸು' ಎಂದೆನ್ನಲು ರಾಜನು ನೋಡಿಕೊಳ್ಳುತ್ತಾನೆ! ತನಗಾದ ಆ ಹುಣ್ಣು ನಿವಾರಣೆಯಾಗಿ ಹೋಗಿತ್ತು. ಅದರ ವ್ಯಥೆಯೂ ಇದ್ದಿರಲಿಲ್ಲ ಚಕಿತನಾದನು. ಗುರುಮಹಿಮೆಯನ್ನು ಕೊಂಡಾಡುತ್ತ ಪುನಃ ಪುನಃ ನಮಸ್ಕರಿಸಿದನು. ಹಾಗು ತನ್ನ ಧನ್ಯತೆಯನ್ನು ವ್ಯಕ್ತ ಪಡಿಸಿ ತಾವು ನನ್ನ ರಾಜಧಾನಿಗೆ ಬರಬೇಕೆಂದು ಆಗ್ರಹತೊಟ್ಟನು.

ನಂತರ ಗುರುಗಳು ಸಂಗಮದಿಂದ ಗುರುಮಠಕ್ಕೆ ಬಂದರು. ರಾಜನು ಅವರ ಜೊತೆಯಲ್ಲಿಯೇ ಇದ್ದನು. ಗುರುಗಳು ಅವನನ್ನು ಕುರಿತು— 'ರಾಜಾ ! ಇನ್ನು ನಾವು ಗೌತಮಿಗೆ ಹೊರಡುವೆವು. ಇನ್ನು ಇಲ್ಲಿಂದ ಹೋಗು. ಅನಂತರ ನಾವು ನಿನ್ನ ನಗರವನ್ನು ಸಂದರ್ಶಿಸುವೆವು" ಎಂದು ಹೇಳಿ ರಾಜನನ್ನು ಬೀಳ್ಕೊಟ್ಟು ಕಳಿಸಿದರು. ಹಾಗು ಆಗಲೇ ಶಿಷ್ಯರೊಡನೆ ರಾಜನ ಅಪೇಕ್ಷೆಯಂತೆ ಬೇದರ ಪಟ್ಟಣಕ್ಕೆ ಹೋಗಿ ರಾಜನಿಂದ ಸತ್ಕಾರಹೊಂದಿ ಹಿಂತಿರುಗಿದರು. ರಾಜನು ಯವನನಾದರೂ ಶ್ರೀ ಗುರುಗಳನ್ನು ಬಹು ಸಂಭ್ರಮದಿಂದ ಧರ್ಮ ಜಾತಿಗಳೆನ್ನದೆ ಮರ್ಯಾದಿಸಿ ಬೀಳ್ಕೊಟ್ಟನು.

ಬಳಿಕ ಗುರುಗಳು ಶಿಷ್ಯರೊಡನೆ ಹೋಗಿ ಗೌತಮೀ ಯಾತ್ರೆಯನ್ನು ಮುಗಿಯಿಸಿಕೊಂಡು ಗಾಣಗಾಪುರಕ್ಕೆ ಬಂದರು. ಎಲ್ಲರಿಗೂ ಸಂತೋಷವಾಯಿತು.

ಆ ಬಳಿಕ ಗುರುಗಳು ಶಿಷ್ಯರನ್ನು ಕರೆದು— "ಈಗ ನಮ್ಮ ಖ್ಯಾತಿಯು ಹೆಚ್ಚಾಗಿ ಪ್ರಕಟವಾಯಿತು. ಇನ್ನು ನಾವು ಗುಪ್ತರೂಪವಾಗಿ ಇರಬೇಕಾಗುವದು. ಯಾತ್ರಾರ್ಥವಾಗಿ ಶ್ರೀಶೈಲಕ್ಕೆ ಹೋಗುವೆವೆಂದು ಪ್ರಕಟಪಡಿಸಿದರೂ ಸ್ವಾಭಾವಿಕ ರಹಸ್ಯರೂಪದಿಂದ ಇಲ್ಲಿಯೇ ಇರುವೆವು. ಈ ಗಾಣಗಾಪುರವೇ ನಮ್ಮ ಸ್ಥಾನವು.

ಇನ್ನು ಯುಗಧರ್ಮವು ಕಠಿಣ ದಿನಗಳಲ್ಲಿ ಸಿಕ್ಕುವದು. ಅಧರ್ಮಿಗಳ ಪ್ರಾಬಲ್ಯವಾಗುವದು. ಅಧರ್ಮಿಗಳ ಪ್ರಾಬಲ್ಯವಾಗುವದು" ಎಂದು ಗುರುಗಳು ಶಿಷ್ಯರಿಗೆ ಹೇಳಿದರು.

ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—o—

## ೫೧ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಸಿದ್ಧಮುನಿಯು ನಾಮಧಾರಕನಿಗೆ— ಶ್ರೀಗುರು

ಗಳು ಪೀವರದ ರಾಜನಿಗೆ ದರ್ಶನ ಕೊಟ್ಟು ಗೌತಮಿಗೆ ಹೋದರು. ನಂತರ ಗಾಣಗಾಪುರಕ್ಕೆ ಬಂದು ಗುರುಮಠದಲ್ಲಿ ಕುಳಿತು ಆಲೋಚಿಸಹತ್ತಿದರು. ಅವರು ತಮ್ಮ ಮನಸಿನಲ್ಲಿ— 'ಇನ್ನು ನಾವು ಪ್ರಕಟರಾಗಿ ಇರುವದು ಒಳ್ಳೆತಾಗದು. ಲೋಕೋಪಚಾರಕ್ಕೆಂದು ಗುಪ್ತವಾಗಿಯೇ ಇರುವದು ಯೋಗ್ಯವು. ಯವನರಾಜನು ಭಕ್ತಿಯಿಂದ ನಮ್ಮನ್ನು ಕರಕೊಂಡು ಹೋದನು. ಮ್ಲೇಂಛನಲ್ಲಿಯೇ ಇಂಥ ಭಕ್ತಿಯು ತೋರಹತ್ತಿತೆಂದಮೇಲೆ ಇನ್ನು ಹಲವು ಜಾತಿಯ ಜನರೂ ದರ್ಶನಕ್ಕೆಂದು ಬರುವರು. ಆದ್ದರಿಂದ ಗುಪ್ತವಿರುವದೇ ಲೇಸು" ಎಂದು ವಿಚಾರಮಾಡಿದರು. ಮತ್ತು ತಮ್ಮ ವಿಚಾರದಂತೆ ಅವರು ಶಿಷ್ಯರೊಡನೆ ಶ್ರೀಶೈಲಗಿರಿಗೆ ಹೊರಡಲು ಸಿದ್ಧರಾದರು. ಭಕ್ತ ಜನರಿಗೆಲ್ಲ ಈ ವಾರ್ತೆ ಗೊತ್ತಾಗಿ ಅವರೆಲ್ಲರು ಗುರುಗಳ ನಿರ್ಗಮನವಾಗುವದೆಂದು ಚಿಂತಿಸಹತ್ತಿದರು. ತಮ್ಮನ್ನು ಬಿಟ್ಟು ಹೋಗಬಾರದೆಂದು ಆ ಭಕ್ತರೆಲ್ಲರು ಬಂದು ಗುರುಗಳಲ್ಲಿ ಮೊರೆಯಿಟ್ಟರು.

ಗುರುಗಳು ಭಕ್ತರನ್ನು ಸಾಂತ್ವನಗೊಳಿಸುವ ಕುರಿತು— "ಎಲೈ! ನೀವೆಲ್ಲರು ನಮ್ಮ ಬಗೆಗೆ ಚಿಂತಿಸಬೇಡಿರಿ. ನಾವು ಲೌಕಿಕವಾಗಿ ನಿಮ್ಮಿಂದ ಅಂತರಿಸಿದರೂ ಯಾವಾಗಲೂ ಈ ಗುರುಮಠದಲ್ಲಿಯೇ ವಾಸವಾಗಿ ಇರುವೆವು. ನಿತ್ಯವೂ ಪ್ರಾತಃಕಾಲದಲ್ಲಿ ನಾವು ಕೃಷ್ಣೆಯ ಸ್ನಾನಮಾಡಿ ಪುಣ್ಯವೃಕ್ಷ ಔದುಂಬರ ನಿವಾಸಿಗಳಾಗುವೆವು. ಪಂಚಕ್ಷೇತ್ರದಲ್ಲಿ ಅನುಷ್ಠಾನ ಮುಗಿಯಿಸಿ ಮಧ್ಯಾಹ್ನದಲ್ಲಿ ಈ ಗ್ರಾಮಾತೀರಕ್ಕೆ ಬರುವೆವು. ಅಮರಜಾ ಸಂಗಮದಲ್ಲಿ ಸ್ನಾನ ಮಾಡುವೆವು. ಮಠದಲ್ಲಿ ನಿರ್ಗುಣ ಪೂಜೆ ಸ್ವೀಕರಿಸುವೆವು. ಇದೇ ನಮ್ಮ ದಿನದ ಕಾರ್ಯಕ್ರಮವೆಂದು ನೀವು ಅರಿತುಕೊಂಡು ಚಿಂತೆಯಿಲ್ಲದೆ ಇದ್ದು ಬಿಡಿರಿ. ತ್ರಿಕಾಲವೂ

ನಾವು ಈ ಗಾಣಗಾಪುರದಲ್ಲಿ ಇದ್ದೇ ಇರುವೆವು. ಇದಕ್ಕೆ ಸಂಶಯ ತಿಳಿಯಬೇಡಿರಿ. ನಮ್ಮ ಭಕ್ತಿಯ ನ್ನಾಚರಿಸುವ ನಿಷ್ಠಾವಂತರಿಗೆಲ್ಲ ನಮ್ಮ ಪ್ರತೀತಿಯು ಕಂಡುಬರುವದು. ಅವರ ಮನಸಿನ ಬಯಕೆಗಳೆಲ್ಲ ಈಡೇರುವವು. ಈ ನಮ್ಮ ವಾಕ್ಯವು ನಿಶ್ಚಯವೆಂದು ತಿಳಿಯಿರಿ ಸಂಗಮದಲ್ಲಿಯ ಅಶ್ವತ್ಥವೃಕ್ಷವು ಪ್ರತ್ಯಕ್ಷ ಕಲ್ಪವೃಕ್ಷವೆಂದು ತಿಳಿದು ನೀವು ಪೂಜಿಸಿರಿ. ತರುವಾಯ ನಮ್ಮ ಸ್ಥಾನಕ್ಕೆ ಬಂದು ಬಿಡಿರಿ, ಅಲ್ಲಿ ನಮ್ಮ ಪಾದುಕೆಗಳನ್ನು ಇಟ್ಟಿರುವೆವು. ನೀವು ಮನೋಭಾವದಿಂದ ಪಾದುಕೆಗಳನ್ನು ಪೂಜಿಸಿರಿ. ವಿನಾಯಕನನ್ನು ಅರ್ಚಿಸಿರಿ, ಅಷ್ಟತೀರ್ಥಗಳನ್ನು ಸನ್ಮನದಿಂದ ಆಚರಿಸಿ. ಸಂತೋಷಪೂರ್ವಕವಾಗಿ ತ್ರಿಕಾಲ ವಲ್ಲಿಯೂ ಆರತಿ ಮಾಡಿರಿ. ಈ ರೀತಿ ವರ್ತಿಸುವ ಭಕ್ತರೆಲ್ಲ ಇಚ್ಛಿತ ಫಲವನ್ನು ಹೊಂದುವರು." ಈ ಪ್ರಕಾರ ಗುರುಗಳು ಅಲ್ಲಿಗೆ ಬಂದಿರುವ ಭಕ್ತರಿಗೆಲ್ಲ ಬೋಧಿಸಿದರು. ಹಾಗು ಆಗಲೇ ಶ್ರೀಶೈಲಗಿರಿಗೆ ಹೊರಟು ನಡೆದರು. ಭಕ್ತರೆಲ್ಲರು ಉದ್ವಿಗ್ನ ಚಿತ್ತದಿಂದ ಗುರುಗಳನ್ನು ಕಳಿಸಿ ಹಿಂದಿರುಗಿ ಮಠಕ್ಕೆ ಬಂದರು. ಆಗ ಅವರೆಲ್ಲರು— 'ಸತ್ಯದಂತೆ ಶ್ರೀ ಗುರುಗಳು ಮಠದಲ್ಲಿಯು ತಮ್ಮ ಸ್ಥಾನದಲ್ಲಿ ಕುಳಿತಿರುವದನ್ನು ಕಂಡರು, ವಿಸ್ಮಯಪಟ್ಟರು. ಕೆಲ ನಿಮಿಷಗಳ ವರೆಗೆ ಅವರೆಲ್ಲರಿಗೂ ಗುರುವಿನ ಮೂರ್ತಸ್ವರೂಪವು ತೋರಿ ಮಾಯ ವಾಯಿತು! ಈ ಪ್ರಕಾರದ ದೃಶ್ಯದಿಂದ ಗುರುಗಳು ಯಾವಾಗಲೂ ಗುಪ್ತರೂಪದಿಂದ ಮಠದಲ್ಲಿ ಅವಾಸರಾ ಗಿರುವರೆಂದು ಎಲ್ಲರಿಗೂ ಮನದಟ್ಟಾಯಿತು,

ಶ್ರೀ ಗುರುಗಳು ತಮ್ಮ ಭಕ್ತರಿಗೆ ದೃಷ್ಟಾಂತ ತೋರಿಸಿದ ವೇಳೆಗೇ ಶ್ರೀಶೈಲಗಿರಿಗೆ ಬಂದರು.

ಅಲ್ಲಿಯ ಗಂಗಾತೀರದಲ್ಲಿ ಇಳಿದರು. ತಮ್ಮ ಶಿಷ್ಯರನ್ನು ಕರೆದು ಒಂದು ಪುಷ್ಪಾಸನವನ್ನು ಸಿದ್ಧಪಡಿಸಬೇಕೆಂದು ಅವರಿಗೆ ಆಜ್ಞೆಯನ್ನಿತ್ತರು. ಅದರಂತೆ ಅವರು ತರತರದ ಹೂಗಳಿಂದಲೂ ಬಾಳೆಯ ಎಲೆಗಳಿಂದಲೂ ಪುಷ್ಪಾಸನವನ್ನು ರಚಿಸಿದರು. ಆ ಮೇಲೆ ಅದನ್ನು ಗಂಗೆಯಲ್ಲಿ ಇರಿಸಿಕೊಂಡು ಗುರುಗಳನ್ನು ಅದನ್ನು ಆರೋಹಿಸಿದರು. ಹಾಗು ತಮ್ಮ ಶಿಷ್ಯರಿಗೆಲ್ಲ— 'ನೀವು ಆದಷ್ಟು ತೀವ್ರಗತಿಯಿಂದ ಹಿಂದಿರುಗಿ ಮನೆಗಳಿಗೆ ಹೋಗಿರಿ" ಎಂದು ಹೇಳಿದನಲ್ಲದೆ ಅವರ ಮುಖಾಂತರ ಭಕ್ತರಿಗೆಲ್ಲ ಸಂದೇಶಕೊಟ್ಟು ಇನ್ನು ನಡೆಯಿರಿ" ಎಂದು ತಾವು ಆರೋಹಿಸಿದ ಪುಷ್ಪಾಸನವನ್ನು ಪ್ರವಾಹದಲ್ಲಿ ಸಾಗಿಸಿದರು.

ಶ್ರೀ ಗುರುಗಳ ಈ ನಿರ್ಯಾಣವು ಬಹುಧಾನ್ಯ ಸಂವತ್ಸರದಲ್ಲಿ ಗುರುವು ಕನ್ಯಾರಾಶಿ ಸ್ಥಿತನಾಗಿರುವಾಗ ಕುಂಭ ಸಂಕ್ರಮಣದಲ್ಲಿ ಜರುಗಿತು, ಆಗ ಸೂರ್ಯನು ಉತ್ತರಗತಿಯಲ್ಲಿದ್ದನು, ಶಿಶಿರ ಋತುವಿನಲ್ಲಿಯ ಮಾಘ ಬಹುಳ ಪ್ರತಿಪದೆ ಶುಕ್ರವಾರದ ಪುಣ್ಯದಿನವಿದ್ದಿತು. ಈ ಮಂಗಲಕಾರಕ ದಿನದಲ್ಲಿಯೇ ಶ್ರೀಗುರುಗಳು ನಿಜಾನಂದ ಮಗ್ನರಾದರು.

ಗುರುಗಳು ಪುಷ್ಪಾಸನವನ್ನಾರೋಹಿಸಿ ಮುಂದೆ ತೆರಳುವ ಮೊದಲು ಶಿಷ್ಯರಿಗೆ— "ನಾವು ನಿಮಗೆ ಪುಷ್ಪಪ್ರಸಾದ ಕಳಿಸುವೆವು ನೀವು ಅವುಗಳನ್ನು ಸ್ವೀಕರಿಸಿ ಭಕ್ತಿಯಿಂದ ಆ ಪುಷ್ಪಗಳನ್ನು ಅರ್ಚಿಸಿರಿ." ಎಂದು ಅಪ್ಪಣೆ ಕೊಟ್ಟು ಮತ್ತೂ ಅವರನ್ನು ಕುರಿತು— "ನಾವು-ಗಾಯನ ರಸಿಕರು. ಗಾಯನ

ದಿಂದ ನಮ್ಮನ್ನು ಸ್ಮರಿಸಿ ಸಂತೋಷ ಪಡಿಸಿರಿ.'' ಈ ಪ್ರಕಾರ ಶಿಷ್ಯರಿಗೆ ಹೇಳಿ ಶ್ರೀ ಗುರುಗಳು ನಿಜ ಸ್ಥಾನಕ್ಕೆ ತೆರಳಿದರು. ಅವರು ಗಂಗೆಯಲ್ಲಿ ಗಮನಿಸುವದನ್ನು ಶಿಷ್ಯರು ತಮ್ಮ ದೃಷ್ಟಿ ಹರಿಯುವವರೆಗೂ ನೋಡಿ ಚಿಂತೆಯಲ್ಲಿ ಮುಳುಗಿದರು. ಕೆಲಹೊತ್ತು ಅಲ್ಲಿಯೇ ಗಂಗೆಯ ತಟದಲ್ಲಿ ಕುಳಿತರು.

ಬಳಿಕ ಕೆಲವು ನಿಮಿಷಗಳಲ್ಲಿ ಗಂಗೆಯ ಆಚೆಯ ತಟದಿಂದ ಒಬ್ಬ ಅಂಬಿಗನು ಬರಹತ್ತಿದನು, ಅವನು ಈಜುತ್ತ ದಂಡೆಯಮೇಲೆ ಕುಳಿತಿದ್ದ ಶಿಷ್ಯರ ಬಳಿಗೇ ಬಂದನು. ಶ್ರೀ ಗುರುವಿರಹದ ಚಿಂತೆಯಲ್ಲಿ ಕುಳಿತ ಅವರನ್ನು ನೋಡಿ ಅಂಬಿಗನು— "ನಾನು ಗಂಗೆಯ ಮೇಲ್ತುದಿಯಿಂದ ಬರುವಾಗ ಗುರುಗಳನ್ನು ಕಂಡೆನು. ಆ ಯತಿಗಳು ಸನ್ಯಾಸಿವೇಷದಿಂದ ಕರದಲ್ಲಿ ದಂಡಕಧರಿಸಿದ್ದರು ತಾವು ನೃಸಿಂಹ ಸರಸ್ವತಿ' ಗಳು ಎಂಬ ನಾಮವನ್ನು ನನಗೆ ತಿಳಿಸಿ ನಿಮಗೆ ಆಜ್ಞಾಪಿಸುವದಕ್ಕೆಂದು ಸಂದೇಶವನ್ನು ನನ್ನ ಮುಖಾಂತರ ತಿಳಿಸಿರುವರು. ಅವರ ಸಂದೇಶವೇನಂದರೆ— ''ನಾವು ಕರ್ದಳೀವನಕ್ಕೆ ಹೋಗುವೆವು ಆದರೂ ಸತತವೂ ಗಾಣಗಾಪುರದಲ್ಲಿಯೇ ಇರುವೆವು'' ಇದೇ ಆ ಗುರುಗಳು ನಿಮಗೆ ಕಳಿಸಿದ ದಿವ್ಯ ಸಂದೇಶವು'' ಎಂದು ಅಂಬಿಗನು ಆ ಶಿಷ್ಯರಿಗೆ ತಿಳಿಸಿದನು. ಆ ಗುರುಗಳು ಬಂಗಾರದ ಪಾದುಕೆಗಳಿಂದ ಸುಶೋಭಿತರಾಗಿದ್ದರು, ಮತ್ತು ಅವರು ನಿಮಗೆ ತಿಳಿಸಿರುವದೇನೆಂದರೆ— ''ನೀವು ನಿಮ್ಮ ನಿಮ್ಮ ಸ್ಥಾನಗಳಿಗೆ ಹೋಗಿರಿ ವಂಶಪರಂಪರೆಯಾಗಿ ಸುಖದಿಂದ ಇದ್ದುಬಿಡಿರಿ, ನಮ್ಮಮೇಲಿರುವ ನಿಮ್ಮ ಭಕ್ತಿಯು ದೃಢವಿರಲಿ» ಎಂದು ಹೇಳಿ ಅಂಬಿಗನು— ''ಇದೀಗಲೇ ಗುರುಗಳಿಂದ ನಿಮಗೆ ಪ್ರಸಾದ ಪುಷ್ಪಗಳು ಗಂಗೆಯ ದ್ವಾರ

ದಿಂದ ಬರುವವು: ಅವುಗಳನ್ನು ನಿಮಗೆ ತೆಗೆದುಕೊಡುವದಕ್ಕೆ ನನಗೆ ಹೇಳಿರುವರು ನಿಮಗೆ ಅವುಗಳನ್ನು ತಂದುಕೊಡುವೆನು ಅದುವರೆಗೆ ನಾನು ಇಲ್ಲೇ ಇರುವೆನು'' ಎಂದು ಅಂಬಿಗನು ಹೇಳುತ್ತಿರುವಷ್ಟರಲ್ಲಿಯೇ ಗಂಗೆಯ ದ್ವಾರದಿಂದ ನಾಲ್ಕು ಹೂಗಳು ಅವರೆಲ್ಲರು ಕುಳಿತಲ್ಲಿಗೆ ತೇಲುತ್ತ ಬಂದವು ಕೂಡಲೆ ಅಂಬಿಗನು ಈಜು ಬಿದ್ದು ಹೋಗಿ ಅವುಗಳನ್ನು ತಂದು ಆ ಶಿಷ್ಯರಿಗೆ ಕೊಟ್ಟನು ಶ್ರೀ ಗುರುಗಳ ಮುಖ್ಯ ಶಿಷ್ಯರು ಆ ಪುಷ್ಪಗಳನ್ನು ಸ್ವೀಕರಿಸಿದರು. 'ಪುಷ್ಪಸ್ವೀಕರಿಸಿದ ಶಿಷ್ಯರಾರು?' ಎಂದು ನಾಮಧಾರಕನು ಕೇಳಲು ಸಿದ್ಧಮುನಿಯು— ಸಾಯಂದೇವಸಾಕರೆ, ಕವೀಶ್ವರನಂದಿ, ನರಹರಿ. ಹಾಗು ನಾನೊಬ್ಬನು ನಾವು ನಾಲ್ವರೂ ಗುರುಗಳ ಜೊತೆಗೆ ಹೋದವರು, ಪ್ರಸಾದವೆಂದು ಬಂದ ನಾಲ್ಕು ಪುಷ್ಪಗಳನ್ನು ಒಬ್ಬೊಬ್ಬರು ಒಂದೊಂದು ಪುಷ್ಪವನ್ನು ಸ್ವೀಕರಿಸಿವೆವು ನಾಮಧಾರಕಾ ! ಆಗ ನನಗೆ ದೊರೆತ ಪ್ರಸಾದ ಪುಷ್ಪವು ಇದೇನೋಡು" ಎಂದು ಸಿದ್ಧಮುನಿಯು ತಾನು ಮಸ್ತಕದ ಮೇಲೆ ಧರಿಸಿದ್ದ ಆ ಪುಷ್ಪವನ್ನು ತೆಗೆದು ನಾಮಧಾರಕನಿಗೆ ತೋರಿಸಿದನು. ನಾಮಧಾರಕನು— "ಸ್ವಾಮಿ! ಗುರುಗಳಿಗೆ ನೀವೇ ನಾಲ್ವರು ಶಿಷ್ಯರೇ?" ಎಂದು ಕೇಳಲು ಸಿದ್ಧಮುನಿಯು— 'ನಾಮಧಾರಕ ! ಶ್ರೀ ಗುರುಗಳ ಶಿಷ್ಯವರ್ಗವು ಬಲು ದೊಡ್ಡದು. ಅವರಲ್ಲಿ ಪ್ರಾಮುಖ್ಯರೆಂದರೆ— ಕೃಷ್ಣಸರಸ್ವತಿ, ಬಾಲಸರಸ್ವತಿ, ಉಪೇಂದ್ರ ಮಾಧವ ಸರಸ್ವತಿ, ಇವರೆಲ್ಲರಿಗೆ ಗುರುಗಳು ಸನ್ಯಾಸ ದೀಕ್ಷೆಕೊಟ್ಟು ತೀರ್ಥಾಟನಕ್ಕೆ ಕಳಿಸಿದರು. ಎಷ್ಟೋ ಶಿಷ್ಯರು ಗೃಹಸ್ಥ ಧರ್ಮದಿಂದ ಸ್ವಗ್ರಾಮಗಳಲ್ಲಿ ವಾಸವಾದರು, ನಾವೇ ನಾಲ್ವರು ಶಿಷ್ಯರು ಗುರುಗಳೊಳನೆ ಶ್ರೀಶೈಲಕ್ಕೆ ಹೋದವರು'' ಎಂದು ಹೇಳಿದನು.

ಆಮೇಲೆ ನಾಮಧಾರಕನು ಸಿದ್ಧಮುನಿಯ ಬಳಿಯಲ್ಲಿದ್ದ ಶ್ರೀ ಗುರುಚರಿತ್ರಕ್ಕೆ ವಂದಿಸಿ—“ಸ್ವಾಮಿ ! ಈ ಗ್ರಂಥಮಹಿಮೆಯೇನು?'' ಎಂದು ಕೇಳಲು ಸಿದ್ಧಮುನಿಯು— ''ನಾಮಧಾರಕನೆ! ಶ್ರೀ ಗುರುಚರಿತ್ರೆಯು ಕಾಮಧೇನು ಸದೃಶವಾಗಿದೆ. ದುಃಖದಾರಿದ್ರ್ಯಗಳು ದೂರಾಗುವವು, ಇದರ ಶ್ರವಣ ಕೀರ್ತನೆಗಳಿಂದ ಪಾವಿತ್ರ್ಯತೆಯುಂಟಾಗುವದು, ಪುತ್ರ–ಪೌತ್ರಾದಿಗಳಿಂದ ಸುಖವು ವರ್ಧಿಸುವದು, ಚತುರ್ವಿಧಮುಕ್ತಿಯು ಲಭಿಸುವದು, ಈ ಗ್ರಂಥವು ಪ್ರತ್ಯಕ್ಷ ಫಲಧಾಯಕವಾಗಿರುವದು, ಈ ಗ್ರಂಥ ಬರೆದರೆ ಸರ್ವಸಿದ್ಧಿಗಳ ಪ್ರಾಪ್ತಿಯಾಗುವದು'' ಎಂದು ಸಿದ್ಧಮುನಿಯು ಶ್ರೀ ಗುರುಚರಿತ್ರೆಯ ಮಹತ್ವವನ್ನು ವರ್ಣಿಸಿದನು.

—೦—

# ೫೨ನೆಯ ಅಧ್ಯಾಯ

ಶ್ರೀ ಗಣೇಶ–ಶಾರದಾ–ಗುರುಭ್ಯೋನಮಃ॥ ನಾಮಧಾರಕನು— “ಸ್ವಾಮಿ ! ಶ್ರೀ ಗುರುಗಳ ಶ್ರೀಶೈಲ ಗಮನದ ನಂತರ ವರ್ತಿಸಿದ ವೃತ್ತಾಂತವೇನು? ” ಎಂದು ಕೇಳಲು ಸಿದ್ಧಮುನಿಯು—

“ನಾಮಧಾರಕಾ ! ಶ್ರೀ ಗುರು ಮಹಿಮೆಯು ಅಗಮ್ಯವಾದುದು. ಶ್ರೀ ಗುರುಗಳು ಶ್ರೀಶೈಲ

ಗಮನಕ್ಕೆ ಹೊರಡುವ ಮೊದಲು ಭಕ್ತರು ತಳಮಳಿಸಿದ ವರ್ಣನೆ ಈ ಮೊದಲು ಹೇಳಿದೆ. ಶ್ರೀ ಗುರುಗಳಿರುವಾಗ ಗಾಣಗಾಪುರವು ವೈಕುಂಠಪುರವಾಗಿದ್ದಿತು. ಅವರ ನಿರ್ಗಮನದ ನಂತರ ದೀಪವಿಲ್ಲದ ಮನೆಯಂತಾಯಿತು. ಶ್ರೀ ಗುರುವೇ ತಾಯ್ತಂದೆ, ಬಂಧುಬಳಗ, ಇಷ್ಟಮಿತ್ರ ಎಂದು ಭಾವಿಸಿ ಕಾಲಕ್ರಮಿಸುತ್ತಿದ್ದ ಭಕ್ತರ ಸ್ಥಿತಿಯು ಪರದೇಶಿ ಮಕ್ಕಳ ಗತಿಯಂತಾಯಿತು. ಶ್ರೀ ಗುರುಗಳು ನಿರ್ಗಮನ ಮಾಡುವ ಮೊದಲು ಎಲ್ಲರಿಗೂ ಸಾಂತ್ವನಪರ ಬೋಧೆಮಾಡಿದ್ದರು. ತಮ್ಮ ಗುಪ್ತವಾಸದ ರಹಸ್ಯವನ್ನು ಹೇಳಿದ್ದರು. ಮತ್ತು ನಿರ್ಗಮನದ ನಂತರ ಮಠದಲ್ಲಿ ತಮ್ಮ ಸ್ಥಾನದಲ್ಲಿ ಕುಳಿತ ದೃಷ್ಟಾಂತವನ್ನೂ ತೋರಿಸಿದರು. ಇಷ್ಟಾದ ಮೇಲೆಯೇ ಅವರು ನಿರ್ಯಾಣಬಳಿಸಿದರು.

ಶ್ರೀಶೈಲ ತಲುಪಿದ ದಿವಸ ಅವರು ಪಾತಾಳಗಂಗೆಯಲ್ಲಿ ಉಳಿದುಕೊಂಡರು. ಆಗ ಶಿಷ್ಯರು ಪುಷ್ಪಾಸನ ರಚಿಸಿರುವದನ್ನು ಆರೋಹಿಸಿ ಗಂಗೆಯಲ್ಲಿ ಸಾಗಿದರು. ಮುಂದೆ ಅದೃಶ್ಯರಾದರು. ನಾಮಧಾರಕ ಈ ಎಲ್ಲವನ್ನು ಈ ಮೊದಲೇ ನಿನಗೆ ಹೇಳಿರುವೆನು" ಎಂದು ಸಿದ್ಧಮುನಿಯು ನಾಮಧಾರಕನಿಗೆ ಹೇಳಿದನು.

—೦—

# ೫೩ನೆಯ ಅಧ್ಯಾಯ

ಶ್ರೀ ಗಣೇಶ-ಶಾರದಾ-ಗುರುಭ್ಯೋನಮಃ॥ ಶ್ರೀ ಗುರುದೇವ ದತ್ತಾತ್ರೇಯ ಚರಣಾರವಿಂದಾಭ್ಯಾಂ ನಮಃ॥

ಶ್ರೀ ಗುರು ಚರಿತ್ರೆಯನ್ನು ಶ್ರವಣ ಮಾಡಿ ನಾಮಧಾರಕನ ಮನವು ಬ್ರಹ್ಮಾನಂದದಲ್ಲಿ ನಿಮಗ್ನವಾಯಿತು. ಅವನ ಮೈಯೆಲ್ಲೆಲ್ಲ ಬೆವರು ಸುರಿದು ರೋಮಾಂಚನಗಳು ಉದ್ಭವಿಸಿದವು. ಕಂಠವು ಸದ್ಗದಿತವಾಯಿತು. ಅಂಗಾಂಗಗಳು ನಡುಗಹತ್ತಿದವು. ಕಣ್ಣುಗಳ ಹೊಳಪು ಹೆಚ್ಚಾಯಿತು. ಪ್ರೇಮಾಶ್ರುಗಳು ಧಾರೆಗಟ್ಟಿದವು. ಸಮಾಧಿಸುಖಕ್ಕೀಡಾದ ಅವನು ಮಾತಾಡದಾದನು. ದೇಹವು ಸ್ವಲ್ಪವೂ ಸಹ ಅಲುಗಾಡದಾಯಿತು. ಅವನಲ್ಲಿ ಸಾತ್ವಿಕ ಅಷ್ಟಭಾವಗಳು ಉತ್ಪನ್ನವಾದವು.

ನಾಮಧಾರಕನಿಗಾದ ಈ ಸ್ಥಿತಿಯನ್ನು ನೋಡಿ ಸಿದ್ಧಮುನಿಯು ಆನಂದ ಹೊಂದಿದನು. ಅವನು— "ಈತನಿಗೆ ಸಮಾಧಿಸುಖ ಲಭಿಸಿತು. ಇನ್ನು ಇವನನ್ನು ಇದೇ ಸ್ಥಿತಿಯಲ್ಲಿ ಇರಗೊಡದೆ ಲೋಕೋಪಕಾರಕ್ಕಾಗಿ ಶುದ್ಧಿಯ ಮೇಲೆ ಬರಮಾಡುವದು ಒಳಿತು" ಎಂದು ವಿಚಾರಿಸಿ— ಎಲೈ ಬಾಲಕನೆ! ಶಿಷ್ಯೋತ್ತಮನೆ! ಎಚ್ಚರಾಗು" ಎಂದು ಅವನ ಮೈಮೇಲೆ ಕೈ ಆಡಿಸಿ ಪ್ರೇಮಭಾವದಿಂದ ಆಲಿಂಗಿಸಿದನು.

ಮತ್ತು ಅವನು— “ನಾಮಧಾರಕನೆ ! ನೀನು ಭವಸಾಗರ ದಾಟಿದಿ, ನೀನು ಹೀಗೆಯೇ ಸಮಾಧಿಸುಖದಲ್ಲಿ ಕುಳಿತುಬಿಟ್ಟರೆ ಜ್ಞಾನವು ನಿನ್ನ ಹೊಟ್ಟೆಯಲ್ಲಿಯೇ ಉಳಿಯುವದು. ಅಂದಮೇಲೆ ಲೋಕೋದ್ಧಾರ ವೆಂತಾಗುವದು? ಹೀಗೆ ಕೂಡ್ರಬೇಡ. ಶ್ರೀ ಗುರುಚರಣದಲ್ಲಿ ನಿನ್ನ ದೃಢವಾದ ಅಂತಃಕರಣವಿರಲಿ, ಶಾಸ್ತ್ರಾಧಾರವನ್ನನುಸರಿಸಿ ನಿನ್ನ ಬಾಹ್ಯ ದೇಹದ ಸ್ಥಿತಿಯಿರಲಿ, ನೀನು ಗುರುಚರಿತ್ರೆಯು ಶ್ರವಣ ಮಾಡುವಾಗ ಕೇಳಿದ. ಪ್ರಶ್ನೆಗಳಿಂದ ನನಗೆ ಶ್ರೀ ಗುರುಗಳ ಅಮೃತವಾಣಿಗಳು ಸ್ಮರಣೆಗೆ ಬಂದವು. ನೀನು ಅವುಗಳನ್ನು ಏಕಾಗ್ರತೆಯಿಂದ ಶ್ರವಣ ಮಾಡಿದಿ. ಅವನ್ನೇ ಇನ್ನು ಮೇಲೆ ನೀನು ವಿಸ್ತರಿಸು.” ಈ ಪ್ರಕಾರ ಸಿದ್ಧಮುನಿಯು ಪರಿಪರಿಯಿಂದ ಆ ನಾಮಧಾರಕನಿಗೆ ಹೇಳಿದರೂ ಸಮಾಧಿಸುಖದಲ್ಲಿ ಮಗ್ನನಾಗಿದ್ದ ಅವನು ತನ್ನ ಕಣ್ಣುಗಳನ್ನು ತೆರೆದು ಕೈಮುಗಿದುಕೊಂಡು ಸಿದ್ಧಮುನಿಯ ಎದುರಿನಲ್ಲಿ ಎದ್ದು ನಿಂತನು. ಆ ಗುರುವನ್ನು ಪ್ರಾರ್ಥಿಸಿದನು. ಹಾಗು ನಮಸ್ಕರಿಸಿ ನಿಲ್ಲಲು ಸಿದ್ಧಮುನಿಯು— “ನಾಮಧಾರಕ ! ಇನ್ನು ನಿನಗೆ ಗುರು ಚರಿತ್ರೆಯ ಸಪ್ತಾಹವಿಧಿಯನ್ನು ಹೇಳುವೆನು ಕೇಳು.

ನಾಮಧಾರಕನೆ ! ಪವಿತ್ರ ಹೃದಯದಿಂದ ಶ್ರೀ ಗುರು ಚರಿತ್ರೆಯನ್ನು ಸದಾವಕಾಲವೂ ಓದಬೇಕು. ಶುಚಿರ್ಭೂತನಾಗಿ ಶಾಸ್ತ್ರರೀತಿಯಿಂದ ಸಪ್ತಾಹಮಾಡಲು ಬಹಳ ಪುಣ್ಯಲಭಿಸುವದು. ಶುಭ ದಿನ ಶುಭತಿಥಿಗಳನ್ನು ಅರಿತುಕೊಂಡು ಸ್ನಾನ–ಸಂಧ್ಯೆಗಳನ್ನು ತೀರಿಸಿ ಗ್ರಂಥಪಾರಾಯಣ ಮಾಡಬೇಕು. ಆ ಸ್ಥಾನವು ಮೊದಲೇ ಶುದ್ಧಗೊಳಿಸಲ್ಪಟ್ಟಿರಬೇಕು. ನಂತರ ದೇಶ ಕಾಲಾದಿಗಳನ್ನು ಉಚ್ಚರಿಸಿ ಸಂಕಲ್ಪ

ಮಾಡಬೇಕು. ಗ್ರಂಥರೂಪಿನ ಶ್ರೀ ಗುರುವಿನ ಪೂಜೆ ಮಾಡಬೇಕು. ಆ ಮೇಲೆ ಬ್ರಾಹ್ಮಣ ಪೂಜೆ ಮಾಡಬೇಕು. ನಂತರ—

ಸಪ್ತಾಹದ ಮೊದಲನೆಯ ದಿನದಿಂದ ಪಾರಾಯಣಕ್ಕಾಗಿ ಕುಳಿತುಕೊಳ್ಳುವ ಒಂದೇ ಸ್ಥಾನವನ್ನು ಗೊತ್ತುಮಾಡಬೇಕು. ಇನ್ನಿತರ ಭಾಷಣಗಳನ್ನಾಡದೆ ಮೌನತ್ವದಿಂದಿರಬೇಕು. ಯಾವ ವಿಕಾರಗಳಿಗೂ ಆಸ್ಪದಕೊಡಬಾರದು, ದೀಪವನ್ನು ಪ್ರಜ್ವಲಿಸಬೇಕು. ದೇವ-ಗುರು-ಹಿರಿಯರಿಗೆ ನಮಸ್ಕರಿಸಿ ಪೂರ್ವ ಇಲ್ಲವೆ ಉತ್ತರ ಮುಖವಾಗಿ ಕುಳಿತು ಗ್ರಂಥವಾಚನಕ್ಕೆ ಆರಂಭಿಸಬೇಕು. ಮೊದಲನೆಯ ದಿನ ಒಂಭತ್ತು ಅಧ್ಯಾಯ, ಎರಡನೆಯ ದಿನ ಹತ್ತರಿಂದ ಇಪ್ಪತ್ತೊಂದನೆಯ, ಮೂರನೆಯ ದಿನ ಇಪ್ಪತ್ತೆರಡರಿಂದ ಇಪ್ಪತ್ತೊಂಭತ್ತನೆಯ, ನಾಲ್ಕನೆಯ ದಿನ ಮೂವತ್ತರಿಂದ ಮೂವತ್ತೈದನೆಯ, ಐದನೆಯ ದಿನ ಮೂವತ್ತಾರರಿಂದ ಮೂವತ್ತೆಂಟನೆಯ, ಆರನೆಯ ದಿನ ಮೂವತ್ತೊಂಭತ್ತರಿಂದ ನಾಲ್ವತ್ತೆರಡನೆಯ ಈ ಅಧ್ಯಾಯಗಳನ್ನು ಮುಗಿಸಿ ಏಳನೆಯ ದಿನ ನಾಲ್ವತ್ತ ಮೂರರಿಂದ ಮುಕ್ತಾಯದ ವರೆಗೆ ಓದಿ ಪಾರಾಯಣ ಮುಗಿಸಬೇಕು.

ದಿನಾಲು ಓದುವದು ತೀರಿದ ಮೇಲೆ ಉತ್ತರಾಂಗ ಪೂಜೆ ಮಾಡಬೇಕು. ನಂತರ ಶ್ರೀ ಗುರುಗಳಿಗೆ ವಂದಿಸಿ ಫಲಹಾರ ಮಾಡಬೇಕು. ಏಳೂ ದಿನ ಹೀಗೆಯೇ ಆಚರಿಸಬೇಕು. ದಿನಾಲು ರಾತ್ರಿ ಭೂಮಿಯ ಮೇಲೆ ಮಲಗಬೇಕು. ಒಟ್ಟಿನ ಮೇಲೆ ಶಾಸ್ತ್ರದಂತೆ ಶುದ್ಧವಿರಬೇಕು.

ಹೀಗೆ ಏಳು ದಿನಗಳ ಸಪ್ತಾಹದಲ್ಲಿ ನಿತ್ಯವೂ ಬ್ರಾಹ್ಮಣ-ಸುವಾಸಿನಿಯರ ಭೋಜನವಾಗಬೇಕು. ಶಕ್ತ್ಯಾನುಸಾರ ದಕ್ಷಿಣೆಕೊಡಬೇಕು.

ನಾಮಧಾರಕ! ಈ ಪ್ರಕಾರ ವಿಧಿಯುಕ್ತ ಸಪ್ತಾಹ ಪಾರಾಯಣ ಮಾಡಲು ಶ್ರೀ ಗುರು ದರ್ಶನವಾಗುವದು, ಭೂತ-ಪ್ರೇತ-ಪಿಶಾಚಿಗಳ ಪೀಡೆ ದೂರಾಗುವದು. ನಿರಂತರ ಸುಖವೊದಗುವದು.

ಈ ಪ್ರಕಾರ ಸಿದ್ಧಮುನಿಯು ವಾಕ್ಯ ಕೇಳಿ ನಾಮಧಾರಕನು ಅವನ ಪಾದಗಳಿಗೆ ನಮಸ್ಕರಿಸಿದನು. ಸಿದ್ಧಮುನಿಯು ಆ ಬಾಲಕನ ಆಶೆಗಳನ್ನೆಲ್ಲ ಪೂರೈಸಿ ಅವನನ್ನು ಧನ್ಯತರನನ್ನಾಗಿ ಮಾಡಿದನು.

ಇತಿ ಶ್ರೀ ರಸ್ತು.

ಶ್ರೀ ಗುರುದೇವ ದತ್ತ.

—೦—

—: ಓಂ. ಶಾಂತಿಃ ಶಾಂತಿಃ ಶಾಂತಿಃ :—